ದೇಸಿ ಪುಸ್ತಕ - 76

OSCAR
WILDE



# THE PICTURE OF DORIAN GRAY

# ಡೋರಿಯನ್ ಗ್ರೇನ ಭಾವಚಿತ್ರ

ಕನ್ನಡಕ್ಕೆ ವಿಜಯಾ ಸುಬ್ಬರಾಜ್

OSCAR WILDE

# THE PICTURE OF DORIAN GRAY

# ಡೋರಿಯನ್ ಗ್ರೇನ ಭಾವ ಚಿತ್ರ

ಕನ್ನಡಕ್ಕೆ

ವಿಜಯಾ ಸುಬ್ಬರಾಜ್

ಪುಸ್ತಕ

ವಿಜಯನಗರ, ಬೆಂಗಳೂರು ೫೬೦೦೪೦

ಡೋರಿಯನ್ ಗ್ರೇನ ಭಾವ ಚಿತ್ರ

**THE PICTURE OF DORIAN GRAY**

**BY ; OSCAR WILDE**

**This Book Originally published in 20 June 1890, In English**

**Philosophical fiction**

**TRANSLATED INTO KANNADA BY ; Dr. Vijaya Subbaraj**
No.51, 1st A Cross, 35 th Main
Banagiri Nagara, BSK 3rd Stage
Bengaluru 560085,
Mob - 99869 28876, Res : 080-26793219

**Published by**
Asha Nagesh
**DESI PUSTAKA**
# 121, 13th Main Road, M.C. Layout
Vijayanagara, Bengaluru - 560 040.
Ph : 080 - 23153558; Mob: 98450 96668
E-mail: desipustaka@gmail.com

First Impression: 2017
Page: xvi + 168 = 184
Book Size : 1/4 Crown (23 x 15.5)
**(International Standard Book Size)**
**₹ : 160 /-**

Paper used: 70 Gsm JK Book Print
**ISBN: 978-93-81577-59-2**
Dtp : Anitha
Cover Page : **G . Arunkumar**

Printed at :
**POORNIMA PRINTERS**
Vijayanagara, Bengalore-560 040
Ph: 080-23351210

## ಆಸ್ಕರ್ ವೈಲ್ಡ್

1854ರಿಂದ 1900ರ ಅವಧಿಯಲ್ಲಿ ಜೀವಿಸಿದ್ದ ಆಸ್ಕರ್ ವೈಲ್ಡ್. ತನ್ನ ವೈವಿಧ್ಯಮಯ ಬರಹಗಳಿಂದ ಮತ್ತು ವಿಚಿತ್ರ, ವಿಶಿಷ್ಟ ವ್ಯಕ್ತಿತ್ವದಿಂದ ಲಂಡನ್ನಿನ ಬಹು ಜನಪ್ರಿಯ ಲೇಖಕನಾಗಿ ಗುರುತಿಸಿಕೊಂಡಿದ್ದ. ಕತೆ, ಕಾದಂಬರಿ, ನಾಟಕ, ಪ್ರಬಂಧ, ಕಾವ್ಯ, ಹೀಗೆ ಎಲ್ಲಾ ಪ್ರಕಾರಗಳಲ್ಲಿಯೂ ಪ್ರಯೋಗಶೀಲ ಬರಹನಾಗಿದ್ದ.

ಆಂಗ್ಲೋ ಐರಿಷ್ ಮೂಲದ ವಿಲಿಯಂ ವೈಲ್ಡ್ ಮತ್ತು ಜೇನ್ ವೈಲ್ಡ್ ದಂಪತಿಗಳಿಗೆ ಹುಟ್ಟಿದ ಮೂವರು ಮಕ್ಕಳಲ್ಲಿ ಆಸ್ಕರ್ ವೈಲ್ಡ್ ಎರಡನೆ ಮಗುವಾಗಿ 16ನೇ ಅಕ್ಟೋಬರ್ 1854ರಲ್ಲಿ ಜನಿಸಿದ. ತಂದೆ ವಿಲಿಯಂ ವೈಲ್ಡ್ ಐರ್ಲ್ಯಾಂಡ್‌ನ ಪ್ರಸಿದ್ಧ ಕಣ್ಣು-ಕಿವಿಯ ಶಸ್ತ್ರಚಿಕಿತ್ಸಕನಾಗಿದ್ದ. ತಾಯಿ ಜೇನ್ ವೈಲ್ಡ್, ಸ್ಪೆರಾಂಜ್ ಹೆಸರಿನಲ್ಲಿ ಕವಿತೆಗಳನ್ನು ಬರೆಯುತ್ತಿದ್ದಳು. ಅಲ್ಲದೆ ಆಸ್ಕರ್ ವೈಲ್ಡ್‌ನಲ್ಲಿ ಕಾವ್ಯದ ಬಗ್ಗೆ ಆಸಕ್ತಿ ಮೂಡಿಸುತ್ತಿದ್ದಳು. ಸಮಯಾವಕಾಶವಾದಾಗಲೆಲ್ಲ ಮಕ್ಕಳ ಮುಂದೆ ಕವಿತೆಗಳನ್ನು ಓದಿ ವಿವರಿಸುತ್ತಿದ್ದಳು. ತಂದೆ ಶಸ್ತ್ರಚಿಕಿತ್ಸಕನಾಗಿರುವುದರ ಜೊತೆಗೆ ಐರಿಷ್ ಪುರಾತತ್ವ ಶಾಸ್ತ್ರ ಮತ್ತು ಜಾನಪದದ ಬಗ್ಗೆ ಗ್ರಂಥಗಳನ್ನೂ ರಚಿಸಿದ್ದ. ವಿಲಿಯಂ ವೈಲ್ಡ್ ವೈದ್ಯಕೀಯ ಸೇವೆಗಳನ್ನು ಗುರುತಿಸಿ ನೈಟ್ ಪದವಿಯನ್ನೂ ನೀಡಲಾಗಿತ್ತು.

ಆಸ್ಕರ್ ವೈಲ್ಡ್‌ನ ಆರಂಭಿಕ ಶಿಕ್ಷಣ ಮನೆಯಲ್ಲಿಯೇ ನಡೆದಿತ್ತು. ಆಗ ವೈಲ್ಡ್‌ಗೆ 9 ವರ್ಷ. ಸಾಂಪ್ರದಾಯಿಕ ಶಿಕ್ಷಣದಲ್ಲಿ ಅವನಿಗೆ ಅಷ್ಟಾಗಿ ಆಸಕ್ತಿ ಇರಲಿಲ್ಲ. ಆದರೆ ಶ್ರೇಷ್ಠವಾದ ಪ್ರಾಚೀನ ಗ್ರಂಥಗಳಲ್ಲಿ ಪ್ರಾರಂಭದಲ್ಲಿಯೇ ಅಭಿರುಚಿ ಮೂಡಿಸಿಕೊಂಡಿದ್ದ.

ದೊಡ್ಡವನಾದ ಮೇಲೆ ಡಬ್ಲಿನ್ ಮತ್ತು ಆಕ್ಸ್‌ಫರ್ಡ್ ಯೂನಿವರ್ಸಿಟಿಯಲ್ಲಿ ಓದುವಾಗ ಇಂಥ ಪ್ರಾಚೀನ ಗ್ರಂಥಗಳ ಬಗ್ಗೆ ಮತ್ತಷ್ಟು ಆಕರ್ಷಿತನಾದ. ಅಲ್ಲಿನ ಪ್ರೊಫೆಸರ್ ಮಹಾಫಿಯರ್, ಗ್ರೀಕ್ ಸಂಸ್ಕೃತಿ ಸಂಬಂಧ ವಿಚಾರಗಳಿಂದ ಬಹಳವಾಗಿ ಪ್ರೇರಿತನಾದ. ಸಾಮಾಜಿಕ ಮೌಲ್ಯಗಳ ಬಗ್ಗೆ ಪ್ರೀತಿ ಬೆಳೆಸಿಕೊಂಡ. ಶುದ್ಧವಾದ ಬದುಕನ್ನು ರೂಡಿಸಿಕೊಳ್ಳತೊಡಗಿದ. ಅವನ ಪರಿಶುದ್ಧ

ನಡೆನುಡಿಗಳಿಗಾಗಿ ಅಪಾರ ಮೆಚ್ಚುಗೆಯ ಜೊತೆಗೆ ಬರ್ಕ್ಲಿ ಸ್ವರ್ಣ ಪದಕವೂ ದೊರೆಯಿತು. ಪ್ರಾಚೀನ ಗ್ರೀಕ್ ಸಂಸ್ಕೃತಿ, ಕಾವ್ಯಗಳ ಬಗೆಗಿನ ಆಸಕ್ತಿ, ಅಧ್ಯಯನ ಶೀಲತೆಗಳನ್ನು ಗುರುತಿಸಿ ಅವನಿಗೆ ಕ್ಲಾಸಿಕಲ್ ಸ್ಕಾಲರ್‌ಶಿಪ್ ಅನ್ನು ನೀಡಲಾಯಿತು. ಇದರಿಂದಾಗಿ ಆಕ್ಸ್‌ಫರ್ಡ್‌ನ ಮ್ಯಾಗ್ಡಲೆನ್ ಕಾಲೇಜಿಗೆ ಪ್ರವೇಶ ಪಡೆಯಲು ಸಾಧ್ಯವಾಯಿತು.

ಅವನ ಅಧ್ಯಯನ ಶೀಲತೆ, ತೀಕ್ಷ್ಣಮತಿ, ಮಾತಿನ ಚಾತುರ್ಯ, ಅದ್ಭುತ ಭಾಷಣ ಕಲೆ, ಮುಂತಾದವುಗಳಿಂದ ಅಪಾರ ಜನಪ್ರಿಯತೆಯನ್ನು ಪಡೆದ. ಭರವಸೆಯ ಕವಿ. ಅನನ್ಯ ಗದ್ಯ ಬರಹಗಾರ ಎಂದೆಲ್ಲ ಬಿರುದುಗಳನ್ನು ಹೊತ್ತು ಆಕ್ಸ್‌ಫರ್ಡ್‌ನಿಂದ ಹೊರಬಂದ.

ಸಮಾಜದಲ್ಲಿ ಅತ್ಯಂತ ಪ್ರತಿಷ್ಠಿತ ವ್ಯಕ್ತಿಗಳ, ಶ್ರೀಮಂತ ವರ್ಗದವರ ಪರಿಚಯವಾಯಿತು. ಜೊತೆಗೆ ದೊಡ್ಡ ದೊಡ್ಡ ಲೇಖಕರು ಮತ್ತು ವಿದ್ವಾಂಸರೊಂದಿಗೆ ಸ್ನೇಹ ಬೆಳೆಯಿತು. ವಿಲ್ಲಿಯಮ್ ಮೋರಿಸ್, ಹೆನ್ರಿ ಇರ್ವಿಂಗ್, ಎಲ್ಲೆನ್‌ಟೆರ್ರಿ, ಲಿಲಿಲಾಂಗ್‌ಟ್ರೈ ಮೊದಲಾದವರ ಒಡನಾಟಗಳಿಂದ, ಸಮಾಜದಲ್ಲಿ ಸಾರ್ವಜನಿಕ ಬದುಕಿನಲ್ಲಿ, ಪ್ರತಿಷ್ಠೆ, ಗೌರವಗಳಿಗೆ ಪಾತ್ರನಾದ. ದೊಡ್ಡ ದೊಡ್ಡ ಸಭೆ, ಸಮಾರಂಭ, ಪಾರ್ಟಿಗಳಿಗೆ ಆಹ್ವಾನಿತನಾಗುತ್ತಿದ್ದ. ಆದರೆ ಆಗ ವೈಲ್ಡ್‌ನ ಆರ್ಥಿಕ ಸ್ಥಿತಿ ಉತ್ತಮವಾಗಿರಲಿಲ್ಲ. ಬರುವ ಆದಾಯದಿಂದ ಅಂತಹ ಪ್ರತಿಷ್ಠಿತ ವಲಯದಲ್ಲಿ, ತನ್ನ ಘನತೆ ಗೌರವಗಳಿಗೆ ತಕ್ಕಂತೆ ಬದುಕು ಸಾಗಿಸುವುದು ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಆರ್ಥಿಕವಾಗಿ ಬಲಗೊಳ್ಳಲು ಬೇರೆ ಬೇರೆ ದಾರಿಗಳನ್ನು ಕಂಡುಕೊಳ್ಳಬೇಕಿತ್ತು. ಅದೇ ಅವಧಿಯಲ್ಲಿ ಮಾರೋರ್, ಮಿಲ್ಟನ್, ಕೀಟ್ಸ್, ಆರ್ನಾಲ್ಡ್ ಟೆನಿಸನ್ ರೊಸೆಟ್ಟಿ, ಬ್ರೌನಿಂಗ್ ಮತ್ತು ಇನ್ನೂ ಅನೇಕ ಫ್ರೆಂಚ್ ಕವಿಗಳ ಕಾವ್ಯದಿಂದ ಪ್ರೇರಿತನಾಗಿ, ತನ್ನದೇ ಆದ ಒಂದು ಕಾವ್ಯ ಸಂಪುಟವನ್ನು ಹೊರತಂದ. ಆದರೆ, ವಿಮರ್ಶಕರಿಂದ ಅಂತಹ ಉತ್ತೇಜನಕಾರಿ ಪ್ರತಿಕ್ರಿಯೆ ದೊರೆಯಲಿಲ್ಲ. ಅವರಿಗೆ ಕಾಣಿಸಿದ್ದು, ಆಸ್ಕರ್ ವೈಲ್ಡ್ ಪ್ರಭಾವಿತನಾಗಿದ್ದ ಕವಿಗಳ ಕವಿತೆಗಳ ದಟ್ಟವಾದ ಅನುಕರಣೆ? ಅವರದೇ ವಿಚಾರಗಳ ಮಾರ್ದನಿಗಳಂತಿದ್ದವು. ಆದರೂ ಹಣ ಸಂಪಾದನೆಯೇ ಅವನಿಗೆ ಮುಖ್ಯ ತುರ್ತಾಗಿದ್ದರಿಂದ, ವಿಚಿತ್ರ ವೇಷಗಳಲ್ಲಿ ಲಂಡನ್ ಬೀದಿಗಳಲ್ಲಿ ತನ್ನ ಕವಿತೆಗಳನ್ನು ಸರಕಿನಂತೆ ಮಾರಾಟಕ್ಕಿಟ್ಟ, ಪತ್ರಿಕೆಗಳಲ್ಲಿ ಅವನ ಬಗ್ಗೆ ಹಲವು ಬಗೆಯ ಟೀಕೆ ಟಿಪ್ಪಣಿಗಳು, ವ್ಯಂಗ್ಯ, ವಿನೋದಕರ ಹೇಳಿಕೆಗಳು, ಹಾಸ್ಯ ಚಟಾಕಿಗಳು, ವ್ಯಂಗ್ಯ ಚಿತ್ರಗಳು ಕಾಣಿಸಿಕೊಂಡು, ಎಲ್ಲೆಲ್ಲೂ ಹರಿದಾಡಿದವು. ಹೀಗಾಗಿ ಬೀದಿಬೀದಿಗಳಲ್ಲಿ ಸುದ್ದಿಯಾದನೇ ಹೊರತು, ಕವಿತೆಗಳು ಮಾತ್ರ ಮಾರಾಟವಾಗಲಿಲ್ಲ; ಆರ್ಥಿಕ ಸ್ಥಿತಿ ಸುಧಾರಿಸಲಿಲ್ಲ.

ಇದೇ ಸಂದರ್ಭದಲ್ಲಿ ಉಪನ್ಯಾಸ ನೀಡಲು ಅಮೆರಿಕಾದಿಂದ ಕೋರಿಕೆ ಬಂದು, 1882ರಲ್ಲಿ ಅಮೆರಿಕಾಕ್ಕೆ ಹೋದನಾದರೂ ಅವನಿಗೆ ಸಮಾಧಾನವಾಗಲಿಲ್ಲ. ತನ್ನ ಪ್ರತಿಭೆಯ ಹೊರತು ತನ್ನಲ್ಲಿ ಬೇರೇನೂ ಇಲ್ಲವೆಂದು ಅರ್ಥಮಾಡಿಕೊಂಡ.

ಅಮೆರಿಕಾದಿಂದ ಬಂದಾಗ, ಅವನಲ್ಲಿ ಒಂದಷ್ಟು ಹಣ ಸಂಗ್ರಹಿತವಾಗಿತ್ತು. ಈಗ ತನ್ನ ವೇಷದ ಶೈಲಿಯನ್ನು ಬದಲಿಸಿಕೊಂಡ. ಪ್ರಾನ್ಸ್‌ಗೆ ಹೊರಟು ಅಲ್ಲಿ ಒಂದಷ್ಟು ದಿನ ಇದ್ದು ಬಂದ. ಷೇಕ್ಸ್‌ಪಿಯರ್‌ನ ದುರಂತ ನಾಟಕವೊಂದನ್ನು ಸರಳ ರಗಳೆಯಲ್ಲಿ ಅನುಕರಿಸಿ ಬರೆದ. ನಂತರ 'ಸ್ಪಿಂಕ್ಸ್' ಎಂಬ ಕವಿತೆಯನ್ನೂ ಬರೆದ – ಹಣ ಖಾಲಿಯಾಗುತ್ತಿದ್ದಂತೆ, ಅನ್ಯ ಮಾರ್ಗವಿಲ್ಲದೆ ಮತ್ತೆ ಉಪನ್ಯಾಸಗಳನ್ನು ನೀಡಲು ಮುಂದಾದ. ಅಮೆರಿಕಾ ಮತ್ತು ಲಂಡನ್ನಿನ ಬೇರೆ ಬೇರೆ ಪ್ರದೇಶಗಳಲ್ಲೆಲ್ಲ ಸಂಚರಿಸಿ ಹಲವಾರು ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ನೀಡಿದ. 1884ರಲ್ಲಿ ಖ್ಯಾತ ವಕೀಲನೊಬ್ಬನ ಮಗಳಾದ ಕಾನ್‌ಸ್ಟ್ಯಾನ್ಸ್ ಮೇರಿ ಲಾಯ್ಡ್ ಎಂಬ ಹುಡುಗಿಯನ್ನು ಮದುವೆಯಾದ. ಹೇಗೋ ಮಿತವ್ಯದಿಂದ ಸಂಸಾರ ಸಾಗಿಸಿದ. ಇಬ್ಬರು ಗಂಡುಮಕ್ಕಳ ತಂದೆಯಾದ. ವಿವಾಹವಾದ ನಾಲ್ಕು ವರ್ಷಗಳ ನಂತರ ಪಾಲ್ ಮಾಲ್ ಗೆಜೆಟ್ ಪತ್ರಿಕೆಗೆ ಪುಸ್ತಕ ವಿಮರ್ಶೆಗಳನ್ನೂ ಮತ್ತು ದಿ ಡ್ರಮ್ಯಾಟಿಕ್ ರಿವ್ಯೂ ಪತ್ರಿಕೆಗೆ ರಂಗಭೂಮಿ ಸಂಬಂಧವಾದ ಲೇಖನಗಳನ್ನೂ ಬರೆದ. ಇಡೀ ಲಂಡನ್ ಸಮಾಜದಲ್ಲಿ, ಅವನು ಒಳ್ಳೆಯ ಮಾತುಗಾರ, ಭಾಷಣಕಾರ ಎಂದು ಪ್ರಸಿದ್ಧಿ ಪಡೆದ. ಅವನ ಭಾಷಣಗಳಿಗಾಗಿ ಎಲ್ಲೆಲ್ಲಿಂದಲೋ ಕರೆಗಳು ಬರುತ್ತಿದ್ದವು. ಅವನ ಮಾತುಗಾರಿಕೆ, ಉದಾಹರಿಸುತ್ತಿದ್ದ ಗಾದೆಗಳು, ನುಡಿಗಟ್ಟುಗಳು, ಮಧ್ಯೆಮಧ್ಯೆ ಹಾರಿಸುತ್ತಿದ್ದ ಹಾಸ್ಯ ಚಟಾಕಿಗಳು, ವ್ಯಂಗ್ಯೋಕ್ತಿಗಳು ಜನಪ್ರಿಯವಾದವು. ಅವನ ಮಾತು ಕೇಳಲು ಜನ ಮುಗಿ ಬೀಳುತ್ತಿದ್ದರು. ಜನರ ನಿರೀಕ್ಷೆಗಳಿಗೆ ತಕ್ಕಂತೆ, ಅವರ ಅಂತರ್ಯದ ಮಿಡಿತಗಳನ್ನು ಗ್ರಹಿಸಿ ಮಾತನಾಡುತ್ತಿದ್ದ. ಆದ್ದರಿಂದಲೇ ಜನ ಮಂತ್ರಮುಗ್ಧರಾಗಿ ಕೇಳಿಸಿಕೊಳ್ಳುತ್ತಿದ್ದರು. ಅವನ ಜನಪ್ರಿಯತೆ ಎಷ್ಟು ಅಪಾರವಾಗಿತ್ತೆಂದರೆ, ವಿಲಿಯಂ ಮೋರಿಸ್‌ನಿಂದ ಹಿಡಿದು ಬರ್ನಾಡ್ ಷಾವರೆಗೆ, ಅವನ ಕಾಲದ ಅತ್ಯಂತ ಹೆಸರಾದ ಕವಿಗಳು ವಿಮರ್ಶಕರು, ಕಲಾವಿದರು ಕೂಡಾ ಅವನ ವ್ಯಕ್ತಿತ್ವದ ಬಗ್ಗೆ ದಣಿವಿಲ್ಲದಂತೆ ಮೆಚ್ಚುಗೆಯ ಮಾತುಗಳನ್ನು ಆಡುತ್ತಿದ್ದರು. ಗೌರವ ಕಾಣಿಕೆಗಳನ್ನು ನೀಡುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಅವನ ಸಂಭಾಷಣಾ ಚಾತುರ್ಯಕ್ಕೆ ಸರಿಸಾಟಿಯಿಲ್ಲವೆಂದು ಕೊಂಡಾಡುತ್ತಿದ್ದರು.

ಯಾವುದೇ ವಿಷಯದ ಬಗ್ಗೆಯಾದರೂ ನಿರರ್ಗಳವಾಗಿ, ಸಮಗ್ರವಾಗಿ, ಯಾವೊಂದು ಅಂಶವೂ ತಪ್ಪಿಹೋಗದಂತೆ ಗಂಟೆಗಟ್ಟಲೆ ಮಾತಾಡುತ್ತಿದ್ದ. ಕೇಳುಗರೂ ಕೂಡ ಒಂದಿಷ್ಟೂ ಬೇಸರವಿಲ್ಲದೆ, ಮಗ್ನರಾಗಿ ಕುಳಿತು ಕೇಳುತ್ತಿದ್ದರು. ಅವನಲ್ಲಿನ ಈ ಯಾವ ಗುಣಗಳಿಂದಲೂ ಸಂಸಾರ ನಿರ್ವಹಣೆಗೆ ಸಾಕಾಗುವಷ್ಟು ಹಣ ಸಂಪಾದನೆ ಇರಲಿಲ್ಲವಾದ ಕಾರಣ ಯಾವುದಾದರೂ ವೃತ್ತಿ ಹಿಡಿಯುವುದು ಅನಿವಾರ್ಯವಾಯಿತು. 1887ರಿಂದ 1889ರವರೆಗೆ ಎರಡು ವರ್ಷಗಳ ಕಾಲ "ದಿ ವುಮನ್ಸ್ ವರ್ಲ್ಡ್" ಪತ್ರಿಕೆಗೆ ಸಂಪಾದಕನಾದ. ಮಧ್ಯೆ ಮಧ್ಯೆ ಬಿಡುವಿನ ವೇಳೆಯಲ್ಲಿ ಸಣ್ಣಕತೆಗಳನ್ನು ಬರೆದ. ಆರು ವರ್ಷಗಳ ಕಾಲ ಬರೆಯುವುದನ್ನು ಮುಂದುವರಿಸಿದ. 'ದಿ ಹ್ಯಾಪಿ ಪ್ರಿನ್ಸ್' ಎ ಹೌಸ್ ಆಫ್ ಫೋಮ್ ಗ್ರೇನೇಟ್ಸ್ ಎನ್ನುವ ಯಕ್ಷ ಕಿನ್ನರಿ

ಕತೆಗಳನ್ನು ಮತ್ತು ಷೇಕ್ಸ್‌ಪಿಯರ್ ಸಾನೆಟ್ಟುಗಳ ಕುರಿತು "ಎ ಪೋರ್ಟ್‌ರೈಟ್ ಆಫ್ ಮಿಸ್ಟರ್ ಡಬ್ಲೂಎಚ್" ಎನ್ನುವ ಪ್ರಬಂಧವನ್ನೂ ಇಂಟೆನ್‌ಷನ್ಸ್ ಕೃತಿಯನ್ನೂ ಬರೆದ.

ಸೌಂದರ್ಯ ಮೀಮಾಂಸೆ ಕುರಿತ ಅವನ ವಿಚಾರಗಳು ಚಿಂತನೆಗಳು ಹೊಸ ಪೀಳಿಗೆಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ವೈಲ್ಡ್ ಬರೀ ಮಾತುಗಾರ, ಭಾಷಣಕಾರ, ಚಾಟೋಕ್ತಿಕಾರನಷ್ಟೇ ಆಗಿರಲಿಲ್ಲ. ಅತ್ಯಂತ ಮಹತ್ವದ ಬೌದ್ಧಿಕ ಸಂವಾದಕಾರನೂ ಆಗಿದ್ದ. ಆದರೆ ಅವನ ಈ ಸಾಮರ್ಥ್ಯಗಳು ಏಕಕಾಲದಲ್ಲಿ ಅವನಿಗೆ ಮಿತ್ರರನ್ನೂ ಶತ್ರುಗಳನ್ನೂ ಹುಟ್ಟುಹಾಕಿದವು.

ಅವನ ಬಗ್ಗೆ ಜನರಲ್ಲಿ, ಇಡೀ ದೇಶದಲ್ಲಿ ವ್ಯಾಪಕವಾಗಿ ಹರಡಿದ್ದ ಉತ್ಸಾಹ, ಮೆಚ್ಚುಗೆಗಳಿಗೆ 1895ರಲ್ಲಿ ಗ್ರಹಣ ಹಿಡಿಯಿತು. ಕ್ವೀನ್ಸ್‌ಬರಿಯ ಶ್ರೀಮಂತನೊಬ್ಬನ ವಿಚಾರದಲ್ಲಿ ಅವಮಾನಕರವಾದ ಲೇಖನ ಬರೆದ ಕಾರಣ ಮಾನನಷ್ಟ ಮೊಕದ್ದಮೆಯನ್ನು ಎದುರಿಸಬೇಕಾಯಿತು. ವಿಚಾರಣೆಯೂ ನಡೆಯಿತು. ಅವನಿಂದ ಘೋರ ಅಪರಾಧ ನಡೆದಿರಲಿಲ್ಲವಾದರೂ ಸಾಮಾಜಿಕ ಸೇಡಿನ ಪರಿಣಾಮವಾಗಿ ಜೈಲು ಶಿಕ್ಷೆಯಾಯಿತು. ದೇಶಾದ್ಯಂತ ಹುಯಿಲೆದ್ದಿತು ಸುಳ್ಳು ಸಾಕ್ಷ್ಯಗಳನ್ನು ಸತ್ಯವೆಂದು ಸಾಬೀತುಪಡಿಸಲಾಯಿತು. ಎರಡು ವರ್ಷ ಜೈಲು ಶಿಕ್ಷೆಯನ್ನು ಘೋಷಿಸಲಾಯಿತು. ವೈಲ್ಡ್‌ನ ಶತ್ರುಗಳ ಪಾಳಯದಲ್ಲಿ, ಸಂಭ್ರಮದ ಪಾನಕೂಟ ಏರ್ಪಾಟಾಯಿತು. ಪರಸ್ಪರ ಚಿಯರ್ಸ್ ಹೇಳಿಕೊಂಡರು. ಕೆಳಗೆ ಬಿದ್ದರೆ ಆಳಿಗೊಂದು ಕಲ್ಲು ಎಂಬಂತೆ, ಅವನ ಪರವಾಗಿ ಇದ್ದವರೂ ಕೂಡಾ ಅನುಮಾನಿಸತೊಡಗಿದರು. ಕೊಂಡಾಡಿದ್ದನ್ನು ಮರೆತು ಮನಸಿಗೆ ಬಂದಂತೆ ಜನ ಮಾತಾಡಿಕೊಳ್ಳತೊಡಗಿದರು. ಪತ್ರಿಕೆಗಳಲ್ಲಿ ಟೀಕೆ, ಟಿಪ್ಪಣಿ, ವ್ಯಂಗ್ಯ, ಪರಿಹಾಸದ ಬರಹಗಳು ಪ್ರಕಟವಾಗತೊಡಗಿದವು. ಇದೂ ಸಾಕಾಗಲಿಲ್ಲವೆಂಬಂತೆ, ಅವನ ಕೃತಿಗಳನ್ನು ಬಹಿಷ್ಕರಿಸಿದರು. ವರಿಷ್ಠರು, ಶ್ರೀಮಂತರು ಕಳುಹಿಸುತ್ತಿದ್ದ ಸಭೆ, ಸಮಾರಂಭ, ಸಂತೋಷ ಕೂಟಗಳ ಆಹ್ವಾನ ಪತ್ರಿಕೆಗಳು ಬರುವುದು ನಿಂತುಹೋಯಿತು. ಅವನ ನಾಟಕ ಪ್ರತಿಭೆಯನ್ನು ಶಿಖರಕ್ಕೇರಿಸಿ ಕೊಂಡಾಡುತ್ತಿದ್ದವರು, ನಾಟಕವನ್ನು ಆಡಿಸುತ್ತಿದ್ದರಾದರೂ, ನಾಟಕಕಾರನ ಹೆಸರನ್ನು ಮರೆಮಾಚುತ್ತಿದ್ದರು. ಆದರೆ ಆಸ್ಕರ್ ವೈಲ್ಡ್‌ನನ್ನು ಅವನ ಪ್ರತಿಭೆಯನ್ನು ಬಹಳವಾಗಿ ಮೆಚಿಕೊಂಡಿದ್ದ ಒಂದಷ್ಟು ಮಂದಿಗೆ ಅವನಿಗಾಗುತ್ತಿದ್ದ ಅವಮಾನವನ್ನು ಸಹಿಸಿಕೊಳ್ಳಲಾಗದೆ, ಅವಮಾನಿಸುವವರ ವಿರುದ್ಧ ಪ್ರತಿಭಟನೆ ನಡೆಸಿದರು; ಚೆನ್ನಾಗಿ ತರಾಟೆಗೆ ತೆಗೆದುಕೊಂಡು ಬಾಯಿ ಮುಚ್ಚಿಸುತ್ತಿದ್ದರು. ಹದಿನೆಂಟು ತಿಂಗಳ ಕಾಲ ಜೈಲುವಾಸ ಅನುಭವಿಸಿದ ವೈಲ್ಡ್ ಮಾನಸಿಕವಾಗಿ ಖಿನ್ನತೆಯನ್ನು ಅನುಭವಿಸಿದ. ಓದಲು, ಬರೆಯಲೂ ಕೂಡಾ ಅವಕಾಶ ಕೊಡದೆ ಒಂಟಿತನದ ಭಯಂಕರತೆಯನ್ನು ಅನುಭವಿಸುವಂತೆ ಮಾಡಲಾಯಿತು. ಕೊನೆಕೊನೆಗೆ ಅವನ ಆಪ್ತರ ಶಿಫಾರಸಿನಿಂದ, ನಿಯಮಗಳನ್ನು ಸಡಿಲಗೊಳಿಸಿ ಓದು, ಬರಹಕ್ಕೆ ಅವಕಾಶ ನೀಡಲಾಯಿತು. ಇದರಿಂದ ಅವನಿಗೆ ಎಷ್ಟೋ ನಿರಾಳವೆನಿಸಿತು.

ಜೈಲುವಾಸದ ಕಡೆಯ ಆರು ತಿಂಗಳಲ್ಲಿ, ವೈಲ್ಡ್ ತನ್ನ ಗೆಳೆಯನೊಬ್ಬನಿಗೆ ಜೈಲುವಾಸದ ಅನುಭವಗಳನ್ನು ಕುರಿತು ಸುದೀರ್ಘ ಪತ್ರ ಬರೆದ. ಈ ಪತ್ರವೇ ಮುಂದೆ 'ಡಿ ಫ್ರೊಫೆಂಡಿಸ್' ಹೆಸರಿನಲ್ಲಿ ಪ್ರಕಟವಾಯಿತು. ಅತೀವವಾದ ಯಾತನೆಯ ನಡುವೆ, ಅದು ಹೇಗೋ ಕ್ರಿಸ್ತನ ವ್ಯಕ್ತಿತ್ವದ ಬಗ್ಗೆ ಗಾಢವಾದ ಆಸಕ್ತಿಯನ್ನು ಬೆಳೆಸಿಕೊಂಡ. ಆದರೆ ದುರಾದೃಷ್ಟ! ಜೈಲಿನಿಂದ ಬಿಡುಗಡೆಯಾಗಿ ಬಂದು ಇನ್ನೇನು ರೋಮನ್ ಚರ್ಚ್ ಸಂಪ್ರದಾಯಕ್ಕೆ ದೀಕ್ಷಾಬದ್ಧನಾಗಿ ಸೇರಿಕೊಳ್ಳಬೇಕೆಂದುಕೊಂಡಿರುವಾಗಲೇ ಅದೂ ಕೆಲವೇ ಗಂಟೆಗಳ ಅಂತರದಲ್ಲಿ ಸಾವನ್ನಪ್ಪಿದ.

ಜೈಲು ಬಿಡುಗಡೆಯಾಗಿ ಬಂದು, ಸಾವನ್ನಪ್ಪುವ ಕ್ಷಣದವರೆಗೂ ಕೆಲವು ಕೃತಿಗಳನ್ನು ಬರೆದ. ದಿ ಬ್ಯಾಲಡ್ ಆಫ್ ರೀಡಿಂಗ್ ಗೆಯೋಲ್, ಈ ಕೃತಿಗೆ ಪ್ರಚಂಡವಾದ ಪ್ರೋತ್ಸಾಹ, ಪ್ರತಿಕ್ರಿಯೆಗಳು ಲಭಿಸಿದವು. 'ಎ ಹೌಸ್ ಆಫ್ ಪಾಮ್‌ಗ್ರೇನೇಟ್ಸ್' ಲಾರ್ಡ್ ಆರ್ಥರ್ ಸವೈಲ್ಸ್‌ಕ್ರೈಮ್, ದಿ ಸೆಲ್ಫಿಷ್ ಜೈಂಟ್, ದಿ ನೈಟಿಂಗೇಲ್ ಅಂಡ್ ದಿ ರೋಸ್, ದಿ ಪೋರ್ಟ್‌ರೈಟ್ ಆಫ್ ಮಿಸ್ಟರ್ ಡಬ್ಲು. ಎಚ್ ಮುಂತಾಗಿ ಹಲವಾರು ಕೃತಿಗಳನ್ನು ಬರೆದ. 1898ರ ನಂತರ ಅವರ ಬರವಣಿಗೆ ಸ್ಥಗಿತವಾಯಿತು. ಬರೆಯಬೇಕೆಂಬ ಇಚ್ಛಾಶಕ್ತಿಯೇ ಬತ್ತಿಹೋಯಿತು.

ಜೈಲುವಾಸದ ಘೋರ ಪರಿಣಾಮವೆಂಬಂತೆ ಪ್ಯಾರಿಸಿನ ರೂ ದೆ ಬೊ ಆರ್ಟ್ಸ್‌ನಲ್ಲಿ ಕೊನೆಯುಸಿರೆಳೆದ. ಇಂತಹ ಬದುಕಿನ ಹಿನ್ನೆಲೆ ಹೊಂದಿದ ಆಸ್ಕರ್ ವೈಲ್ಡ್‌ನ ಕೃತಿ ಸಮೂಹದಲ್ಲಿ ಅತ್ಯಂತ ಮಹತ್ವದ ಕೃತಿಯೆಂದು ಪರಿಗಣಿಸಲಾಗಿರುವ ದಿ ಪಿಕ್ಚರ್ ಆಫ್ ಡೋರಿಯನ್ ಗ್ರೇ ಎಂಬುದು ಅವನು ಬರೆದ ಒಂದೇ ಒಂದು ಕಾದಂಬರಿಯಾಗಿದೆ. ಇಂಗ್ಲೀಷಿನಲ್ಲಿ ಬರೆದ ಮೊಟ್ಟ ಮೊದಲ ಫ್ರೆಂಚ್ ಕಾದಂಬರಿ ಇದಾಗಿದೆ. ಸಾಹಿತ್ಯ ಕ್ಷೇತ್ರದಲ್ಲಿಯೇ ಅತ್ಯಂತ ಭಿನ್ನ ನೆಲೆಯ ಕೃತಿಯಾಗಿದ್ದು, ಸಾಕಷ್ಟು ಸಂಚಲನ ಉಂಟುಮಾಡಿದ ಈ ಕೃತಿ ಮೂಲತಃ ಆಸ್ಕರ್ ವೈಲ್ಡ್‌ನ ಸಮಗ್ರ ವ್ಯಕ್ತಿತ್ವದ ಅಭಿವ್ಯಕ್ತಿಯಾಗಿದೆ. ಆದ್ದರಿಂದಲೇ ಇದೊಂದು, ಕುತೂಹಲದ ಮಾನವ ದಾಖಲೆಯ ಮಹತ್ವವನ್ನು ಪಡೆದಿದೆ. ಆಸ್ಕರ್ ವೈಲ್ಡ್‌ನ ಸಾವಿರಾರು ಹೇಳಿಕೆಗಳಲ್ಲಿ ಒಂದಾದ "ಮನುಷ್ಯನಿಗೆ ಮುಖವಾಡವನ್ನು ನೀಡು, ಅವನು ಸತ್ಯವನ್ನೇ ಹೇಳುತ್ತಾನೆ" ಎನ್ನುವುದು ಅವನ ನಂಬಿಕೆಯಾಗಿತ್ತು. ಈ ಕಾದಂಬರಿಯಲ್ಲಿ ಬರುವ ಹೆನ್ರಿ ಓಟ್ಸನ್ ಪಾತ್ರ ಆಸ್ಕರ್ ವೈಲ್ಡ್‌ನ ಮುಖವಾಡವೇ ಆಗಿದೆ. ಒಂದು ರೀತಿಯಲ್ಲಿ ಈ ಕಾದಂಬರಿ ವೈಲ್ಡ್‌ನ ಪೂರ್ಣ ಪ್ರಮಾಣದ ಭಾವಚಿತ್ರವೇ ಆಗಿದೆ.

ಉಳಿದ ವಿವರಗಳೂ ಕೂಡಾ, ಕಲೆ, ಸೌಂದರ್ಯ ಸಮಾಜ, ನೈತಿಕ ಮೌಲ್ಯಗಳು, ಅವನ ಕಾಲದ ಲಂಡನ್‌ನ ಪ್ರತಿಷ್ಠಿತ ಸಮಾಜದ ನೈತಿಕತೆಯ ಸಿಲುವುಗಳೂ, ಯಾವುದೇ ಬದ್ಧತೆಯಿಲ್ಲದೆ ಐಷಾರಾಮಿ ಬದುಕನ್ನು ನಡೆಸುವ ಪ್ರತಿಷ್ಠಿತರ ಶ್ರೀಮಂತರ ನೈಜ ಚಹರೆಗಳು, ಸಡಿಲಗೊಂಡು ಹದಗೆಡುತ್ತಿದ್ದ ಗಂಡು-ಹೆಣ್ಣಿನ ಸಂಬಂಧಗಳು ಕುರಿತಾಗಿ, ಅವನು ತಳೆದಿದ್ದ ವಿಚಾರಗಳು, ಚಿಂತನೆಗಳು,

ಜೊತೆಗೆ ಅವನದೇ ಆಗಿರಬಹುದಾದ ಆಸಕ್ತಿಗಳು, ನಂಬಿಕೆಗಳು ಎಲ್ಲವೂ ಇದರಲ್ಲಿ ವಿಸ್ತೃತ ಚರ್ಚೆಗೆ ಒಳಪಟ್ಟಿದೆ. ಮೊದಲಿನಿಂದಲೂ ಹೆಸರಾಗಿದ್ದ ಸಂಭಾಷಣಾ ಚತುರತೆ, ತರ್ಕಬದ್ಧ ವಿಷಯಗಳ ನಿರೂಪಣೆ, ವ್ಯಂಗ್ಯ, ಹಾಸ್ಯ, ಚಾಟೋಕ್ತಿಗಳಿಗೆ ಸಮರ್ಪಕವಾದ ಸನ್ನಿವೇಶ, ಸಂದರ್ಭಗಳ ನಿರ್ಮಾಣ ಸಾಮರ್ಥ್ಯಕ್ಕೆ ಈ ಕಾದಂಬರಿ ನಿರ್ದಶನವಾಗಿದೆ.

ಆಸ್ಕರ್ ವೈಲ್ಡ್‌ನ ಕಲಾ ಮೀಮಾಂಸೆಯ ಅನೇಕ ಮಗ್ಗುಲುಗಳು ಕಾದಂಬರಿಯ ಪ್ರಮುಖ ಪಾತ್ರಗಳ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಅನಾವರಣಗೊಳ್ಳುತ್ತವೆ. ಕಲೆ, ಸೌಂದರ್ಯ, ಕಲಾವಿದ, ಕಲೆಯ ವಸ್ತು ಮುಂತಾದವುಗಳ ಬಗ್ಗೆ ಸ್ವಚಿಂತನೆಯ ಪರಿಕಲ್ಪನೆಗಳು, ಈ ಕೃತಿಯ ಪ್ರಸ್ತಾವನೆಯ ಭಾಗದಲ್ಲಿ, ಹೇಳಿಕೆಗಳ ರೂಪದಲ್ಲಿ ದಾಖಲಾಗಿರುವುದರಿಂದ, ಕೃತಿಯ ಒಳಗಿನ ಹೂರಣದ ದೃಷ್ಟಿ, ಧೋರಣೆಗಳೂ ಓದುಗರಿಗೆ ಅನಾಯಾಸವಾಗಿ ಗ್ರಹಿಸಲು ಸಾಧ್ಯವಿದೆ. ಕೃತಿಯ ಕೇಂದ್ರ ಪಾತ್ರವಾದ ಡೋರಿಯನ್ ಮತ್ತು ಕಲಾವಿದ ಬೇಸಿಲ್ ಮತ್ತು ಈ ಎರಡೂ ಪಾತ್ರಗಳ ನಡುವಿನ ಸೇತುವೆಯಂತಿರುವ ಲಾರ್ಡ್ ಹೆನ್ರಿ ಈ ಮೂವರ ನಡುವಿನ ಸಂಭಾಷಣೆ ಚರ್ಚೆ, ತರ್ಕ ಇತ್ಯಾದಿಗಳಿಂದ ಕಲೆಯನ್ನು ಸ್ವೀಕರಿಸುವ, ನಿರಾಕರಿಸುವ, ಮತ್ತು ಅದಕ್ಕೆ ಅವರವರದೇ ಆಗ ಸಮರ್ಥನೆಯ ಭಿನ್ನ ನೆಲೆಗಳನ್ನು ಗುರುತಿಸುವುದಕ್ಕೆ ಸಹಕಾರಿಯಾಗಿವೆ.

ವೈಲ್ಡ್‌ನ ದೃಷ್ಟಿಯಲ್ಲಿ, ಕಲಾವಿದ ಸುಂದರ ವಸ್ತುಗಳ ಸೃಷ್ಟಿಕರ್ತ ಮತ್ತು ಕಲೆಯ ಉದ್ದೇಶ ಕಲೆಯ ಅನಾವರಣವೇ ಹೊರತು ಕಲಾವಿದನನ್ನಲ್ಲ. ಸುಂದರವಾದ ವಸ್ತುಗಳಲ್ಲಿ ಸುಂದರವಾದ ಅರ್ಥಗಳನ್ನು ಗ್ರಹಿಸಬಲ್ಲವನೇ ನಿಜವಾದ ಸಂಸ್ಕಾರಿ. ಯಾವ ಕಲಾವಿದನೂ ಅಸ್ವಸ್ಥ, ವಿಕೃತ ಮನಃಸ್ಥಿತಿಯವನಾಗಿರುವುದಿಲ್ಲ. ಕಡೆಯದಾಗಿ ಹೇಳುವುದಾದರೆ, ವ್ಯಕ್ತಿಯ ನೈತಿಕ ಬದುಕು ಅವನ ಕಲಾವಸ್ತು ಅಥವಾ ವಿಷಯದ ಭಾಗವಾಗಿರುತ್ತದೆಯೇ ಹೊರತು, ಕಲೆಯ ನೈತಿಕತೆ ಅಲ್ಲ. ಕಲೆಯ ನೈತಿಕತೆ ನಿಹಿತವಾಗಿರುವುದು ಅಪರಿಪೂರ್ಣ ಮಾಧ್ಯಮವನ್ನು ಸಮರ್ಪಕವಾಗಿ ಪರಿಪೂರ್ಣವಾಗಿ ಬಳಸಿಕೊಳ್ಳುವುದರಲ್ಲಿದೆ. ಎಂಬೆಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ಈ ಕಾದಂಬರಿ ಸೃಷ್ಟಿಯಾಗಿದೆ.

ಈ ಕಾದಂಬರಿಯಲ್ಲಿ ರೋಚಕತೆಯೂ ಇದೆ, ದುರಂತವೂ ಇದೆ. ಮುಗ್ಧತೆಯ ಮುಖವಾಡದ ಆಳದಲ್ಲಿ ಹುದುಗಿರಬಹುದಾದ ವಿಕೃತ ಆತ್ಮದ ದರ್ಶನವನ್ನು ಪಡೆದವನಿಗೆ, ತನ್ನ ಭಾವಚಿತ್ರವೇ ತನ್ನ ಆತ್ಮದ ಅಭಿವ್ಯಕ್ತ ರೂಪವೆಂದು ಭಾವಿಸಿದವನಿಗೆ ಅಂಥದ್ದನ್ನು ಸೃಷ್ಟಿಸಿದ ಕಲಾವಿದನನ್ನೇ ಕೊಲ್ಲುವ ಸಾಹಸಕ್ಕೆ ದೂಡುತ್ತದೆ. ಆದರೆ ಅವನಲ್ಲಿನ ಪಾಪಪ್ರಜ್ಞೆ ವಿವೇಕಗಳು ಕಡೆಕಡೆಗೆ ಜಾಗೃತವಾದಾಗ ತಾನು ಬದುಕಿರುವುದೇ ಸಾಧ್ಯವಿಲ್ಲವೆಂದು ಆತ್ಯಹತ್ಯೆಗೆ ಮುಂದಾಗುತ್ತಾನೆ.

ಇಡೀ ಕತೆ ಓದುಗರನ್ನು ಗಂಭೀರ ಚಿಂತನೆಗೆ ಒಳಗಾಗಿಸುತ್ತದೆ. ಕಾದಂಬರಿ ವಸ್ತುವಿನ ಸಂಕೀರ್ಣತೆ, ಅದರ ಹೊಸತನಗಳು ಜಗತ್ಪ್ರಸಿದ್ಧ ಕೃತಿಯಾಗಿಸಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಇಂತಹ ಒಂದು ಕಾದಂಬರಿಯನ್ನು ಹಲವು ದಶಕಗಳ ಹಿಂದೆಯೇ ಓದಿದ್ದರೂ, ಅದನ್ನು ಕನ್ನಡಿಸುವ ಅಥವಾ ಭಾವಾನುವಾದಕ್ಕೆ ಮುಂದಾಗುವ ಅವಕಾಶ ಈಗ ದೊರೆತಿದೆ. ಇಲ್ಲಿ ಕತೆಯ ಅಂಶಕ್ಕಿಂತ ಕತೆಗಾರನ ನಿರೂಪಣೆಗಳು, ವೈಖರಿ, ಕಲೆ, ಸೌಂದರ್ಯಗಳ ಬಗ್ಗೆ ನಡೆಯುವ ಸಂವಾದಗಳು ಮನುಷ್ಯನ ಮನೋಲೋಕಗಳಲ್ಲಿನ ಸಂಘರ್ಷಗಳು ಕಾದಂಬರಿಯನ್ನು ಮಾಸ್ಟರ್‌ಪೀಸ್ ಮಟ್ಟಕ್ಕೆ ಏರಿಸಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಅದೆಲ್ಲವನ್ನೂ ಓದಿ ಅನುಭವಿಸಬೇಕೆನ್ನುವ ಉದ್ದೇಶದಿಂದಲೇ ನಿಮ್ಮ ಮುಂದೆ ಇರಿಸುತ್ತಿದ್ದೇನೆ. ಸಹೃದಯ ವಿಮರ್ಶಕರಾಗಿ ನಿಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತಪಡಿಸಿದರೆ, ಎಲ್ಲವನ್ನೂ ಸ್ವೀಕರಿಸುತ್ತೇನೆ.

ಇಂತಹ ಒಂದು ಮಹತ್ವದ ಕಾದಂಬರಿ ಬೆಳಕು ಕಾಣಲು ಕಾರಣರಾದ ಸೃಷ್ಟಿ ನಾಗೇಶ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

**– ವಿಜಯಾ ಸುಬ್ಬರಾಜ್**

# ಅಧ್ಯಾಯ – 1

ಸ್ಟುಡಿಯೋ ಬಗೆಬಗೆಯ ಹೂಗಳ ಸುಗಂಧದಿಂದ ತುಂಬಿತ್ತು. ಬೇಸಿಗೆಯ ಗಾಳಿ ಬೀಸಿದ್ದರಿಂದ ತೆರೆದ ಬಾಗಿಲ ಹಾದಿಯಿಂದ ನೀಲಿ, ಹಳದಿ ಹೂಗಳ ಕಂಪು ನೇರವಾಗಿ ಪ್ರವೇಶಿಸಿತು.

ಸ್ವಲ್ಪ ದೂರದಲ್ಲಿ ಲಾರ್ಡ್ ಹೆನ್ರಿ ವೋಟ್ಟನ್ ಸೋಫಾದಲ್ಲಿ ಒರಗಿ, ಸಿಗಾರ್ ಸೇದುತ್ತಿದ್ದ. ಹೊರಗಿನಿಂದ ಮರ-ಗಿಡಗಳ ಹಕ್ಕಿಗಳ ಸದ್ದು ಕೇಳಿಬರುತ್ತಿತ್ತು.

ಕೋಣೆಯ ಮಧ್ಯಭಾಗದಲ್ಲಿ ನಿಂತಿದ್ದ ಈಸಲ್ ಸ್ಟ್ಯಾಂಡ್ ಮೇಲೆ ಕಣ್ಣುಕುಕ್ಕುವ ಸುಂದರ ಯುವಕನೊಬ್ಬನ ಭಾವಚಿತ್ರವನ್ನು ಏರಿಸಿ ಬಿಗಿಯಲಾಗಿತ್ತು. ಅಲ್ಲಿಂದ ಸ್ವಲ್ಪ ದೂರದಲ್ಲಿ ಚಿತ್ರಕಾರ ಅಥವಾ ಕಲಾವಿದ ಬೇಸಿಲ್ ಹಾಲ್ ವರ್ಡ್ ಕುಳಿತು ಬೇರೆ-ಬೇರೆ ಕೋನಗಳಿಂದ ಆ ಚಿತ್ರವನ್ನು ಗಮನಿಸುತ್ತಿದ್ದ. ಅವನನ್ನು ನೋಡುತ್ತಿದ್ದವರಿಗೆ ಅವನ ಮುಖದಲ್ಲಿ ಮಂದಸ್ಮಿತತೆ, ತೃಪ್ತಿಯ ಭಾವನೆಗಳು ಕಾಣಿಸುತ್ತಿದ್ದವು. ಇದಕ್ಕಿದ್ದಂತೆ ಅವನು ಎಚ್ಚೆತ್ತು, ತನ್ನ ಕಣ್ಣ ರೆಪ್ಪೆಗಳನ್ನು ಮುಚ್ಚಿ, ತಾನು ಕಾಣುತ್ತಿರುವ ಕನಸುಗಳು, ಕಣ್ಣು ಬಿಟ್ಟರೆ ಎಲ್ಲಿ ಮರೆಯಾಗುವುದೋ ಎಂದು ಹೆದರಿದಂತೆ ರೆಪ್ಪೆಗಳ ಮೇಲೆ ತನ್ನ ಬೆರಳುಗಳನ್ನು ಇರಿಸಿದ "ಬೇಸಿಲ್ ನಿನ್ನ ಎಲ್ಲಾ ಕಲಾಕೃತಿಗಳಿಗಿಂತ ಇದೊಂದು ಅದ್ಭುತವಾದದ್ದು. ಇದನ್ನು ನೀನು ಮುಂದಿನ ವರ್ಷ ಗ್ರಾಸ್‌ವೆನೋರ್‌ನಲ್ಲಿ ನಡೆಯಲಿರುವ ಸ್ಪರ್ಧೆಗೆ ಕಳಿಸಲೇ ಬೇಕು" ಎಂದ ಲಾರ್ಡ್ ಹೆನ್ರಿ.

"ನಾನು ಯಾವ ಸ್ಪರ್ಧೆಗೂ ಕಳಿಸುವುದಿಲ್ಲ. ಖಂಡಿತ ಎಲ್ಲಿಗೂ ಕಳಿಸುವುದಿಲ್ಲ" ಎಂದು ದೃಢ ನಿರ್ಧಾರದೊಂದಿಗೆ ಹೇಳಿದ.

ಲಾರ್ಡ್ ಹೆನ್ರಿ ಹುಬ್ಬೇರಿಸಿ ಅವನ ಕಡೆ ನೋಡಿ ಅಚ್ಚರಿಯಿಂದ ಏನಂದೆ! ಎಲ್ಲಿಗೂ ಕಳಿಸುವುದಿಲ್ಲ? ಅಲ್ಲಪ್ಪಾ, ಯಾಕೇಂತ ಕೇಳಬಹುದು ತಾನೇ? ಏನಾದರೂ ಬಲವಾದ ಕಾರಣ ಇದೆಯೇನು? ನೀವು ಕಲಾವಿದರು, ಒಂದು ಥರಾ ವಿಚಿತ್ರ ಮನುಷ್ಯರು, ಹೆಸರು ಗಳಿಸುವುದಕ್ಕೆ ಏನೇನೋ ಕಸರತ್ತು ಮಾಡುತ್ತೀರ. ಆದರೆ ಒಂದು ಸಲ ಹೆಸರು ಬಂತೂಂದ್ರೆ ತಾತ್ಸರದಿಂದ ಎತ್ತಿ ಒಗೀತೀರಿ. ನಿನ್ನ ನಿರ್ಧಾರ ಮೂರ್ಖತನದ್ದು. ಪ್ರಪಂಚದಲ್ಲಿ ಒಂದೇ ಒಂದು ಹೇಳಬೇಕೆಂದರೆ, ಮಾತಾಡಿಕೊಳ್ಳೋಕಿಂತ ಕೆಟ್ಟದ್ದೆಂದರೆ, ಮಾತಾಡಿಕೊಳ್ಳಬೇಕಾದ್ದರ ಬಗ್ಗೆ ಮಾತಾಡಿಕೊಳ್ಳೋದೇ ಇಲ್ಲ. ನಿನಗೆ ಗೊತ್ತಿಲ್ಲ ಈ ಭಾವಚಿತ್ರ ಇಂಗ್ಲೆಂಡಿನಲ್ಲಿನ ಎಲ್ಲಾ ಕಲಾವಿದರಿಗಿಂತ ನಿನ್ನನ್ನು ಎತ್ತರಕ್ಕೆರಿಸುತ್ತದೆ. ವಯಸ್ಸಾದವರು, ಒಂದು ವೇಳೆ ಅವರಿಗೆ ಭಾವನೆಗಳಿದ್ದರೆ, ಹೊಟ್ಟೆಕಿಚ್ಚುಪಡುತ್ತಾರೆ.

"ನೀನು ನಗ್ತೀಯ ನನಗೆ ಗೊತ್ತು. ಆದರೆ ನಾನು ಇದನ್ನು ನಿಜವಾಗಿಯೂ ಪ್ರದರ್ಶನಕ್ಕೆ ಕಳಿಸೊಲ್ಲ. ಯಾಕೆಂದರೆ ಇದರ ಸೃಷ್ಟಿಯಲ್ಲಿ ನನ್ನೆಲ್ಲ ವ್ಯಕ್ತಿತ್ವ. ಪ್ರತಿಭೆಯನ್ನು ಸುರಿದುಬಿಟ್ಟಿದ್ದೇನೆ!"

ಹೆನ್ರಿ ದಿವಾನ್ ಮೇಲೆ ಇನ್ನಷ್ಟು ಮೈಚಾಚಿದ, ನಕ್ಕ. "ನನಗೆ ಗೊತ್ತು ನಿನ್ನನ್ನು ಅದರಲ್ಲಿ ಎರಕ ಹೊಯ್ದಿದ್ದೀಯಾಂತ ಅದನ್ನು ನಾನು ನಿಜಾಂತ ನಂಬಿದ್ದೇನೆ ಕೂಡಾ!

"ಏನಂದೆ ನಿನ್ನನ್ನು ಪೂರ್ತಿಯಾಗಿ ಎರೆದಿದ್ದೀ ಎಂದೆಯಾ ಬಹಳ ತಮಾಶೆಯಾಗಿದೆ. ಎಲ್ಲಿ ನಿನ್ನ ಒರಟು ಮುಖ, ಇದ್ದಿಲು ಬಣ್ಣದ ಕೂದಲು! ಎಲ್ಲಿ ಆ ಹುಡುಗನ ಮನ್ಮಥ ರೂಪ! ದಂತದ ಪುತ್ಥಳಿಯಂಥ ರೂಪ, ಆಕಾರ, ಗುಲಾಬಿ ಬಣ್ಣದ ತುಟಿಗಳು!! ಅಷ್ಟ್ಯಾಕೆ, ಬೇಸಿಲ್! ಅವನೊಬ್ಬ ಸ್ವಮೋಹಿ. ಸ್ವಾನುರಕ್ತ! ಆದರೆ ನಿನ್ನದು ಬೌದ್ಧಿಕ ಅಭಿವ್ಯಕ್ತಿ ನಿನಗೆ ಗೊತ್ತಿದೆಯೇನು, ಸೌಂದರ್ಯ! ಸೌಂದರ್ಯವೆನ್ನುವುದು, ಬೌದ್ಧಿಕ ಅಭಿವ್ಯಕ್ತಿ ಕಾಣಿಸಿ ಕೊಳ್ಳುತ್ತಿದ್ದಂತೆ ಮರೆಯಾಗುತ್ತದೆ. ಬೌದ್ಧಿಕತೆ ಎನ್ನುವುದು ಅತಿಶಯೋಕ್ತಿಯಾಗಿರುವುದರಿಂದ ಯಾವುದೇ ಚಹರೆಯ ಸಾಮರಸ್ಯವನ್ನು ಹಾಳು ಮಾಡುತ್ತದೆ. ನಿನ್ನ ಈ ರಹಸ್ಯ ಪ್ರಕೃತಿಯ ಗೆಳೆಯ ನಿಜಕ್ಕೂ ಚೇತೋಹಾರಿ, ಅವನ ಹೆಸರನ್ನು ನೀನು ತಿಳಿಸಿಲ್ಲವಾದರೂ ಬಹಳವಾಗಿ ನನ್ನನ್ನು ಆಕರ್ಷಿಸುತ್ತಾನಾದರೂ ಯೋಚಿಸುವುದಿಲ್ಲ. ನನಗೆ ಅರ್ಥವಾಗುತ್ತದೆ. ಅವನೊಬ್ಬ ತಲೆಯಿಲ್ಲದ ಸುಂದರ ಪ್ರಾಣಿ. ಚಳಿಗಾಲದಲ್ಲಿ ನೋಡಲು ಹೂವಿರುವುದಿಲ್ಲ. ಬೇಸಿಗೆಯಲ್ಲಿ ನಮ್ಮನ್ನು ತಂಪಾಗಿರಿಸಲು ಬೇಕಾದ್ದು ನಮಗೇನೂ ದೊರೆಯುವುದೇ ಇಲ್ಲ. ನಿನ್ನನ್ನು ಹೆಚ್ಚಿಗೆ ಹೊಗಳಿಕೊಳ್ಳಬೇಡ, ಬೇಸಿಲ್ಲ್, ಅವನ ಸಮೀಪಕ್ಕೆ ಬರುವುದೂ ನಿನಗೆ ಸಾಧ್ಯವಿಲ್ಲ!!

"ನನ್ನನ್ನು ನೀನು ಅರ್ಥ ಮಾಡಿಕೊಂಡಿಲ್ಲ ಹ್ಯಾರಿ" ಎಂದ ಕಲಾವಿದ.

"ನಿಜ ನಾನು ಅವನ ಹಾಗೆ ಇಲ್ಲ. ನನಗೆ ಅದು ತುಂಬಾ ಚೆನ್ನಾಗಿಯೇ ಗೊತ್ತಿದೆ; ಅಲ್ಲದೆ, ನಾನು ಅವನ ಹಾಗೆ ಇರೋದಕ್ಕೂ ಇಷ್ಟಪಡೊಲ್ಲ. ನಿನಗೆ ನಿಜ ಅನ್ನಿಸದೆ ಇರಬಹುದು. ಆದರೆ ನಾನು ಹೇಳ್ತಿರೋದು ಸತ್ಯ............ ನಿನ್ನದು ಅಧಿಕಾರ. ಶ್ರೀಮಂತಿಕೆ: ನನ್ನದು ಪ್ರತಿಭೆ ಮತ್ತು ಕಲೆ – ಇವೇ ನಮಗೆ ಮುಖ್ಯ. ಡೋರಿಯನ್ ಗ್ರೇನ ಸೌಂದರ್ಯ ... ದೇವರು ನಮಗೇನು ಕೊಟ್ಟಿದ್ದಾನೆ... ಅದರಿಂದ ನಾವೆಲ್ಲಾ ತುಂಬಾನೇ ಅನುಭವಿಸಬೇಕಾಗುತ್ತದೆ".

“ಡೋರಿಯನ್ ಗ್ರೇ? ಅದೇನಾ ಅವನ ಹೆಸರು?” ಎಂದು, ಸ್ಟುಡಿಯೋದಲ್ಲಿ ಅತ್ತಿಂದಿತ್ತ ಹೆಜ್ಜೆ ಹಾಕುತ್ತಾ ಹೇಳಿದ. ಲಾರ್ಡ್ ಹೆನ್ರಿ.

“ಹೌದು ಅದೇ ಅವನ ಹೆಸರು. ನಾನು ನಿನಗೆ ಹೇಳಬಾರದೂಂತಲೇ ಇದ್ದೆ.”

“ಆದರೆ ಯಾಕೆ?”

“ಅದನ್ನು ವಿವರಿಸುವುದು ಸಾಧ್ಯವಿಲ್ಲ.” ನನಗೆ ಯಾರಾದರೂ ತುಂಬಾ ಹಿಡಿಸಿದರೆ, ಅವರ ಹೆಸರನ್ನು ಯಾರಿಗೂ ಹೇಳೋದೇ ಇಲ್ಲ. ಅಂಥಾದ್ದನ್ನೆಲ್ಲ ಗುಟ್ಟಾಗಿ ಇಡೋದನ್ನೆ ರೂಢಿಸಿಕೊಂಡಿದ್ದೇನೆ. ಗುಟ್ಟು ಬಿಟ್ಟುಕೊಟ್ಟರೆ, ಅವರ ಒಂದು ಭಾಗವನ್ನು ಒಪ್ಪಿಸಿಬಿಟ್ಟಂತೆ, ಹೀಗೆ ಗುಟ್ಟಾಗಿ ಇಡೋದರಿಂದಲೇ ಆಧುನಿಕ ಬದುಕನ್ನು ನಮಗಾಗಿ ನಿಗೂಢವೂ! ಅಧ್ಭುತವೂ ಆದಂತೆ ಮಾಡಿಕೊಳ್ಳಬಹುದು. ನಾನೇನಾದರೂ ಹೊರಗೆ ಹೋದರೆ, ನಾನೆಲ್ಲಿಗೆ ಹೋಗುತ್ತಿದ್ದೇನೆಂದು ಯಾರಿಗೂ ತಿಳಿಸೋದೇ ಇಲ್ಲ.

ಹಾಗೆ ತಿಳಿಸಿದರೆ ಅರ್ಧ ಸಂತೋಷವನ್ನೇ ಕಳೆದುಕೊಂಡಂತೆ ಆಗುತ್ತದೆ. ನನಗೆ ಗೊತ್ತು ಇದೊಂದು ಅರ್ಥವಿಲ್ಲದ ಅಭ್ಯಾಸಾಂತ. ಆದರೂ ಅದೇನೋ, ಹಾಗೆ ಮಾಡುವುದರಿಂದ ಒಂದು ರೀತಿಯ ರೋಮಾಂಚನ ಉಂಟಾಗುತ್ತದೆ. ನನ್ನನ್ನು ನೀನು ಮುರ್ಖನೆಂದೇ ಭಾವಿಸುತ್ತಿರಬೇಕು “ಛೇ! ಛೇ ! ಹಾಗೇನಿಲ್ಲ ... ಖಂಡಿತ ಹಾಗೇನಿಲ್ಲ ಬೇಸಿಲ್” ಎಂದ ಹೆನ್ರಿ. ನನಗೆ ಮದುವೆ ಆಗಿರೋದನ್ನು ನೀನು ಮರೆತಿರಬೇಕು ಅನ್ನಿಸುತ್ತೆ. ಇದರ ಒಂದು ಮಜಾ ಏನಪ್ಪಾ ಅಂದ್ರೆ ಇಬ್ಬರಿಗೂ ಅಗತ್ಯವಾದ, ವಿವಾಹವೆಂಬುದು ಬದುಕನ್ನು ಒಂದು ಭ್ರಮೆಯಾಗಿ ಪರಿವರ್ತಿಸುತ್ತೆ. ನಾನೆಲ್ಲಿರುತ್ತೇನೆ ಅನ್ನೋದು ಅವಳಿಗೆ ಗೊತ್ತಿರೊಲ್ಲ, ಅವಳು ಏನು ಮಾಡ್ತಾಳೆನ್ನೋದು ನನಗೆ ಗೊತ್ತಿರೊಲ್ಲ. ಎಂದಾದರೂ, ಎಲ್ಲಾದರೂ ಪಾರ್ಟಿ ಗೀರ್ಟಿಗಳಲ್ಲಿ ಭೇಟಿಯಾದಾಗ ಇಬ್ಬರೂ– ಆಗಾಗ ಭೇಟಿಯಾಗುತ್ತಲೇ ಇರುತ್ತೇವೇನ್ನು – ರಾತ್ರಿ ಊಟಕ್ಕೆ ಎಲ್ಲಾದರೂ ಹೋದಾಗ ಅದೂ ಇದೂ ಏನೇನೋ ಕತೆಗಳನ್ನು ಹೇಳಿಕೊಳ್ಳುತ್ತೇವೆ. ಅದೂ ಇಬ್ಬರೂ ಗಂಭೀರವಾಗಿ ಕಾಣಿಸಿಕೊಳ್ಳುತ್ತಾ ! ಹಾಗೆ ಹೇಳೋದಾದ್ರೆ, ಅವಳೇ ನನಗಿಂತ ಚೆನ್ನಾಗಿ ಇಂಥಾದ್ದನ್ನೆಲ್ಲ ಹೇಳುತ್ತಾಳೆ. ಅವಳಿಗೆ ಎಲ್ಲಾ ನೆನಪಿರುತ್ತೆ ಯಾವುದರಲ್ಲೂ ಗೊಂದಲ ತೋರಿಸಿಕೊಳ್ಳೋದಿಲ್ಲ. ನಾನಿರೋದು ಹೇಗೋ ಪತ್ತೆ ಮಾಡಿಬಿಟ್ಟಳೂಂದ್ರೆ ಜಗಳ–ಗಿಗಳ ತೆಗೆಯೋದೇ ಇಲ್ಲ. ನನಗೆ ಅವಳು ಜಗಳ ಮಾಡಲೀಂತ ಅನ್ಸತ್ತೆ. ಆದರೆ ಅವಳು ಕೇವಲ ಒಂದು ಮುಗುಳ್ನಗೆ ಮಾತ್ರ ಬೀರುತ್ತಾಳೆ.

“ನಿನ್ನ ವೈವಾಹಿಕ ಜೀವನದ ಬಗ್ಗೆ ಮಾತಾಡೋದು ನನಗೆ ಇಷ್ಟವಾಗೊಲ್ಲ ಹ್ಯಾರಿ. ನೀನು ಒಳ್ಳೆ ಗಂಡ ಅಂತ ನಂಬಿದ್ದೀನಿ ಆದರೆ ನಿನ್ನಲ್ಲಿರುವ ಗುಣಗಳಿಗೆ ನೀನೇ ನಾಚಿಕೆ ಪಡ್ತೀ. ನೀನೊಂದು ಥರ ವಿಚಿತ್ರ ಮನುಷ್ಯ ! ನೀನು ಯಾವತ್ತೂ ನೀತಿ ಬಗ್ಗೆ ಮತಾಡೋದೂ ಇಲ್ಲ, ತಪ್ಪನ್ನೂ ಮಾಡೋದಿಲ್ಲ” ಎಂದು ಹೇಳಿ ಮನೆ ಮುಂದಿನ ತೋಟಕ್ಕೆ ಬಂದು ಕಲ್ಲು ಬೆಂಚಿನ ಮೇಲೆ ಕುಳಿತರು. ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ನಂತರ ಹೆನ್ರಿ ತನ್ನ ಗಡಿಯಾರ ನೋಡಿಕೊಂಡ.

"ಹ್ಯಾರಿ ಇನ್ನು ಹೊತ್ತಾಯಿತು ನನಗೆ ಹೋಗಬೇಕಾಗಿದೆ........ ಹೋಗೋಕೆ ಮುಂಚೆ ನಿನ್ನನ್ನು ಒಂದು ಪ್ರಶ್ನೆ ಕೇಳಬೇಕಾಗಿದೆ."

"ಏನದು"?

"ನಿನಗೇ ಗೊತ್ತು."

"ಖಂಡಿತ ನನಗೆ ಗೊತ್ತಿಲ್ಲ"

"ಅದೇ ನೀನ್ಯಾಕೆ ಈ ಭಾವಚಿತ್ರವನ್ನು ಪ್ರದರ್ಶನಕ್ಕೆ ಕಳಿಸೊಲ್ಲ ಅನ್ನೋದು."

"ಯಾಕೇಂತ ಈಗಾಗಲೇ ನಿನಗೆ ಹೇಳಿದ್ದೀನಿ."

"ಇಲ್ಲ. ಪೂರ್ತಿಯಾಗಿ ಕಾರಣ ವಿವರಿಸಲ್ಲಿಲ್ಲ. ಸುಮ್ಮನೆ, ಅದರಲ್ಲಿ ಹೆಚ್ಚಾಗಿ ನಾನೇ ಇದ್ದೀನಿ ಅಂತ ಮಾತ್ರ ಹೇಳಿದೆ ಅದು ಕೇಳೋಕೆ ಬಾಲಿಶ ಅನ್ಸತ್ತೆ."

ಬೇಸಿಲ್ ಹ್ಯಾರಿಯ ಮುಖದತ್ತ ನೋಡುತ್ತ ಹೇಳಿದ "ಯಾವುದೇ ಭಾವಚಿತ್ರವನ್ನು ಕಲಾವಿದ ತುಂಬಾ ಸಂವೇದನಾತ್ಮಕವಾಗಿ, ಭಾವನಾತ್ಮಕವಾಗಿ ಚಿತ್ರಿಸಿದಾಗ, ಅದರಲ್ಲಿ ತನ್ನನ್ನೇ ಹೆಚ್ಚಾಗಿ ಬಿಂಬಿಸುತ್ತಾನೆ ಹೊರತು, ರೂಪದರ್ಶಿಯನ್ನಲ್ಲ. ರೂಪದರ್ಶಿ ಎದುರು ಇರುವುದು ಕೇವಲ ಒಂದು ಆಕಸ್ಮಿಕ ಅವನು ಅವನ ಚಿತ್ರದಲ್ಲಿ ಕಾಣುವುದೇ ಇಲ್ಲ, ಕಾಣಿಸುವುದೆಲ್ಲ ಚಿತ್ರಕಾರನನ್ನು ಕಲಾವಿದನನ್ನು, ಅದಕ್ಕಾಗಿಯೇ ನಾನು ಅದನ್ನು ಪ್ರದರ್ಶನಕ್ಕೆ ಕಳಿಸೋದಿಲ್ಲ ಎಂದದ್ದು, ಭಾವಚಿತ್ರದಲ್ಲಿ ಮೂಡಿಸಿದ ವ್ಯಕ್ತಿಗೆ ಬದಲಾಗಿ ನನ್ನಾತ್ಮವನ್ನೇ ಪೂರ್ತಿಯಾಗಿ ಬಿಂಬಿಸಿರುತ್ತೇನೆ. ನನ್ನಂತರಂಗದ ರಹಸ್ಯವನ್ನು ಬಯಲು ಮಾಡಿರುತ್ತೇನೆ."

"ಅದೇನಪ್ಪ ಅಂಥ ರಹಸ್ಯ" ಎಂದು ನಕ್ಕು ಪ್ರಶ್ನಿಸಿದ.

ಹೇಳ್ತೀನಿ... ಆದರೆ ಹೇಳೋಕೆ ಹೆಚ್ಚೇನಿಲ್ಲ......... ಹೇಳಿದರೂ ನಿನಗೆ ಅರ್ಥವಾಗೊಲ್ಲ ಅರ್ಥವಾದರೂ ನಂಬೊಲ್ಲ."

"ಪರವಾಗಿಲ್ಲ ಹೇಳು ಅರ್ಥ ಮಾಡಿಕೊಳ್ಳೋದಕ್ಕೆ ಪ್ರಯತ್ನಿಸುತ್ತೇನೆ" ನಾನು ಹೇಳುವುದಕ್ಕೆ ಇಷ್ಟೇ ಕತೆ ...... ಒಂದೆರಡು ತಿಂಗಳ ಹಿಂದೆ ತುಂಬ ದೊಡ್ಡ ದೊಡ್ಡವರು ಇದ್ದ ಪಾರ್ಟಿಗೆ ಹೋಗಿದ್ದೆ. ಒಂದು ಹತ್ತು ನಿಮಿಷ ಮಾತಾಡ್ತಾ ಇರುವಷ್ಟರಲ್ಲಿ, ಯಾರೋ ನನ್ನತ್ತ ಕುತೂಹಲದಿಂದ ನೋಡುತ್ತಿರೋದು ನನ್ನ ಗಮನಕ್ಕೆ ಬಂತು. ಡೋರಿಯನ್ ಗ್ರೇ ಮೊದಲು ಕಣ್ಣಿಗೆ ಬಿದ್ದದ್ದು ಅಲ್ಲಿಯೇ, ನಮ್ಮಿಬ್ಬರ ಕಣ್ಣುಗಳೂ ಸೇರಿದಾಗ ನನ್ನಲ್ಲಿ ಯಾಕೋ ಒಂಥರಾ ಭಯ ಎನ್ನಿಸಿತು, ಬಿಳುಚಿಕೊಳ್ಳುವಂತಾಯಿತು. ಇನ್ನೂ ಹಾಗೇ ನೋಡುತ್ತಿದ್ದರೆ, ಅವನ ಆ ಅದ್ಭುತವಾದ, ಆಕರ್ಷಕವಾದ ವ್ಯಕ್ತಿತ್ವ ಇಡಿ–ಇಡಿಯಾಗಿ ನನ್ನನ್ನೂ ನನ್ನಾತ್ಮವನ್ನೂ ಕಡೆಯದಾಗಿ ನನ್ನ ಕಲೆಯನ್ನೆಲ್ಲಾ ಹೀರಿಕೊಂಡು ಬಿಡುತ್ತದೆ ಎನಿಸತೊಡಗಿತು. ನಿನಗೇ ಗೊತ್ತು ನಾನು ಯಾವುದೇ ಬಾಹ್ಯ ಪ್ರಭಾವಗಳಿಗೆ ಒಳಗಾಗುವುದನ್ನು ಇಷ್ಟಪಡುವುದಿಲ್ಲ. ನನಗೆ ನಾನು ಸ್ವತಂತ್ರವಾಗಿರಬೇಕು, ಎನಿಸುತ್ತೆ. ನನಗೆ ನಾನೇ ಯಜಮಾನ. ಆದರೆ ಡೋರಿಯನ್

ಗ್ರೇ ಪರಿಚಯವಾದಂತೆ, ನನ್ನ ಬದುಕಿನಲ್ಲಿ ಯಾವುದೋ ಗಂಡಾಂತರ ಬರಲಿದೆ ಎನಿಸತೊಡಗಿತ್ತು. ಅತಿಯಾದ ಸಂತೋಷ, ಅತಿಯಾದ ದುಃಖ ನನ್ನ ಹಣೆಬರಹದಲ್ಲಿ ಮುಂದೆ ಕಾಣಿಸಲಿದೆ ಎನಿಸಿತು. ನನ್ನ ಪುಕ್ಕಲುತನ ನನ್ನನ್ನು ಆ ಜಾಗದಿಂದ ಸರಿಯುವಂತೆ ಮಾಡಿತು.

"ಹಾಗೆಲ್ಲ ಏನೂ ಇರಲಾರದು."

"ನೀನು ಹೇಳೋದು ಸರೀನೂ ಇರಬಹುದು."

"ನನ್ನಲ್ಲಿ ಬಹಳ ಗರ್ವ ಇತ್ತು."

ಅಲ್ಲಿಂದ ಹೊರಡಬೇಕೂಂತ ಯೋಚಿಸಿದೆ. ಆದರೆ ಅಷ್ಟರಲ್ಲಿ ನನಗೆ ತುಂಬಾ ಬೇಕಾಗಿದ್ದ ಲೇಡಿ ಬ್ರ್ಯಾಂಡನ್ ತಡೆದು ನಿಲ್ಲಿಸಿದಳು. ಅಲ್ಲಿದ್ದವರಿಗೆಲ್ಲ ಪರಿಚಯ ಮಾಡಿಸಿದಳು. ನನ್ನ ಕಲೆಯ ಬಗ್ಗೆ ತುಂಬಾ ಹೊಗಳಿದಳು. ಅದೇ ಸಮಯಕ್ಕೆ ಮತ್ತೆ ನನ್ನ ದೃಷ್ಟಿ ಆ ಸುಂದರ ಹುಡುಗನ ಮೇಲೆಬಿತ್ತು. ನನ್ನಲ್ಲಿ ಸಂಚಲನ ಉಂಟಾಯಿತು. ಆತನಿಗೆ ನನ್ನನ್ನು ಪರಿಚಯಿಸುವಂತೆ ಆಕೆಯನ್ನು ಕೇಳಿಕೊಂಡೆ. ಆದರೆ ಯಾರ ಮಧ್ಯಸ್ಥಿಕೆಯೂ ಇಲ್ಲದೆ ನಾವೇ ಪರಸ್ಪರ ಪರಿಚಯ ಮಾಡಿಕೊಳ್ಳಬಹುದಿತ್ತು. ಆ ಹುಡುಗನೂ ಕೂಡಾ ಹಾಗೇ ಅಂದುಕೊಂಡಿದ್ದನ್ನು ನಂತರ ತಿಳಿಸಿದ. ಈ ರೀತಿಯಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಭೇಟಿಯಾಗಬೇಕೆಂದಿತ್ತೂಂತ ಅನಿಸುತ್ತೆ.

"ಆತನ ಬಗ್ಗೆ ಆಕೆ ಏನು ಹೇಳಿದಳು?"

"ಅವಳಿಂದ ತಿಳೀಬೇಕೂಂತ ನನಗೆ ಅನಿಸಲಿಲ್ಲ. ನಾನೇ ಸ್ವತಃ ಯಾರ ಬಗ್ಗೇನಾದರೂ ತಿಳಿದುಕೊಳ್ಳೋದನ್ನು ಇಷ್ಟಪಡ್ತೇನೆ."

ಸರಿಯಪ್ಪ, ಡೋರಿಯನ್ ಗ್ರೇ ಬಗ್ಗೆ ಮುಖ್ಯವಾಗಿ ಏನು ಹೇಳಿದಳು?

"ಇನ್ನೇನು ಅವನು ತುಂಬ ಸುಂದರ ಯುವಕ ಎಲ್ಲರನ್ನೂ ಸೆಳೆದುಕೊಳ್ಳುವ ಶಕ್ತಿ ಇರಿಸಿಕೊಂಡಿದ್ದಾನೆ. ಜೊತೆಗೆ ಅದೇನೋ ಪಿಯಾನೋ ಅಥವಾ ವಾಯಲಿನ್ ನುಡಿಸ್ತಾನೆ ಅಂತ ಕೂಡ ಹೇಳಿದಳು. ಅವಳ ಮಾತಿನ ರೀತಿಯಿಂದ ನಮ್ಮಿಬ್ಬರಿಗೂ ನಗು ತಡೆದುಕೊಳ್ಳಲು ಆಗಲಿಲ್ಲ......... ಸ್ವಲ್ಪ ಹೊತ್ತಿನಲ್ಲಿಯೇ ನಾವಿಬ್ಬರೂ ಹತ್ತಿರದ ಸ್ನೇಹಿತರಾದೆವು.

"ಹ್ಯಾರಿ, ಸ್ನೇಹ ಏನೂಂತ ಗೊತ್ತೇನು? ಹಾಗೆ ನೋಡಿದರೆ, ನಿನಗೆ ಸ್ನೇಹಾನೂ ಗೊತ್ತಿಲ್ಲ, ಶತ್ರುತ್ವಾನೂ ಗೊತ್ತಿಲ್ಲ. ಎಲ್ಲರನ್ನೂ ನೀನು ಇಷ್ಟಪಡ್ತೀಯ ಹಾಗೇ ಎಲ್ಲರಿಂದ ದೂರಾನೂ ಇರ್ತೀಯ. ನಾನು ಸ್ನೇಹಿತರನ್ನು ಅವರ ಸ್ಫುರದ್ರೂಪಕ್ಕಾಗಿ ಒಳ್ಳೆಯ ನಡತೆಗಾಗಿ, ಆಯ್ಕೆ ಮಾಡ್ಕೋತೀನಿ. ಶತ್ರುಗಳನ್ನೂ ಕೂಡಾ ಅವರ ಬುದ್ಧಿಮತ್ತೆಗಾಗಿ ಆಯ್ಕೆ ಮಾಡ್ಕೋತಿನಿ. ಇಲ್ಲಿವರೆಗೆ ನನ್ನ ಆಯ್ಕೆಯವರಲ್ಲಿ ಒಬ್ಬನಾದರೂ ಮೂರ್ಖ ಇರಲಿಲ್ಲ ಅವರೆಲ್ಲ ಬುದ್ಧಿವಂತರು. ಜೊತೆಗೆ ನನ್ನನ್ನು ತುಂಬಾ ಮೆಚ್ಚಿಕೊಂಡಿದ್ದಾರೆ ಕೂಡಾ. ನನ್ನ ಮಾತೆಲ್ಲ ಸುಳ್ಳು ಅಂತ ಅನ್ನಿಸಿದೆಯೇ ಇರಬಹುದು ಅಂತ ನನಗೆ ತೋರುತ್ತೆ.

"ನಿನಗೆ ತೋರಿದ್ದು ಸರಿ ಇರಬಹುದು ನೀನು ಹೇಳೋ ರೀತಿಯಲ್ಲಿ. ಅವರು ನಿನಗೆ ಪರಿಚಿತರು ಅಷ್ಟೆ! ಅದೇ ನಾನಿದ್ದಂತೆ!"

"ಅಯ್ಯೋ ಬೇಸಿಲ್ ನೀನು ಅದಕ್ಕಿಂತ ಹೆಚ್ಚು.

"ಆದರೆ ಸ್ನೇಹಿತ ಅನ್ನೋದಕ್ಕಿಂತ ಕಡಿಮೆ. ಬಹುಶಃ ಸೋದರರನ ಹಾಗೆ.

"ಓ ಸೋದರರನೇ! ನಾನು ಹಾಗೆಲ್ಲ ಅಂದುಕೊಳ್ಳೋದಿಲ್ಲ"

"ನೀನು ಹೇಳುವ ಒಂದಕ್ಷರವನ್ನೂ ನಾನು ಒಪ್ಪಿಕೊಳ್ಳೋದಿಲ್ಲ......... ಬಹುಶಃ ನೀನೂ ಕೂಡಾ!" ಹೋಗಲಿ ಬಿಡು. ಹೇಳು ಡೋರಿಯನ್ ಗ್ರೇನ ಎಷ್ಟು ಸಲ ಭೇಟಿ ಮಾಡ್ತಿ?"

"ಪ್ರತಿದಿನ. ಒಂದುದಿನ ಅವನನ್ನು ನೋಡದಿದ್ದರೂ ನನಗೆ ಇರೋಕೆ ಸಾಧ್ಯವಿಲ್ಲ. ಅವನು ನನಗೆ ಬೇಕೇ ಬೇಕು."

"ಎಷ್ಟು ಆಶ್ಚರ್ಯ! ನಿನಗೆ ನಿನ್ನ ಕಲೆಯ ಹೊರತಾಗಿ ಬೇರೇನೂ ಆಸಕ್ತಿಯಿಲ್ಲ ಅಂದು ಕೊಂಡಿದ್ದೆ" "ಈಗ ಅವನು ನನ್ನ ಕಲೆಯೇ ಆಗಿಬಿಟ್ಟಿದ್ದಾನೆ" ....... ಇನ್ನೂ ಹೇಳಬೇಕೂಂದ್ರೆ, ಪ್ರಪಂಚದ ಇತಿಹಾಸದಲ್ಲಿ ನನಗೆ ಎರಡೇ ಎರಡು ವಿಷಯಗಳು ಬಹಳ ಮಹತ್ವದ್ದೆನಿಸುತ್ತೆ. ಒಂದು ಕಲೆಯ ಅಭಿವ್ಯಕ್ತಿಗೆ ಹೊಸ ಮಾಧ್ಯಮದ ಹುಡುಕಾಟ. ಮತ್ತೊಂದು, ಕಲೆಗೆ ಹೊಸ ವ್ಯಕ್ತಿತ್ವದ ಸೇರ್ಪಡೆ. ಅವನ ಕೇವಲ ರೂಪದರ್ಶಿ ಮಾತ್ರವಲ್ಲ, ಅವನ ರೇಖಾಚಿತ್ರ ಬಿಡಿಸೋದು, ಬಣ್ಣ ಹಾಕೋದು ಅದಷ್ಟೇ ನನ್ನ ಕೆಲಸವಲ್ಲ. ಇವುಗಳನ್ನೆಲ್ಲಾ ಬಳಸ್ತೀನಿ ನಿಜ. ಆದರೆ ಅವನು ಅದೆಲ್ಲಕ್ಕಿಂತ ಮುಖ್ಯ. ನಾನು ಬಿಡಿಸಿರೋ ಚಿತ್ರ ನನಗೆ ತೃಪ್ತಿ ಕೊಟ್ಟಿಲ್ಲ. ಅವನ ಸೌಂದರ್ಯ ಸ್ವರೂಪ ಹೇಗಿದೇಂದ್ರೆ, ಅದನ್ನೆಲ್ಲ ಕಲೆಯಲ್ಲಿ ಇಳಿಸೋಕೆ ಆಗೋದೇ ಇಲ್ಲ. ಕಲೆಯಲ್ಲಿ ಮೂಡಿಸಲು ಸಾಧ್ಯವಾಗದ್ದು ಏನೂ ಇಲ್ಲ ಅನ್ನೋ ಸತ್ಯ ಗೊತ್ತಿದೆ. ನನ್ನ ಕಲಾಕೃತಿಯೂ ಅದ್ಭುತವಾಗಿಯೇ ಇದೆ. ನನ್ನ ಜೀವ ಮಾನದಲ್ಲೇ ಸಾಧಿಸಲಾಗದ್ದನ್ನು ಈ ಚಿತ್ರದಲ್ಲಿ ಸಾಧಿಸಿದ್ದೇನೆ. ಆದರೆ ಏನೋ ಒಂದು ಥರಾ ಅನ್ನಿಸುತ್ತಿದೆ. ಬಹುಶಃ ನೀನು ಅರ್ಥಮಾಡಿಕೊಳ್ಳಬಲ್ಲೆ....... ಅವನ ವ್ಯಕ್ತಿತ್ವ ನನಗೆ ಯಾಕೋ ಕಲೆಯಲ್ಲಿ ಒಂದು ವಿಶಿಷ್ಟವಾದ ಛಾಪು ಮೂಡಿಸಿದೆ ಅನಿಸುತ್ತೆ. ಅವನ ರೀತೀನೇ ಬೇರೆ ಥರದ್ದು ಅಂತ ನನ್ನ ಭಾವನೆ. ನಾನು ಎಲ್ಲವನ್ನು ಭಿನ್ನವಾಗಿ ಕಾಣುತ್ತೇನೆ, ಭಿನ್ನವಾಗಿ ಆಲೋಚಿಸುತ್ತೇನೆ. ಇಲ್ಲಿವರೆಗೆ ನನ್ನಿಂದ ನಿಗೂಢವಾಗಿದ್ದ ಬದುಕನ್ನು ಹೊಸರೀತಿಯಲ್ಲಿ ಪುನಃ ಸೃಷ್ಟಿಸಬಲ್ಲೆ. ಯೋಚಿಸುತ್ತಿದ್ದ ದಿನಗಳಲ್ಲಿ ಮೂಡಿದ ಒಂದು ಕನಸು ಅಂತ ಯಾರೋ ಹೇಳಿದ್ದು ನೆನಪಿಗೆ ಬರುತ್ತಿದೆ. ಅಂಥ ಕನಸೇ ಡೋರಿಯನ್ ಗ್ರೇ ಇರಬೇಕು! ನನ್ನ ಮುಂದೆ ಕೇವಲ ಅವನ ಉಪಸ್ಥಿತಿಯೇ ಅವನು ಸಾಮಾನ್ಯ ಹುಡುಗ ಅನ್ನೋದಕ್ಕಿಂತ ಬೇರೆಯಾಗಿ ಕಾಣಿಸುತ್ತಾನೆ. ದೇಹ ಮತ್ತು ಆತ್ಮಗಳು ಅಭಿನ್ನವೆನ್ನುವ ಸ್ಥಿತಿಯಲ್ಲಿ ನನಗವನು ಕಾಣಿಸುತ್ತಾನೆ. ನಿನಗೇ ಗೊತ್ತಿದೆ ನಾನೊಂದು ಅಮೂಲ್ಯವಾದ ಲ್ಯಾಂಡ್‌ಸ್ಕೇಪ್ ಬಿಡಿಸಿದ್ದೆ. ಅದಕ್ಕೆ ದೊಡ್ಡ ಮೊತ್ತ ಕೊಡೋಕ್ಕೂ ಜನ ಸಿದ್ಧರಾಗಿದ್ದರು. ಅದನ್ನು ಬಿಡಿಸುವಾಗ ಡೋರಿಯನ್ ನನ್ನ ಪಕ್ಕದಲ್ಲೇ ಕುಳಿತಿದ್ದ. ಆಗಲೇ ನನಗೆ ಅವನಿಂದ ಏನೋ ಒಂದು ಚೈತನ್ಯ ಶಕ್ತಿ ನನ್ನಲ್ಲಿ ಪ್ರವೇಶಿಸಿದಂತೆ ಆಯಿತು."

"ಬೇಸಿಲ್ ನನಗೆ ಇದೆಲ್ಲ ಒಂದು ರೋಚಕ ಅನುಭವದಂತೆ ಭಾಸವಾಗುತ್ತಿದೆ. ಅವನನ್ನು ನಾನು ಖಂಡಿತ ನೋಡಲೇ ಬೇಕು" ಎಂದ ಹ್ಯಾರಿ. ಬೇಸಿಲ್ ಎದ್ದು ಒಂದೆರಡು ನಿಮಿಷ ಹೊರಗೆ ಹೋಗಿದ್ದು ನಂತರ ಒಳಗೆ ಬಂದ.

"ಹ್ಯಾರಿ ಡೋರಿಯನ್ ಗ್ರೇ ನನ್ನ ಕಲೆಯ ಗುರಿಯೇ ಆಗಿದ್ದಾನೆ. ಅವನೇ ನನಗೆ ಸರ್ವಸ್ವ. ನೀನು ಅವನನ್ನು ನೋಡಿದಾಗ ಅಸಾಮಾನ್ಯವಾದದ್ದೇನೂ ಕಾಣುವುದಿಲ್ಲ. ಆದರೆ ನಾನು ಅವನಲ್ಲಿ ನನ್ನ ಸರ್ವಸ್ವವನ್ನೂ ಕಾಣುತ್ತೇನೆ. ನನ್ನೆದುರು ಭೌತಿಕವಾಗಿ ಇರುವುದಕ್ಕಿಂತ ನನ್ನ ಕಲೆಯಲ್ಲಿ ತುಂಬಿ ಕೊಂಡಿರುತ್ತಾನೆ. ಅವನೇ ನನಗೆ ಸ್ಫೂರ್ತಿ. ನನ್ನ ಕಲೆಯ ರೇಖೆಗಳಲ್ಲಿ ತಿರುವುಗಳಲ್ಲಿ ಅವನು ಕಾಣಿಸಿಕೊಳ್ಳುತ್ತಾನೆ. ಕೆಲವು ಬಣ್ಣಗಳಲ್ಲಿ, ಬಣ್ಣಗಳ ಸೂಕ್ಷ್ಮತೆಗಳಲ್ಲಿ ಅವನಿದ್ದೇ ಇರುತ್ತಾನೆ."

"ಇಷ್ಟೆಲ್ಲ ಅದ್ಭುತ ಅಂಶಗಳು ಅದರಲ್ಲಿರುವಾಗ ಅದನ್ನೇಕೆ ಪ್ರದರ್ಶಿಸುವುದಿಲ್ಲ." "ಲಾರ್ಡ್ ಹೆನ್ರಿ ಕೇಳಿದ "ಇಲ್ಲ ನನಗರಿವಿಲ್ಲದೆ, ನನ್ನಲ್ಲಿನ ಕಲೆಯ ನಿಗೂಢ ಸೂಕ್ಷ್ಮತೆಗಳನ್ನೆಲ್ಲಾ ಸುರಿದಿದ್ದೇನೆ. ಅವನಿಗೂ ಅದು ತಿಳಿದಿಲ್ಲ. ನಾನು ಹೇಳಿಲ್ಲ. ಆದರೆ ಜಗತ್ತು ಅದನ್ನು ಗುರುತಿಸಬಹುದು. ಅವರ ಪತ್ತೇದಾರಿ ಕಣ್ಣುಗಳಲ್ಲಿ ಸಿಲುಕಿಕೊಳ್ಳಬಹುದು. ನನಗೆ ಅದು ಇಷ್ಟವಿಲ್ಲ. ಅವರ ಸೂಕ್ಷ್ಮದರ್ಶಕ ಕಣ್ಣುಗಳಿಗೆ ನನ್ನಾತ್ಮವನ್ನು ಒಡ್ಡುವುದು ಸಾಧ್ಯವಿಲ್ಲ. ಆ ಹುಡುಗನಿಗೂ ಮಿಗಿಲಾಗಿ ಅದರಲ್ಲಿ ನನ್ನನ್ನು ನಗ್ನಗೊಳಿಸಿಕೊಂಡಿದ್ದೇನೆ."

"ಆದರೆ ಕವಿಗಳು ಹಾಗಲ್ಲ ನಿನ್ನಷ್ಟು ಸೂಕ್ಷ್ಮವಾಗಿರಲಾರರು."

"ಅದಕ್ಕೇ ಅವರನ್ನು ಕಂಡರೆ ನನಗಾಗುವುದಿಲ್ಲ" ಗಟ್ಟಿಯಾಗಿ ಹೇಳಿದ ಹಾಲ್‌ವಾರ್ಡ್. ಚಿತ್ರಕಲಾವಿದ ಸುಂದರವಾದದ್ದೆಲ್ಲವನ್ನೂ ಸೃಷ್ಟಿಸಬೇಕು. ಆದರೆ ಎಂದೂ ತನ್ನ ಬದುಕಿನ ಸಂಗತಿಗಳನ್ನು ಅದರಲ್ಲಿ ಇಳಿಸಬಾರದು. ನಾವು ಎಂಥಾ ಕಾಲದಲ್ಲಿದ್ದೇವೆಂದರೆ, ಕಲೆಯನ್ನೇ ಆತ್ಮಚರಿತ್ರೆಗಳನ್ನಾಗಿ ಮಾಡಹೊರಟಿದ್ದೇವೆ. ಸೌಂದರ್ಯದ ಅಮೂರ್ತ ಪ್ರಜ್ಞೆಯನ್ನು ಕಳೆದುಕೊಂಡಿದೆ. ನಾನು ಅದನ್ನು ಜಗತ್ತಿಗೆ ಪರಿಚಯಿಸಬಯಸುತ್ತೇನೆ. ಆದ್ದರಿಂದಲೇ ನಾನು ನನ್ನ ಡೋರಿಯನ್ ಗ್ರೇನ ಭಾವಚಿತ್ರವನ್ನು ಪ್ರದರ್ಶಿಸಬಯಸುವುದಿಲ್ಲ.

"ನಿನ್ನ ಮಾತನ್ನು ನಾನು ಒಪ್ಪುವುದಿಲ್ಲ ಬೇಸಿಲ್. ಆದರೂ ಹೇಳು ಡೋರಿಯನ್ ಗ್ರೇ ಕೂಡಾ ನಿನ್ನನ್ನು ನಿನ್ನಷ್ಟೇ ಪ್ರೀತಿಸುತ್ತಾನೆಯೇ?"

ಒಂದು ಕ್ಷಣ ಸುಮ್ಮನಿದ್ದು, ಕಲಾವಿದ ಉತ್ತರಿಸಿದ "ಹೌದು ಇಷ್ಟಪಡುತ್ತಾನೆ ಪ್ರೀತಿಸುತ್ತಾನೆ. ಅದು ನನಗೆ ಗೊತ್ತು. ಅವನ ಜೊತೆ ಮಾತಾಡುವುದೆಂದರೆ ನನಗೆ ತುಂಬ ಸಂತೋಷ, ಅವನಲ್ಲಿ ಹೇಳಿಕೊಳ್ಳಬಾರದ್ದನ್ನೆಲ್ಲ ಹೇಳಿಕೊಂಡುಬಿಡುತ್ತೇನೆ. ನಂತರ ಹೇಳಬಾರದಿತ್ತೇನೋ ಎಂದುಕೊಳ್ಳುತ್ತೇನೆ. ಆಗೊಮ್ಮೆ ಈಗೊಮ್ಮೆ ಹುಚ್ಚುಚ್ಚಾಗಿ ಮಾತಾಡಿ ನನಗೆ ನೋವುಂಟು ಮಾಡುವುದರಲ್ಲಿ ಖುಷಿಪಡುತ್ತಾನೆ. ಆಗ ನನಗೆ ಅನಿಸುತ್ತೆ, ನಾನು ನನ್ನಾತ್ಮವನ್ನೆಲ್ಲಾ ಕೆಲಸಕ್ಕೆ ಬಾರದ, ಬೆಲೆ ಅರಿಯದೆ, ಅದನ್ನು ಒಂದು ಸಾಮಾನ್ಯ ಹೂವೆಂದು ಪರಿಗಣಿಸಿ ಕೋಟಿಗೆ ಸಿಕ್ಕಿಸಿಕೊಂಡು, ತನ್ನ ಪ್ರತಿಷ್ಠೆ ಪ್ರದರ್ಶನಕ್ಕೆ ಒಂದು ಅಲಂಕಾರವೆಂಬಂತೆ ಭಾವಿಸುವವನಿಗೆ ಕೊಟ್ಟುಬಿಟ್ಟನೇನೋ ಎಂದು ಪರಿತಪಿಸುತ್ತೇನೆ."

"ಈಗ ಅವೆಲ್ಲ ಯೋಚನೆಗಳು ಸರಿ ಎನಿಸುತ್ತೆ. ನಿನಗೇ ಗೊತ್ತಿರಬಹುದು ಪ್ರತಿಭೆ, ಸೌಂದರ್ಯಕ್ಕಿಂತ ಹೆಚ್ಚು ಕಾಲ ಉಳಿಯುತ್ತೆ. ಒಂದಲ್ಲ ಒಂದು ದಿನ ನಿನ್ನ ಆ ಗೆಳೆಯನು ಭಾವಚಿತ್ರದ ಹೊರಗಿನಿಂದ ಕಾಣಿಸಿಕೊಳ್ಳುತ್ತಾನೆ. ಅವನ ಬಣ್ಣಗಳು ಆಗ ನಿನಗೆ ಇಷ್ಟವಾಗುವುದೇ ಇಲ್ಲ. ಮನಸ್ಸಿನಲ್ಲಿ ಅವನನ್ನು ದ್ವೇಷಿಸಲು ಆರಂಭಿಸುತ್ತೀಯ. ನಿನ್ನ ಜೊತೆ ಎಷ್ಟು ಕೆಟ್ಟದ್ದಾಗಿ ನಡೆದುಕೊಳ್ಳುತ್ತಾನೆಂಬುದನ್ನು ಗಂಭೀರವಾಗಿ ಯೋಚಿಸು..... ಖಂಡಿತವಾಗಿಯೂ ಅವನ ಬಗ್ಗೆ ನಿನ್ನ ನಿಲುವು ಬದಲಾಗುತ್ತೆ.

"ಹ್ಯಾರಿ ಹಾಗೆಲ್ಲ ಹೇಳಬೇಡ. ನಾನು ಬದುಕಿರುವವರೆಗೂ ಡೋರಿಯನ್ ಗ್ರೇ ನನ್ನನ್ನು ಆಕ್ರಮಿಸಿಕೊಂಡಿರುತ್ತಾನೆ. ನನ್ನಂತೆ ನಿನಗೆ ಆಲೋಚಿಸಲು ಸಾಧ್ಯವೇ ಇಲ್ಲ. ಪದೇ ಪದೇ ನೀನು ಬದಲಾಗುತ್ತಲೇ ಇರುತ್ತೀ ಅನ್ನೋದು ನನಗೆ ಗೊತ್ತು."

ಇಬ್ಬರೂ ಸಿಗಾರ್ ಸೇವಿಸುತ್ತಾ ಆಲೋಚನೆಯಲ್ಲಿ ಮುಳುಗಿದ್ದರು. ಥಟ್ಟನೆ ಏನೋ ಆಲೋಚನೆ ಹೊಳೆದಂತೆ ಹಾಲ್‌ವಾರ್ಡ್ ಕಡೆಗೆ ಮುಖ ಮಾಡಿ ಹೇಳಿದ.

"ಗೆಳೆಯಾ ನನಗೊಂದು ವಿಷಯ ನೆನಪಾಯಿತು."

"ನೆನಪಾಯ್ತು ! ಏನದು?"

"ಅದೇ ಡೋರಿಯನ್ ಗ್ರೇ ಹೆಸರನ್ನು ಎಲ್ಲಿಯೋ ಕೇಳಿದ್ದೆ ಅನ್ನೋದು."

"ಎಲ್ಲಿ?" ಮುಖದ ಮೇಲೆ ಒಂದು ಬಗೆಯ ಸಿಡುಕನ್ನು ತಂದುಕೊಂಡು ಕೇಳಿದ"

"ಸಿಟ್ಟಾಗಬೇಡ ಬೇಸಿಲ್. ನನ್ನ ಆಂಟಿ ಅಗಾಥಾ ಒಂದು ಸಲ ಒಬ್ಬ ಹುಡುಗನ ಬಗ್ಗೆ ಹೇಳಿದ್ದಳು. ಅವನ ಹೆಸರು ಡೋರಿಯನ್ ಗ್ರೇ ಅಂತ ಹೇಳಿದ್ದೂ ನೆನಪಿದೆ. ಆದರೆ ಅವನು ನೋಡಲು ತುಂಬಾ ಸುಂದರವಾಗಿದ್ದಾನೆ ಅನ್ನೋ ವಿಷಯ ಮಾತ್ರ ಹೇಳಿರಲಿಲ್ಲ. ಸಾಮಾನ್ಯವಾಗಿ ಹೆಂಗಸರು ಗಂಡಸರ ಸೌಂದರ್ಯದ ಬಗ್ಗೆ ಹೊಗಳುವುದಿಲ್ಲ. ಅವನು ಬಹಳ ಪ್ರಾಮಾಣಿಕ ಮತ್ತು ಸ್ವಭಾವದಲ್ಲಿ ತುಂಬ ಒಳ್ಳೆಯವನು ಅಂತ ಮಾತ್ರ ಹೇಳಿದ್ದಳು. ಅವನು ನಿನ್ನ ಸ್ನೇಹಿತ ಅಂತ ಗೊತ್ತಿದ್ದರೆ ಚೆನ್ನಾಗಿತ್ತು."

"ಗೊತ್ತಾಗದೆ ಇದ್ದದ್ದೇ ಒಳ್ಳೇದಾಯ್ತು!"

"ಯಾಕೆ?"

"ನೀನು ಅವನನ್ನು ಭೇಟಿಯಾಗಬಾರದು ಅಷ್ಟೇ!"

"ನಾನು ಅವನನ್ನು ಭೇಟಿಯಾಗಬಾರದೂಂತ ನಿನ್ನ ಇಷ್ಟಾನಾ?"

"ಹೌದು"

ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ಬಟ್ಲರ್,

"ಸಾರ್ ಡೋರಿಯ್ಯನ್ ಗ್ರೇ ಬಂದಿದ್ದಾರೆ" ಎಂದ. ಹ್ಯಾರಿ ನಗುತ್ತಾ, ಬೇಸಿಲ್ ಈಗ ನೀನು ಅವನನ್ನು ನನಗೆ ಪರಿಚಯಿಸಲೇ ಬೇಕು.

ಹ್ಯಾರಿ ಬಂದಿದ್ದವನ ಕಡೆ ತಿರುಗಿ, "ಹೋಗು. ಮಿಸ್ಟರ್ ಡೋರಿಯನ್ ಗ್ರೇಗೆ ಹೇಳು, ಈಗಲೇ ಒಂದೆರಡು ನಿಮಿಷದಲ್ಲಿ ಬರುತ್ತೇನೆ" ಎಂದು. ಬಟ್ಲರ್ ತಲೆ ಬಗ್ಗಿಸಿಕೊಂಡು ಹೊರನಡೆದ. ಹೆನ್ರಿಯತ್ತ ನೋಡಿ ಹೇಳಿದ "ಡೋರಿಯನ್ ಗ್ರೇ ನನ್ನ ಖಾಸಾ ಗೆಳೆಯ. ಅವನದು ಸರಳ ಸುಂದರ ವ್ಯಕ್ತಿತ್ವ ನಿನ್ನ ಆಂಟಿ ಅವನ ಬಗ್ಗೆ ಹೇಳಿದ್ದು ನಿಜ. ನೀನು ಅವನನ್ನು ದಾರಿ ತಪ್ಪಿಸಿ ಹಾಳು ಮಾಡಬೇಡ. ಅವನ ಮೇಲೆ ನಿನ್ನ ಪ್ರಭಾವ ಹೇರಬೇಡ. ನಿನ್ನ ಪ್ರಭಾವದಿಂದ ಒಳ್ಳೆಯದಾಗುವುದಿಲ್ಲ. ಪ್ರಪಂಚ ದೊಡ್ಡದಾಗಿದೆ. ಎಷ್ಟೋ ಮಂದಿ ಇವನಿಗಿಂತ ಮಹತ್ವದವರು ಇದ್ದಾರೆ. ಆದರೆ ನೀನು ಅವನನ್ನು ನನ್ನಿಂದ ಕಸಿದುಕೊಳ್ಳಬೇಡ. ದೂರ ಮಾಡಬೇಡ. ನನ್ನ ಕಲೆಗೆ ಆಕರ್ಷಕತೆ ಮೋಹಕತೆಗಳನ್ನು ಕೊಡುತ್ತಿರುವವನು ಅವನೇ! ಕಲಾವಿದನಾದ ನನ್ನ ಬದುಕು ಅವನನ್ನೇ ಅವಲಂಬಿಸಿದೆ. ಹೇಳಿದ್ದು ಅರ್ಥವಾಯಿತೇ? ನಿನ್ನ ಮೇಲೆ ನನಗೆ ಭರವಸೆಯಿದೆ."

"ಏನು ನೀನು ಮಾತಾಡ್ತಾ ಇರೋದು? ಅರ್ಥವಿಲ್ಲದ್ದು!"

❖

## ಅಧ್ಯಾಯ - 2

ಅವರಿಬ್ಬರೂ ಒಳಗೆ ಬಂದಾಗ, ಡೋರಿಯನ್ ಗ್ರೇ ಪಿಯಾನೋ ಪಕ್ಕದಲ್ಲಿ ಕುಳಿತಿದ್ದ ಬೇಸಿಲ್ ಹೇಳಿದ್ದು ನಿಜ ಎನಿಸಿತು. ಅವನು ತುಂಬ ಸುಂದರವಾಗಿದ್ದ. ಚಿನ್ನದ ಬಣ್ಣದ ಕೂದಲು. ಆಕರ್ಷಕವಾದ ಮುಖ. ಪಿಯಾನೋ ಕಡೆ ಬೆನ್ನು ಮಾಡಿ ಕೂತಿದ್ದ ಡೋರಿಯನ್ ಗ್ರೇ ಷೂಮನ್‌ನ 'ಫಾರೆಸ್ಟ್ ಸೀನ್ಸ್' ಪುಸ್ತಕದ ಪುಟಗಳನ್ನು ತಿರುವಿಹಾಕುತ್ತಿದ್ದ" ಬೇಸಿಲ್ ನನಗಿದನ್ನು ಕೊಡುವಿಯಾ ಅದರಲ್ಲಿ ತುಂಬ ಕಲಿಯಬೇಕಾದ್ದಿದೆ. ಅವೆಲ್ಲವೂ ತುಂಬಾ ಚೆನ್ನಾಗಿವೆ."

"ಕೊಡ್ತೀನಿ. ಆದರೆ ಇವತ್ತು ನೀನು ನನಗೆ ರೂಪದರ್ಶಿಯಾಗಿ ಹೇಗೆ ಕೂತು ಸಹಕರಿಸುತ್ತೀಯೋ ಅದರ ಮೇಲೆ ಆಧರಿಸಿದೆ ಡೋರಿಯನ್."

"ಓಹೋ! ನನಗೆ ಕೂತೂ ಕೂತು ಸಾಕಾಗಿದೆ. ನನಗೆ ಲೈಫ್ ಸೈಜ್ ಭಾವಚಿತ್ರ ಬೇಕಾಗಿಲ್ಲ." ಎಂದು ಆ ಹುಡುಗ ಉತ್ತರಿಸಿದ. ಅದೇ ಸಮಯದಲ್ಲಿ ಅವನ ದೃಷ್ಟಿ ಹೆನ್ರಿ ಮೇಲೆ ಬಿದ್ದದ್ದೇ ನಾಚಿಕೆ ಎನಿಸಿತು. ಕೆನ್ನೆ ಕೆಂಪಾಯಿತು. ತಕ್ಷಣ ಎದ್ದು ನಿಂತ.

"ಕ್ಷಮಿಸು ಬೇಸಿಲ್. ನಿನ್ನ ಗೆಳೆಯರು ಯಾರೋ ಇಲ್ಲಿದ್ದಾರೆ ಅನ್ನೋದು ಗಮನಕ್ಕೆ ಬರಲಿಲ್ಲ."

"ಈತ ನನ್ನ ಆಕ್ಸ್‌ಫರ್ಡ್ ಗೆಳೆಯ ಲಾರ್ಡ್ ಹೆನ್ರಿ ಒಟ್ಟನ್ ಡೋರಿಯನ್. ಈಗ ತಾನೇ ನಿನ್ನ ಬಗ್ಗೆ, ನೀನೆಷ್ಟು ಅಮೂಲ್ಯವಾದ ರೂಪದರ್ಶಿ ಅಂತ ಹೇಳ್ತಾ ಇದ್ದೆ. ಆದರೆ ನೀನು ಅದನ್ನೆಲ್ಲ ಹಾಳುಮಾಡಿದೆ."

"ನಿನ್ನನ್ನು ಭೇಟಿಯಾದ ಸಂತೋಷವನ್ನೇನೂ ಹಾಳು ಮಾಡಲಿಲ್ಲ ಬಿಡು ಡೋರಿಯನ್" ಎಂದು ಹೇಳುತ್ತಾ ಲಾರ್ಡ್ ಹೆನ್ರಿ ತನ್ನ ಕೈಯನ್ನು ಅವನತ್ತ ಚಾಚಿದ.

"ನನ್ನ ಆಂಟಿ ಯಾವಾಗಲೂ ನಿನ್ನ ಬಗ್ಗೆ ಹೇಳುತ್ತಿರುತ್ತಾರೆ. ಆಕೆಯ ಆತ್ಮೀಯ ಗೆಳೆಯರಲ್ಲಿ ನೀನೂ ಒಬ್ಬ. ಹಾಗೆಯೇ ನೀನೊಬ್ಬ ಬಲಿಪಶು ಕೂಡಾ!"

"ಈಗ ನಾನು ಅವರ ಅಸಮಾಧಾನದ ವಲಯದಲ್ಲಿದ್ದೀನಿ" ಡೋರಿಯನ್, ಪಶ್ಚಾತ್ತಾಪದ ದನಿಯಲ್ಲಿ ಹೇಳಿದ. ನಾವಿಬ್ಬರೂ ಹೋದ ಮಂಗಳವಾರ ವೈಟ್ ಚಾಪೆಲ್ ಕ್ಲಬ್‌ಗೆ ಜೊತೆಯಾಗಿ ಹೋಗಬೇಕಿತ್ತು. ನಾನು ಅದರ ಬಗ್ಗೆ ಪೂರ್ತಿಯಾಗಿ ಮರೆತು ಬಿಟ್ಟೆ. ನಾವಿಬ್ಬರೂ ಡ್ಯೂಯೆಟ್ ನುಡಿಸಬೇಕಿತ್ತು. ಆಕೆ ನನ್ನ ಬಗ್ಗೆ ಏನೆಂದುಕೊಳ್ಳುತ್ತಾರೋ ! ಅವರಿಗೆ ಫೋನ್ ಮಾಡೋಕೂ ಹೆದರಿಕೆಯಾಗುತ್ತೆ" ಎಂದ.

"ಏನೂ ಬೇಜಾರು ಮಾಡ್ಕೋಬೇಡ. ನಾನು ಆಕೆ ಹತ್ತಿರ ಮಾತಾಡ್ತೀನಿ, ನೀನು ಬರಲಿಲ್ಲಾಂತ ಆಕೆ ತಪ್ಪಾಗೇನೂ ತಿಳ್ಕೋಳ್ಳೋದಿಲ್ಲ. ಹೇಗೋ ಮಾಡಿ ಪಿಯಾನೋ ಮುಂದೆ ಕೂತರೆ ಸಾಕು ಇಬ್ಬರದೂ ಇದ್ದಂತೆ ಮ್ಯಾನೇಜ್ ಮಾಡಿಬಿಡ್ತಾಳೆ."

"ಆಕೆಗೆ ಅದು ಬೇಜಾರಾಗಿರಬಹುದು. ನನಗದು ಸರಿ ಅಂತ ಅನಿಸೋದಿಲ್ಲ" ಎಂದು ನಕ್ಕ. ಮತ್ತೊಮ್ಮೆ ಹೆನ್ರಿ ಅವನತ್ತ ನೋಡಿದ. ನಿಜವಾಗಲೂ ಡೋರಿಯನ್ ಅದ್ಭುತ ಸುಂದರ ಯುವಕ. ಅವನಲ್ಲಿ ಏನೋ ಒಂದು ಬಗೆಯ ಆಕರ್ಷಕತೆ ಇದೆ ಎನಿಸಿತು.

"ಡೋರಿಯನ್ ನಿಜವಾಗಿಯೂ ನೀನೊಬ್ಬ ಮನ್ಮಥರೂಪನೇ!" ಎಂದು ಹೇಳಿ, ದಿವಾನ್‌ನಲ್ಲಿ ಕುಳಿತು ಸಿಗರೇಟು ಹಚ್ಚಿದ.

ಕಲಾವಿದ ಬಣ್ಣಗಳನ್ನು ಬೆರೆಸುವುದರಲ್ಲಿ ಮಗ್ನನಾಗಿದ್ದ. ಅವನ ಮುಖದಲ್ಲಿ ಏನೋ ದುಗುಡದ ಛಾಯೆ ಇದ್ದಂತಿತ್ತು. ಹೆನ್ರಿ ಕಡೆ ಕಣ್ಣಾಡಿಸಿದ.

"ಹ್ಯಾರಿ ನಿನಗೆ ಅಭ್ಯಂತರವಿಲ್ಲದಿದ್ದರೆ, ಈ ಚಿತ್ರವನ್ನು ಮುಗಿಸಲು ಬಿಡು" ಒಂದು ವೇಳೆ ನಾನು ನಿನಗೆ ಹೋಗಲು ಸೂಚಿಸಿದರೆ, ತಪ್ಪು ತಿಳಿಯುವುದಿಲ್ಲತಾನೆ?" ಲಾರ್ಡ್ ಹೆನ್ರಿ ನಗುತ್ತಾ ಡೋರಿಯನ್ ಕಡೆ ತಿರುಗಿ

"ಮಿಸ್ಟರ್ ಗ್ರೇ ನಾನು ಹೋಗಬೇಕೂಂತ ನಿನಗೂ ಅನಿಸುತ್ತೆ ಏನು?"

"ಬೇಡ ಹೆನ್ರಿ, ಬೇಸಿಲ್‌ನ ಮೂಡ್ ಚೆನ್ನಾಗಿಲ್ಲ. ಆ ಸ್ಥಿತಿಯಲ್ಲಿ ನನಗೊಬ್ಬನಿಗೇ ಇಲ್ಲಿರಲು ಇಷ್ಟ ಆಗೋದಿಲ್ಲ."

ಹೋಗಲಿ ಬಿಡು. ನಾನೇನೂ ಓಡಿ ಹೋಗೊಲ್ಲ, ಇರೂಂತ ನೀನು ಹೇಳ್ತಿದ್ದೀ. ಏನು ಗೆಳೆಯ ಬೇಸಿಲ್, ಇನ್ನೂ ನಿನ್ನ ಅಭ್ಯಂತರ ಇದೆ ಅಂತ ಅನಿಸುತ್ತೇನು? ನೀನೊಂದು ಸಲ ಹೇಳಿದ್ದೇ ಕೂಡಾ ನಿನ್ನ ರೂಪದರ್ಶಿ ಜೊತೆಗೆ ಯಾರಾದರೂ ಹರಟೆ ಹೊಡೆಯಲು ಇದ್ದರೆ ಚೆನ್ನಾಗಿರುತ್ತೇಂತ!"

ತುಟಿ ಕಚ್ಚಿಕೊಂಡು "ಸರಿ ಬಿಡು. ಡೋರಿಯನ್ ಇಷ್ಟಪಟ್ಟರೆ ಕೂತ್ಕೋಬಹುದು. ಡೋರಿಯನ್ ಏನು ಹೇಳಿದರೆ ಅದು ಅವನ ಹೊರತು ಬೇರೆ ಎಲ್ಲರಿಗೂ ಒಂದು ಆದೇಶ ಇದ್ದಂತೆ. ಲಾರ್ಡ್ ಹೆನ್ರಿ ತನ್ನ ಹ್ಯಾಟ್ ಮತ್ತು ಗ್ಲೋವ್ಸ್ ಕೈಗೆತ್ತಿಕೊಂಡ. ನೀನೇನೋ ಬಲವಂತ ಮಾಡಿದೆ. ಆದರೂ ನನಗೆ ಈಗ ಹೋಗಲೇ ಬೇಕಿದೆ ಎಂದು, ಎದ್ದು ಇಬ್ಬರ ಕ್ಷಮೆ ಕೋರಿ ಹೊರಟ. ಹೊರಡುವಾಗ ಸಾರಿ ಡೋರಿಯನ್, ನಿನ್ನಿಂದ ದೂರ ಹೋಗಲೇ ಬೇಕಾಯ್ತು" – ಎಂದು ಹೇಳುವುದನ್ನು ಮರೆಯಲಿಲ್ಲ.

"ಬೇಸಿಲ್" ಡೋರಿಯನ್ ಜೋರಾಗಿ ಅಬ್ಬರಿಸಿದ. ಹೆನ್ರಿ ಹೊರಟುಹೋದರೆ, ನಾನೂ ಹೋಗುತ್ತೇನೆ. ನೀನು ಚಿತ್ರ ಬಿಡಿಸುವಾಗ ಬಣ್ಣಗಳನ್ನು ಹಾಕುವಾಗ, ತುಟಿ ಎರಡು ಮಾಡದೆ ಗುಮ್ಮಗಿರುತ್ತೀ ಸುಮ್ಮನೆ ಪ್ಲಾಟ್‌ಫಾರಂ ಮೇಲೆ ನಿಂತುಕೊಂಡಿರೋದು ಅಸಹನೀಯ ಎನಿಸುತ್ತಿರುವಾಗ, ಮುಖದ ಮೇಲೆ ಮಂದಹಾಸ ತಂದುಕೊಳ್ಳೋದು ಒಂದು ಭಯಂಕರ ಅನುಭವ. ಅದಕ್ಕೇ ಹೇಳ್ತಿದ್ದೀನಿ. ನಿನ್ನ ಗೆಳೆಯ ಹೆನ್ರಿಯನ್ನು ಇರೋದಕ್ಕೆ ಹೇಳು. ನಾನು ಒತ್ತಾಯಿಸುತ್ತಿದ್ದೇನೆ" ಎಂದ.

"ಇದ್ದು ಬಿಡು ಹ್ಯಾರಿ. ಡೋರಿಯನ್ ಮತ್ತು ನಾನು ಇಬ್ಬರೂ ಬೇಡಿಕೊಳ್ತಿದ್ದೇವೆ......... ನಿಜ, ನಾನು ಕೆಲಸದಲ್ಲಿ ಮಗ್ನನಾಗಿರುವಾಗ ಯಾರ ಕಡೆ ನೋಡೋದೂ ಇಲ್ಲ. ಯಾರ ಮಾತನ್ನು ಕೇಳಿಸಿಕೊಳ್ಳೋದೂ ಇಲ್ಲ. ಸಹಜವಾಗಿ ನನ್ನ ರೂಪದರ್ಶಿಗಳಿಗೆ ಅದು ಅಸಹನೀಯವೆನಿಸುವುದರಲ್ಲಿ ಆಶ್ಚರ್ಯವಿಲ್ಲ" ಎಂದು ಹೇಳಿ ಡೋರಿಯನ್ ಗ್ರೇಯನ್ನು ವೇದಿಕೆ ಮೇಲೆ ಹತ್ತಿ ನಿಂತುಕೊಳ್ಳಲು ಹೇಳಿದ. ಡೋರಿಯನ್ ಬೇಸಿಲ್ ಹೇಳಿದಂತೆ ಮಾಡಿದ. ಒಂದು ಕ್ಷಣದ ನಂತರ.

"ಹೆನ್ರಿ, ಬೇಸಿಲ್ ಯಾವಾಗಲೂ ನೀನು ಕೆಟ್ಟ ರೀತಿಯಲ್ಲಿ ಜನರನ್ನೂ ಪ್ರಭಾವಿಸುತ್ತೀ ಅಂತ ಹೇಳ್ತಾನೆ. ಅದು ನಿಜವೇನು?" ಎಂದು ಕೇಳಿದ ಡೋರಿಯನ್.

"ನೋಡು ಗ್ರೇ, ಪ್ರಭಾವದಲ್ಲಿ ಕೆಟ್ಟದ್ದು ಒಳ್ಳೇದೂಂತ ಏನಿಲ್ಲ. ಎಲ್ಲ ರೀತಿಯ ಪ್ರಭಾವಗಳು ವೈಜ್ಞಾನಿಕವಾಗಿ ನೋಡಿದರೆ ಅನೈತಿಕ."

"ಅದು ಹಾಕೆ ಹಾಗೆ?"

"ಯಾಕೇಂದ್ರೆ, ಒಬ್ಬರನ್ನು ಪ್ರಭಾವಿಸೋದು ಅಂದರೆ ತನ್ನ ಆತ್ಮವನ್ನೇ ಅವನಿಗೆ ಕೊಡೋದು ಅಂತ ಅರ್ಥ. ಅವನ ಸ್ವಂತದ್ದೇನೂ ಇರೊಲ್ಲ."

ಅವನ ಅಪರಾಧಗಳು, ಗುಣಗಳೂ ಯಾವುದೂ ಅವನದಾಗಿರೊಲ್ಲ. ಅವನಿಗೆ ಮೀಸಲಿರದ ಪಾತ್ರವನ್ನು ಅಭಿನಯಿಸುತ್ತಾನೆ. ಒಬ್ಬ ಮನುಷ್ಯ ಪರಿಪೂರ್ಣತ್ವದೊಂದಿಗೆ, ಸಮಗ್ರತೆಯೊಂದಿಗೆ ಬದುಕಲು ಬಯಸಿದರೆ, ತನ್ನ ಭಾವನೆಗಳಿಗೆ ವಿಚಾರಗಳಿಗೆ ಅಭಿವ್ಯಕ್ತಿಕೊಡಬೇಕು. ತನ್ನ ಕನಸುಗಳನ್ನು ನನಸಾಗಿಸಬೇಕು... ಆಗ ಮಾತ್ರವೆ ಅವನು ಬಯಸುವ ಸಂತೋಷ ಅವನದಾಗಿ, ತನ್ನೆಲ್ಲ ನೋವು ಸಂಕಟಗಳನ್ನು ಮರೆಯಬಲ್ಲವ ನಾಗುತ್ತಾನೆ. ಮತ್ತೆ ಸುಂದರವಾದ ಸೂಕ್ಷ್ಮವಾದ ಆದರ್ಶಗಳತ್ತ ಮರಳುತ್ತಾನೆ, ಆದರೆ

ಅದ್ಯಾಕೋ ಏನೋ ಧೈರ್ಯಶಾಲಿಯಾದವನೂ ಕೂಡಾ ತನಗೆ ತಾನೇ ಹೆದರುತ್ತಾನೆ......... ಪ್ರಪಂಚದಲ್ಲಿ ನಡೆಯುವ ಮಹತ್ವದ ಘಟನೆಗಳು, ಮೊದಲಿಗೆ ನಮ್ಮ ಮೆದುಳಿನಲ್ಲಿ ನಡೆಯುತ್ತವೆ ಎಂದು ಹೇಳಲಾಗಿದೆ. ಹಾಗೆಯೇ ಪಾಪಗಳೂ ಕೂಡಾ ಅಲ್ಲಿಯೇ ಮೊಳೆಯುತ್ತವೆ. ಮಿಸ್ಟರ್ ಗ್ರೇ ನೀನು, ನಿನ್ನ ಕೆಂಗುಲಾಬಿ ಪ್ರಾಯ, ಶ್ವೇತ ಗುಲಾಬಿ ಹುಡುಗುತನದೊಂದಿಗೆ ಹೊಂದಿದ್ದ ಭಾವೋದ್ರೇಕಗಳು, ನಿನ್ನನ್ನು ಹೆದರಿಸಿರಬಹುದು; ವಿಚಾರಗಳು, ಭಯ-ತಲ್ಲಣಗಳನ್ನು ಸೃಷ್ಟಿಮಾಡಿರಬಹುದು, ಹಗಲುಗನಸು, ರಾತ್ರಿ ಕನಸುಗಳು, ಅವುಗಳ ನೆನಪುಗಳು ನಾಚಿಕೆಯಿಂದ ನಿನ್ನ ಕೆನ್ನೆಗಳನ್ನು ದಣಿಸಬಹುದು. "ಸಾಕು ನಿಲ್ಲಿಸು" ತಡವರಿಸುತ್ತಾ ಡೋರಿಯನ್ ಗ್ರೇ ಹೇಳಿದ. "ನಿನ್ನ ಈ ಮಾತುಗಳು, ನನ್ನಲ್ಲಿ ಭಯ ಹುಟ್ಟಿಸುತ್ತವೆ. ನನಗೆ ಏನು ಹೇಳಬೇಕೆಂದೇ ತೋಚುವುದಿಲ್ಲ. ನಿನ್ನ ಪ್ರಶ್ನೆಗಳಿಗೆ ನನ್ನಲ್ಲಿ ಉತ್ತರವಿದೆ. ಸದ್ಯಕ್ಕೆ ಹೇಳಲು ಆಗುತ್ತಿಲ್ಲ. ಇನ್ನು ಮಾತು ಬೇಡ. ನನಗೆ ಯೋಚಿಸಲು ಬಿಡು, ಇಲ್ಲ ನನಗೆ ಯೋಚನೆಮಾಡುವ ಅವಕಾಶವೇ ಇಲ್ಲದಂತಾಗುತ್ತದೆ."

ಹತ್ತು ನಿಮಿಷ ಮಾತಿಲ್ಲದೆ ನಿಂತ. ಏನೋ ತನ್ನಲ್ಲಿ ಬದಲಾವಣೆ ಆಗುತ್ತಿದೆ ಎಂದುಕೊಂಡ. ಗೊತ್ತಿದ್ದೋ ಗೊತ್ತಿಲ್ಲದೆಯೋ ಬೇಸಿಲ್‌ನ ಗೆಳೆಯ ಆಡಿದ ಮಾತುಗಳು ತನ್ನ ಅಂತರಂಗದ ತಂತುಗಳನ್ನು ಸ್ಪರ್ಶಿಸಿವೆ. ತಂತುಗಳಲ್ಲಿ ತರಂಗಗಳು ಏಳುತ್ತವೆ.

ಸಂಗೀತ ಈ ರೀತಿಯಲ್ಲಿ ಮನ ಕಲಕುವುದನ್ನು ಅನುಭವಿಸಿದ್ದ. ಆದರೆ ಈಗ ಶಬ್ದಗಳು........ ಬರೀ ಶಬ್ದಗಳು! ಅಬ್ಬ! ಎಷ್ಟು ಭಯಾನಕ! ಸ್ಪಷ್ಟ! ಕ್ರೂರ! ಅವುಗಳಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ. ಆದರೂ ಅವುಗಳಲ್ಲಿ ಎಂಥ ಸೂಕ್ಷ್ಮವಾದ ಮಾಂತ್ರಿಕತೆಯಿದೆ! ಕೊಳಲು, ಪಿಯಾನೋಗಳಲ್ಲಿರುವಷ್ಟೇ ತಮ್ಮದೇ ಆದ ಸಂಗೀತವನ್ನು ಹೊಂದಿವೆ. ಕೇವಲ ಶಬ್ದಗಳು! ಶಬ್ದಗಳಲ್ಲಿರುವ ವಾಸ್ತವತೆ ಬೇರೆಲ್ಲಿಯಾದರೂ ಇದೆಯೇ?

ತನ್ನ ಹುಡುಗುತನದ ವಯಸ್ಸಿನಲ್ಲಿ ಇದ್ದಿರಬಹುದಾದ್ದನ್ನು, ತನಗೆ ಅರ್ಥ ಮಾಡಿಕೊಳ್ಳಲಾಗಲಿಲ್ಲ, ಆದರೆ ಈಗ ಅವನು ಅವುಗಳನ್ನು ಅರ್ಥಮಾಡಿಕೊಂಡಿದ್ದಾನೆ. ಬದುಕು ಇದ್ದಕ್ಕಿದ್ದಂತೆ ಬೆಂಕಿಯಾಗಿ ಕಾಣಿಸಿಕೊಂಡು ಅದರಲ್ಲಿ ನಡೆಯುತ್ತಿರುವಂತೆ ಭಾಸವಾಗುತ್ತಿದೆ. ಸೂಕ್ಷ್ಮವಾಗಿ ನಗುತ್ತಲೇ ಅವನನ್ನು ಗಮನಿಸುತ್ತಿದ್ದ ಅವನ ಆ ಕ್ಷಣದ ಮನಸ್ಥಿತಿ ಅರ್ಥಮಾಡಿಕೊಂಡಿದ್ದನಾದ್ದರಿಂದ ಏನನ್ನೂ ಮಾತನಾಡಲಿಲ್ಲ. ಸುಮ್ಮನೆ ಆಸಕ್ತ ಸ್ಥಿತಿಯಲ್ಲಿದ್ದ. ತನ್ನ ಮಾತುಗಳು ಅವನ ಮೇಲೆ ಬೀರಿದ ಪರಿಣಾಮವನ್ನು ಗಮನಿಸುತ್ತಿದ್ದ. ಮತ್ತು ಅಚ್ಚರಿಗೊಂಡಿದ್ದ.......ಕೇವಲ ಗಾಳಿಯಲ್ಲಿ ಒಂದು ಬಾಣವೆಸೆದಿದ್ದ. ಅದು ಗುರಿ ಮುಟ್ಟಿರಬಹುದೆ ಎಂದುಕೊಂಡ. ಅಬ್ಬ! ಎಂಥ ಮೋಹಕ ಹುಡುಗ! ಕಲಾವಿದ ಇದ್ಯಾವುದರ ಪರಿವೆಯಿಲ್ಲದೆ ತನ್ನ ಕೆಲಸದಲ್ಲಿ ತನ್ಮಯನಾಗಿದ್ದ.

"ಬೇಸಿಲ್ ನನಗೆ ನಿಂತು ನಿಂತು ಸಾಕಾಗಿದೆ. ಸ್ವಲ್ಪ ಹೊತ್ತು ಹೊರಗೆ ಅಡ್ಡಾಡಿ ಬರುತ್ತೇನೆ. ಇಲ್ಲಿ ಉಸಿರುಗಟ್ಟಿದಂತೆನಿಸುತ್ತಿದೆ."

"ನನ್ನ ಪ್ರೀತಿಯ ಗೆಳೆಯ ದಯವಿಟ್ಟು ಕ್ಷಮಿಸು. ನಾನು ಪೈಂಟಿಂಗ್ ಮಾಡುವಾಗ

ಯಾವುದೂ ನನ್ನ ಗಮನಕ್ಕೆ ಬರುವುದಿಲ್ಲ. ಇವತ್ತು ನಿನ್ನ ಸಿಟ್ಟಿಂಗ್ ಬಹಳ ಚೆನ್ನಾಗಿತ್ತು. ನಾನು ಬಯಸಿದ ಎಫೆಕ್ಟ್‌ಗಳನ್ನೆಲ್ಲಾ ಸಾಧಿಸಲು ಸಾಧ್ಯವಾಯಿತು. ಹೆನ್ರಿ ನಿನ್ನನ್ನು ಹೊಗಳುತ್ತಿದ್ದಿರ ಬೇಕು. ಆದರೆ ಅವನ ಹೊಗಳಿಕೆಯನ್ನು ನಂಬಬೇಡ."

"ಇಲ್ಲ ಇಲ್ಲ ಅವನೇನು ನನ್ನನ್ನು ಹೊಗಳುತ್ತಿರಲಿಲ್ಲ. ಅದಕ್ಕಾಗಿಯೇ ಅವನು ಹೇಳಿದ್ದೊಂದನ್ನೂ ನಾನು ನಂಬಲಿಲ್ಲ!"

"ನೀನು ನಾನು ಹೇಳಿದ್ದನ್ನು ನಂಬಿದ್ದೀಯಾಂತ ನನಗೆ ಗೊತ್ತು. ಸ್ವಲ್ಪ ಹೊತ್ತು ಅಡ್ಡಾಡಿ ಏನಾದರೂ ಕುಡಿದುಬರೋಣ."

"ಹೌದು ಹ್ಯಾರಿ ಹಾಗೆ ಮಾಡು. ನಾನು ನನ್ನ ಸೇವಕ ಪಾರ್ಕರ್‌ಗೆ, ನಿಮಗೆ ಏನು ಬೇಕೋ ಕೊಡಲು ಹೇಳುತ್ತೇನೆ, ನನಗೆ ಮಾತ್ರ ಸದ್ಯಕ್ಕೆ ನನ್ನ ಮುಂದಿರುವ ಈ ಕೆಲಸ ಮುಗಿಸಬೇಕಿದೆ ನಂತರ ಬಂದು ನಿಮ್ಮ ಜೊತೆ ಸೇರುತ್ತೇನೆ. ಇವತ್ತು ನಾನು ಮಾಡಿರುವ ಅದ್ಭುತ ಕೆಲಸ ಇಲ್ಲೀವರೆಗೆ ಮಾಡಿಯೇ ಇಲ್ಲ. ಇದೊಂದು ಮಾಸ್ಟರ್ ಪೀಸ್ ಆಗುವುದರಲ್ಲಿ ಸಂದೇಹವೇ ಇಲ್ಲ."

ಹೆನ್ರಿ ಹೊರಗೆ ಬಂದ. ಡೋರಿಯನ್ ಗ್ರೇ ಹೂಗಳ ಸುಗಂಧ ಆಸ್ವಾದಿಸುತ್ತಾ ನಿಂತಿದ್ದ. ಹೆನ್ರಿ ಅವನ ತೀರಾ ಸಮೀಪಕ್ಕೆ ಬಂದ. ಪಂಚೇಂದ್ರಿಯಗಳ ಹೊರತು, ಆತ್ಮವನ್ನು ಯಾವುದರಿಂದಲೂ ಸುಧಾರಿಸಲು ಆಗುವುದಿಲ್ಲ. ಹಾಗೆಯೇ ಆತ್ಮದ ಹೊರತು ಪಂಚೇಂದ್ರಿಯಗಳನ್ನು ಬೇರಾವುದರಿಂದಲೂ ಸುಧಾರಿಸಲಾಗದು. ನೀನೆ ಒಂದು ಅದ್ಭುತ ಸೃಷ್ಟಿ. ಡೋರಿಯನ್ ಗ್ರೇ ಮುಖದಲ್ಲಿ ಸಿಟ್ಟು ಕಾಣಿಸಿತು. ಬೇಸಿಲ್ ಜೊತೆಗಿನ ಸುದೀರ್ಘ ಸ್ನೇಹ, ಒಡನಾಟಗಳಲ್ಲಿದ್ದೂ ತಾನೊಂದಿಷ್ಟೂ ಬದಲಾಗಿರಲಿಲ್ಲ. ಆದರೆ ಈ ಮನುಷ್ಯ ಆಕಸ್ಮಿಕವಾಗಿ ತನ್ನ ಬದುಕಿನಲ್ಲಿ ಪ್ರವೇಶಿಸಿ, ಬದುಕಿನ ನಿಗೂಢತೆಯನ್ನು ಬಿಚ್ಚಿಟ್ಟ. ಆದರೂ ಅದರಿಂದ ಹೆದರುವುದಕ್ಕೇನಿದೆ? ತಾನೇನೂ ಶಾಲಾ ಹುಡುಗನೋ, ಹುಡುಗಿಯೋ ಅಲ್ಲ ಹೆದರುವುದಕ್ಕೆ, ಎಂದುಕೊಂಡ.

ಪಾರ್ಕರ್ ಕುಡಿಯಲು ಪಾನೀಯಗಳನ್ನು ತಂದಿರಿಸಿದ. ಹೆನ್ರಿ ಡೋರಿಯನ್ ಗ್ರೇನನ್ನು ನೆರಳಿಗೆ ಬರುವಂತೆ ಹೇಳಿದ. ತುಂಬಾ ಹೊತ್ತು ಬಿಸಿಲಲ್ಲಿ ನಿಂತರೆ ಮುಖ ಕಪ್ಪಿಟ್ಟು, ಬೇಸಿಲ್‌ಗೆ ಪೈಂಟ್ ಮಾಡಲು ತೊಂದರೆಯಾಗಬಹುದೆಂದು ತಿಳಿಸಿ ಹೇಳಿದ.

"ಅದರಿಂದೇನೂ ತೊಂದರೆಯಾಗುವುದಿಲ್ಲ" ಎಂದ ಗ್ರೇ."

"ಹಾಗೆ ಹೇಳಬೇಡ. ಪ್ರತಿಯೊಬ್ಬರ ಬದುಕಿನಲ್ಲಿ ತಾರುಣ್ಯವೆಂಬುದು ಮಹತ್ವದ ಘಟ್ಟ. ಇದನ್ನು ಕಾಪಾಡಿಕೊಳ್ಳಬೇಕಾದ್ದು ಅನಿವಾರ್ಯ."

"ನನಗೆ ಹಾಗೇನೂ ಅನಿಸುವುದಿಲ್ಲ."

"ನಿಜ ಈಗ ನಿನಗೆ ಹಾಗೆ ಅನಿಸದೆ ಇರಬಹುದು. ವಯಸ್ಸಾದ ಮೇಲೆ, ಮುಖದಲ್ಲಿ ಸುಕ್ಕುಗಳು ಮೂಡಿ ವಿಕಾರವಾಗಿ ಕಂಡಾಗ, ಭಯಾನಕ ಅನುಭವವಾದಾಗ ಇದರ ಮಹತ್ವದ

ಅರಿವಾಗುತ್ತದೆ. ಈಗ ನೀನೆಲ್ಲಿ ಹೋದರೂ, ನಿನ್ನಿಂದ ಆಕರ್ಷಿತರಾಗುತ್ತಾರೆ. ಆದರೆ ಮುಂದೆ? ಭವಿಷ್ಯದಲ್ಲಿ?"

"ನಿನ್ನದು ಮೋಹಕ ಚಹರೆ. ಸಿಟ್ಟಾಗಬೇಡ. ಪ್ರತಿಭೆಯ ಇನ್ನೊಂದು ಮುಖವೇ ಸೌಂದರ್ಯ. ವಿವರಣೆ ಬೇಕಿಲ್ಲ... ಕೆಲವರು ಸೌಂದರ್ಯವೆಂಬುದು ಕೇವಲ ತೋರಿಕೆಯದು ಎಂದು ಭಾವಿಸುತ್ತಾರೆ. ಇರಬಹುದು... ಆದರೆ ನನಗೆ ಮಾತ್ರ ಸೌಂದರ್ಯವೆಂಬುದು ಅದ್ಭುತಗಳಲ್ಲಿಯೇ ಅದ್ಭುತವಾದದ್ದು. ಮಿಸ್ಟರ್ ಗ್ರೇ ದೇವರು ನಿನಗೆ ವರ ಕೊಟ್ಟಿದ್ದಾನೆ. ಆದರೆ ಆ ದೇವರು ಕೊಟ್ಟದ್ದನ್ನು ಬೇಗನೆ ಕಸಿದುಕೊಳ್ಳುತ್ತಾನೆ ಕೂಡಾ! ನಿನಗೆ ಉಳಿದಿರುವ ಕೆಲವೇ ವರ್ಷಗಳನ್ನು ಪೂರ್ತಿಯಾಗಿ, ಪರಿಪೂರ್ಣವಾಗಿ ಬದುಕು. ನಿನ್ನ ತಾರುಣ್ಯ ನಿನ್ನಿಂದ ದೂರ ಹೋದಾಗ, ಸೌಂದರ್ಯವೂ ಅದರೊಡನೆ ಹೊರಟು ಹೋಗುತ್ತದೆ. ಆಗ ನೀನು ಕಳೆದು ಕೊಂಡದ್ದು ಏನೆಂದು ತಕ್ಷಣ ಕಂಡುಕೊಳ್ಳುತ್ತೀಯೆ ನಿನ್ನಲ್ಲಿ ಏನೂ ಉಳಿದಿಲ್ಲವೆಂಬುದನ್ನು ಗುರುತಿಸುತ್ತೀ. ನಿನ್ನ ಗತದ ನೆನಪುಗಳು ನಿನ್ನಲ್ಲಿ ಕಹಿ ಭಾವನೆಯನ್ನು ಹುಟ್ಟುಹಾಕುತ್ತವೆ. ತಿಂಗಳೊಂದೊಂದೂ ಸರಿಯುತ್ತಿದ್ದಂತೆ, ನೀನು ಭಯಾನುಕತೆಯನ್ನು ಸಮೀಪಿಸುತ್ತೀ. ಕಾಲಕ್ಕೆ ನಿನ್ನನ್ನು ಕಂಡರೆ ಅಸೂಯೆ. ನಿನ್ನ ಬಂಗಾರದ ದಿನಗಳ ಜೊತೆ ಸೆಣಸುತ್ತದೆ. ನೀನು ಬಾಡಿಹೋಗುತ್ತೀಯ; ನಿನ್ನ ಕಣ್ಣುಗಳು ಕಾಂತಿಹೀನವಾಗುತ್ತವೆ. ತುಂಬಾ ನೋವನ್ನು ಅನುಭವಿಸುತ್ತೀಯೆ.... ಓಹ್!... ನಿನ್ನಲ್ಲಿರುವ ಈಗಿನ ತಾರುಣ್ಯವನ್ನು ಅರ್ಥಮಾಡಿಕೋ, ಅನುಭವಿಸು. ವ್ಯರ್ಥಮಾಡಿಕೊಳ್ಳಬೇಡ. ಬೇಡದ್ದನ್ನು ಕೇಳಿಸಿಕೊಳ್ಳಬೇಡ. ನಿನ್ನ ಸೋಲುಗಳನ್ನು ಸುಧಾರಿಸಿಕೋ. ಕಂಡ ಕಂಡವರಿಗಾಗಿ, ಕೆಲಸಕ್ಕೆ ಬಾರದವರಿಗಾಗಿ ನಿನ್ನ ಬದುಕನ್ನು ಬಿಟ್ಟುಕೊಡಬೇಡ. ನಿನ್ನಲ್ಲಿನ ಅದ್ಭುತವಾದ ಬದುಕನ್ನು ಬದುಕಲು ಪ್ರಯತ್ನಿಸು ಹೊಸ ಹೊಸ ಅನುಭವಗಳಿಗೆ ತೆರೆದುಕೋ. ಯಾವುದಕ್ಕೂ ಹೆದರಬೇಡ... ನಿನ್ನ ವ್ಯಕ್ತಿತ್ವದಿಂದಾಗಿ, ನಿನಗೆ ಸಾಧಿಸಲಾಗದ್ದು ಏನೂ ಇರುವುದಿಲ್ಲ. ಒಂದು ಋತುಮಾನಕ್ಕಾಗಿ ದೊರೆತಿರುವ ಅವಕಾಶದಲ್ಲಿ ಪ್ರಪಂಚ ನಿನ್ನದಾಗಿದೆ.

ಮೊದಲು ನಿನ್ನನ್ನು ನೋಡಿದಾಗ, ನಿಜವಾಗಿ ನಿನ್ನಲ್ಲಿ ಏನಿದೆ ಎನ್ನುವುದು ತಿಳಿದಿರಲಿಲ್ಲ, ಏನಿರಬಹುದು ಎಂಬುದನ್ನು ಊಹಿಸಲೂ ಆಗಿರಲಿಲ್ಲ. ನಿನ್ನಲ್ಲಿನ ಮೋಹಕತೆ ನನ್ನನ್ನು ಬಹಳವಾಗಿ ಆಕರ್ಷಿಸಿದೆ. ನಿನಗೆ ನಿನ್ನ ಬಗ್ಗೆಯೇ ಏನಾದರೂ ಹೇಳಬೇಕೆನಿಸಿತು. ಇರುವುದನ್ನು ವ್ಯರ್ಥ ಮಾಡಿಕೊಂಡು ದುರಂತಕ್ಕೆ ಎಡೆಕೊಡ ಬೇಡ. ನಿನ್ನ ತಾರುಣ್ಯ ಅಲ್ಪಾವಧಿಯದು. ಈಗಿರುವ ತಾರುಣ್ಯ! ಪ್ರಾಯ!... ಪ್ರಪಂಚದಲ್ಲಿ ಇದಕ್ಕಿಂತ ಬೇರೆ ಯಾವುದೂ ಇರಲಾರದು! ಬೆಟ್ಟದ ಹೂಗಳು ಅರಳಿ ಮುದುಡಿ ಹೋದರೂ ಮತ್ತೆ ಜೀವ ಪಡೆಯುತ್ತವೆ. ಆದರೆ ನಿನ್ನ ಯೌವ್ವನ ಹಾಗಲ್ಲ."

ಡೋರಿಯನ್ ಗ್ರೇ ಬಿಟ್ಟ ಕಣ್ಣುಗಳಿಂದ ಅಚ್ಚರಿ ಹೊಮ್ಮಿಸುತ್ತಾ ಕೇಳಿಸಿಕೊಳ್ಳುತ್ತಿದ್ದ. ಅದೇ ಸಮಯದಲ್ಲಿ ದುಂಬಿಯೊಂದು ಹಾರುತ್ತಾ ಪುಟ್ಟ ಪುಟ್ಟ ಹೂಗಳ ಮೇಲೆಲ್ಲಾ ಹಾರಾಡಿತು. ಒಂದೆರಡು ಕ್ಷಣಗಳ ನಂತರ ಅಲ್ಲಿಂದ ಹಾರಿಹೋಯಿತು. ಹೂಗಳಲ್ಲಿ ಸಣ್ಣ ಸಂಚಲನ ಉಂಟಾಗಿತ್ತು.

ಕಲಾವಿದ ಸ್ಟುಡಿಯೋ ಬಾಗಿಲಲ್ಲಿ ಕಾಣಿಸಿಕೊಂಡು ಅವರನ್ನು ಒಳಗೆ ಬರಲು ಸನ್ನೆಮಾಡಿ ಕರೆದ. ಒಬ್ಬರನ್ನೊಬ್ಬರು ನೋಡಿಕೊಂಡು ನಕ್ಕರು.

"ನಿಮಗಾಗಿ ಕಾಯುತ್ತಿದ್ದೇನೆ. ಬೆಳಕು ಚೆನ್ನಾಗಿದೆ. ನಿಮ್ಮ ನಿಮ್ಮ ಪಾನೀಯಗಳನ್ನು ಒಳಗೆ ತಂದುಕೊಂಡೇ ಕುಡಿಯಿರಿ. ಎಲ್ಲರೂ ಒಳಗೆ ಸೇರಿದರು. ಪಾನ ಸೇವನೆಯಲ್ಲಿ ಮುಳುಗಿದರು. ಮಿಸ್ಟರ್ ಹೆನ್ರಿ, ಡೋರಿಯನ್ ಗ್ರೇನನ್ನು "ನನ್ನ ಭೇಟಿಯಾದದ್ದು ನಿನಗೆ ಸಂತೋಷವೆನಿಸಿತೇ?" ಎಂದು ಕೇಳಿದ. ಖಂಡಿತಾ ಬಹಳ ಸಂತೋಷವಾಯಿತು. ಈ ಸಂತೋಷ ಯಾವಗಲೂ ಹೀಗೆ ಇರುತ್ತೇನು?"

"ಯಾವಾಗಲೂ!... ಇದೊಂದು ಭಯಂಕರ ಶಬ್ದ. ಈ ಕಿವಿಗೆ ಬಿದ್ದರೆ ಸಾಕು, ನನ್ನಲ್ಲಿ ನಡುಕ ಉಂಟಾಗುತ್ತದೆ. ಹೆಂಗಸರಿಗೆ ಮಾತ್ರ ಈ ಶಬ್ದ ಬಹಳ ಇಷ್ಟವಾಗುತ್ತೆ. ಒಂದೊಂದು ರಮ್ಯ ಕ್ಷಣಗಳನ್ನೂ, ಶಾಶ್ವತವಾಗಿ ಮಾಡುವುದಕ್ಕೇ ಪ್ರಯತ್ನಿಸುತ್ತಾರೆ. ಇದೂ ಕೂಡಾ ಅಸಹ್ಯ ಎನಿಸುತ್ತೆ. ಚಂಚಲತೆ ಮತ್ತು ಜೀವನ ಪರ್ಯಂತದ ಭಾವೋದ್ರೇಕದ ನಡುವಿನ ವ್ಯತ್ಯಾಸವೆಂದರೆ, ಚಂಚಲತೆ ಸ್ವಲ್ಪ ಹೆಚ್ಚು ಕಾಲ ಉಳಿದಿರುತ್ತದೆ. "ಹಾಗಾದರೆ ನಮ್ಮ ಸ್ನೇಹ ಸ್ವಲ್ಪ ಹೆಚ್ಚು ಕಾಲ ಉಳಿಯಬಹುದಾದ ಚಂಚಲತೆಯ ಮಾದರಿಯ್ಲಲಿಯೇ ಇರಲಿ"

ಅಷ್ಟು ಹೊತ್ತಿಗೆ ಹಾಲ್ ವಾರ್ಡ್‌ನ ಪೈಂಟಿಂಗ್ ಕೆಲಸ ಮುಗಿದಿತ್ತು. ಡೋರಿಯನ್ ಗ್ರೇನನ್ನು ದೀರ್ಘವಾಗಿ ಗಮನಿಸಿದ. ನಂತರ ಅವನ ಭಾವಚಿತ್ರವನ್ನೂ ಗಂಭೀರವಾಗಿ ಪರೀಕ್ಷಿಸಿದ."

"ಅಬ್ಬ! ಪೂರೈಸಿದ್ದಾಯಿತು?" ಎಂದುಕೊಳ್ಳುತ್ತಾ ಭಾವಚಿತ್ರದ ಕೊನೆಯಲ್ಲಿ ಕೆಂಪು ಬಣ್ಣದಿಂದ ತನ್ನ ಹೆಸರಿನ ಅಕ್ಷರಗಳನ್ನು ಪೋಣಿಸಿದ.

ಲಾರ್ಡ್ ಹೆನ್ರಿ ಭಾವಚಿತ್ರದ ಬಳಿಗೆ ಬಂದ. ಗಂಭೀರವಾಗಿ ಚಿತ್ರವನ್ನು ಪರಿಶೀಲಿಸಿದ. ನಿಜವಾಗಿಯೂ ಅದ್ಭುತವಾಗಿತ್ತು. ಡೋರಿಯನ್ ಗ್ರೇನ ಯಥಾವತ್ತಾದ ರೂಪವಿತ್ತು.

"ಗೆಳೆಯಾ ನಿಜವಾಗಿಯೂ ನಿನ್ನನ್ನು ಅಭಿನಂದಿಸುತ್ತೇನೆ. ಆಧುನಿಕ ಕಾಲದ ಮಹತ್ವದ ಒಂದೇ ಒಂದು ಕಲಾಕೃತಿಯೆಂದರೆ ಇದೇ! ಮಿಸ್ಟರ್ ಗ್ರೇ ನೀನೇ ಬಂದು ಇದರ ಮುಂದೆ ನಿಂತು ನಿನ್ನನ್ನು ನೀನೇ ನೋಡಿಕೋ."

ಹುಡುಗ ಎಚ್ಚೆತ್ತ. ಕನಸುಗಳಿಂದ ಹೊರಬಂದು ಕೇಳಿದ, ಭಾವಚಿತ್ರ ಬರೆದದ್ದು ಮುಗಿಯಿತೇನು! ಎಂದು ಅಚ್ಚರಿಯಿಂದ ಕೇಳುತ್ತಾ ಪ್ಲಾಟ್‌ಫಾರಂನಿಂದ ಕೆಳಗಿಳಿದ.

"ಹೌದು ಪೂರ್ತಿಯಾಯಿತು. ಇವತ್ತು ಮಾತ್ರ ನೀನು ತುಂಬಾ ಚೆನ್ನಾಗಿ ಸಹಕರಿಸಿದೆ. ನಿಜವಾಗಿಯೂ ನಾನು ನಿನಗೆ ಋಣಿಯಾಗಿದ್ದೇನೆ."

"ಅಂ ...... ಅದಕ್ಕೆ ನಾನು ಹೊಣೆ. ಏನಂತೀಯ ಗ್ರೇ?"

ಡೋರಿಯನ್ ಉತ್ತರ ಕೊಡಲಿಲ್ಲ. ಸ್ವಲ್ಪ ಅಸ್ವಸ್ಥನಾದಂತಿದ್ದು, ಮತ್ತೆ ತನ್ನ ಭಾವಚಿತ್ರದತ್ತ ತಿರುಗಿದ. ಮೊಟ್ಟ ಮೊದಲ ಬಾರಿಗೆ ತಾನೇನೆಂದು ತಿಳಿದು ಬಂದಂತೆ, ಅವನ ಮುಖದಲ್ಲಿ

ಗೆಲುವು ಕಾಣಿಸಿಕೊಂಡಿತ್ತು. ಆಶ್ಚರ್ಯಚಕಿತನಾಗಿ, ನಿಶ್ಚಲವಾಗಿ ನಿಂತಿದ್ದ. ಹಾಲ್ ವಾರ್ಡ್‌ನ ಮಾತುಗಳನ್ನು ಕೇಳೀ ಕೇಳಿಸಿಕೊಳ್ಳದಂತಿದ್ದ, ತನ್ನ ಅದ್ಭುತ ಸೌಂದರ್ಯದ ಪ್ರಜ್ಞೆ ಮೊದಲ ಬಾರಿಗೆ ಅವನಲ್ಲಿ ಜಾಗೃತವಾಯಿತು. ಇದಕ್ಕೆ ಮೊದಲೆಂದೂ ಹೀಗಾಗಿರಲಿಲ್ಲ. ಹಾಲ್ ವಾರ್ಡ್‌ನ ಹೊಗಳಿಕೆ, ಅಲ್ಲೀವರೆಗೆ ತಮ್ಮ ಸ್ನೇಹ ಸಂಬಂಧದ ವೈಭವೀಕರಣದ ಪರಿಣಾಮವೆಂದೇ ತಿಳಿದಿದ್ದ. ಇದರಿಂದ ಅವನ ಮೇಲೆ ಯಾವುದೇ ಪರಿಣಾಮವಾಗಿರಲಿಲ್ಲ. ನಂತರ ನೋಡಿದರೆ ಹೆನ್ರಿ ವೊಟ್ಟನ್ ತನ್ನ ತಾರುಣ್ಯದ ವಿಚಿತ್ರ ಸ್ಥಿತಿಯನ್ನು ಬಣ್ಣಿಸಿದ್ದ. ಹಾಗೆಯೇ ಅದರ ಅಲ್ಪಾಯುಷ್ಯದ ಬಗ್ಗೆ ಎಚ್ಚರಿಕೆಯನ್ನೂ ನೀಡಿದ್ದ. ಅದೆಲ್ಲ ಅವನ ಮನಸ್ಸನ್ನು ಕಲಕಿತ್ತು. ಈಗ ಅವನು ತನ್ನ ಸೌಂದರ್ಯದ ಛಾಯೆಯನ್ನು ಗಮನಿಸುತ್ತಿದ್ದ. ಅದರ ಪೂರ್ಣ ವಾಸ್ತವತೆಯ ವಿವರಣೆಯ ಚಿತ್ರ ಅವನ ಕಣ್ಮುಂದೆ ಮಿಂಚಿ ಮರೆಯಾಯಿತು. ಹೌದು ಸುಕ್ಕು ಗಟ್ಟಿದ ಮುಖ, ಮಂದವಾದ ಕಣ್ಣುಗಳು, ಪೇಲವವಾದ, ಜೀರ್ಣವಾದ ಶರೀರ, ಮರೆಯಾದ ಕೆಂಪಿನ ತುಟಿಗಳು, ಹೊಂಬಣ್ಣ ಕಳೆದುಕೊಂಡ ಕೂದಲು – ಎಲ್ಲವೂ ಮರೆಯಾಗುವ ಒಂದು ದಿನ ಬಂದೇ ಬರುತ್ತದೆ. ಆತ್ಮವನ್ನು ರೂಪಿಸಬೇಕಾದ ಜೀವನ, ದೇಹವನ್ನು ಹಾಳುಗೆಡವಿ, ವಿಕೃತ, ಭಯಾನಕವೆಂಬಂತೆ ಕಾಣಿಸುತ್ತದೆ.

ಇದೆಲ್ಲ ನೆನಪಾದಂತೆ ಸಣ್ಣಗೆ ಕಂಪಿಸಿದ. ಎದೆಯಲ್ಲಿ ಚೂರಿ ಇರಿದಂತಹ ಅನುಭವ. ಹತ್ತಿಕ್ಕಿಕೊಳ್ಳಲಾಗದ ಯಾತನೆ ಒಂದೆರಡು ಕಣ್ಣಹನಿಗಳು ಉರುಳುವಂತೆ ಮಾಡುತ್ತದೆ. ಮಂಜಿನಂತೆ ಕೊರೆವ ಕೈಯೊಂದು ಎದೆಯ ಮೇಲೆ ಇರಿಸಿದಂತೆ ಅನುಭವ! ಅವನು ಮೌನವಹಿಸಿದ್ದನ್ನು ಗಮನಿಸಿ ಹಾಲ್‌ವಾರ್ಡ್ "ಯಾಕೆ ನಿನಗೆ ಇಷ್ಟವಾಗಿಲ್ಲವೇ?" ಎಂದು ಅವನ ನಿಶ್ಚಲ ಪ್ರತಿಕ್ರಿಯೆ ಅರ್ಥವಾಗದೆ ಕೇಳಿದ.

"ಯಾಕೆ ಇಷ್ಟವಾಗೊಲ್ಲ ! ಖಂಡಿತ ಇಷ್ಟವಾಗುತ್ತೆ. ಆಧುನಿಕ ಕಾಲದ ಮಹಾನ್ ಕಲಾಕೃತಿ ಇದಾಗಿರುವಾಗ, ಇಷ್ಟವಾಗದೆ ಇರಲು ಸಾಧ್ಯವೇ? ಇದಕ್ಕಾಗಿ ನಾನು ಎಷ್ಟು ಬೆಲೆ ಬೇಕಾದರೂ ಕೊಡಲು ಸಿದ್ಧನಾಗಿದ್ದೇನೆ. ಪ್ರಪಂಚದಲ್ಲಿ ಏನೇ ಇದ್ದರೂ ಕೊಡಬಲ್ಲೆ. ಹಾಗೆ ಬೇಕಾದರೆ ನನ್ನಾತ್ಮವನ್ನೇ ಕೊಡಲು ನಾನು ಸಿದ್ಧ ಎಂದು ಹೆನ್ರಿ ತುಂಬ ಭಾವುಕತೆಯಿಂದ ಹೇಳಿದ.

"ನೀನು ಇದಕ್ಕೆಲ್ಲ ಕೇರ್ ಮಾಡೊಲ್ಲ ಅಂತ ಗೊತ್ತಿದೆ ಬೇಸಿಲ್. ಹಾಗೆ ಮಾಡುವುದು ನಿನ್ನ ಅದ್ಭುತ ಕಲೆಯನ್ನು ಬೆಲೆಯಿಂದ ಅಳೆದಂತಾಗುತ್ತದೆ" ಎಂದು ಮಾತನ್ನು ಮುಂದುವರೆಸಿ ಹೇಳಿದ.

"ಅದನ್ನು ನಾನು ಒಪ್ಪೋದಿಲ್ಲ ಹ್ಯಾರಿ" ಹಾಲ್‌ವಾರ್ಡ್ ಉತ್ತರಿಸಿದ. ಡೋರಿಯನ್ ಗ್ರೇ ಅವನತ್ತ ಮುಖಮಾಡಿ ಖಂಡಿತ ಒಪ್ಪುತ್ತೀಯ. ನಿನಗೆ ನಿನ್ನ ಸ್ನೇಹಿತರಿಗಿಂತ ಕಲೆಯೇ ದೊಡ್ಡದು. ನಾನು ನಿನಗೆ ಒಂದು ಕಂಚಿನ ವಿಗ್ರಹದಂತಲ್ಲದೆ ಬೇರೇನೂ ಅಲ್ಲ. ಧೈರ್ಯವಾಗಿ ಇದನ್ನು ಹೇಳಬಲ್ಲೆ ಎನಿಸುತ್ತೆ.

ಕಲಾವಿದ ದಿಗ್ಭ್ರಮೆಯಿಂದ ಅವನತ್ತ ನೋಡಿದ. ಡೋರಿಯನ್ ಹೀಗೆ ಮಾತಾಡಲು ಸಾಧ್ಯವೇ? ಅವನಿಗೇನಾಗಿದೆ? ತುಂಬಾ ಸಿಟ್ಟಾದಂತೆ ಕಾಣಿಸುತ್ತಿದ್ದ. ಅವನ ಮುಖ, ಕೆನ್ನೆಗಳು

ನಾಚಿಕೆ ಸಂಕೋಚಗಳಿಂದ ಉರಿಯುತ್ತಿದ್ದಂತೆ ಭಾಸವಾಗುತ್ತಿತ್ತು. "ನಾನು ಹೇಳಿದ್ದು ಸತ್ಯ! ನನ್ನನ್ನು ಎಷ್ಟು ದಿನ ಅಂತ ಇಷ್ಟಪಡ್ತೀಯ? ಒಂದು ಸುಕ್ಕು ಕಾಣಿಸುವವರೆಗೆ! ನನಗೆ ಗೊತ್ತು, ರೂಪ, ಸೌಂದರ್ಯಗಳು ಎಲ್ಲಿವರೆಗೆ ಇರುತ್ತೋ ಅಲ್ಲಿವರೆಗೆ ಮಾತ್ರವೇ ನಾವು ಬೇಕು. ಒಮ್ಮೆ ಅವೆಲ್ಲ ಕಳೆದು ಹೋದರೆ ನಾವು ಯಾವುದಕ್ಕೂ ಬೆಲೆ ಇಲ್ಲದವರಂತಾಗುತ್ತೇವೆ. ನೀನು ಬರೆದ ಈ ಭಾವಚಿತ್ರ, ನನಗೆ ಈ ಪಾಠವನ್ನು ಕಲಿಸಿದೆ. ಹೆನ್ರಿ ಒಟ್ಟನ್ ಸತ್ಯವನ್ನೇ ಮುಂದಿಟ್ಟಿದ್ದಾನೆ. ತಾರುಣ್ಯ ಯೌವ್ವನಗಳು ಮಾತ್ರವೇ ನಿಜವಾದ ಆಸ್ತಿ! ನಾನು ಮುಪ್ಪಿಗೆ ಸರಿಯುತ್ತಿದ್ದೇನೆ ಎಂಬ ಅರಿವು ಮೂಡುತ್ತಿದ್ದಂತೆಯೇ ನನ್ನನ್ನು ನಾನೇ ಮುಗಿಸಿಬಿಡುತ್ತೇನೆ.

ಹಾಲ್‌ವಾರ್ಡ್ ಇವನ ಮಾತಿನಿಂದ ಹೆದರಿದ. ಡೋರಿಯನ್ !ಡೋರಿಯನ್... ಅಂಥಾ ಆಲೋಚನೆಗಳನ್ನು ಮಾಡಬೇಡ. ನಿನ್ನಂಥ ಗೆಳೆಯ ನನಗೆಂದಿಗೂ ಇರಲಿಲ್ಲ; ಇರಲು ಸಾಧ್ಯವೂ ಇಲ್ಲ. ಯಾವುದೇ ಭೌತಿಕ ವಸ್ತುಗಳ ಬಗ್ಗೆ ನಿನಗೆ ಅಸೂಯೆ ಇಲ್ಲವಲ್ಲ? ಅವೆಲ್ಲಕ್ಕಿಂತಲೂ ನೀನು ಅಮೂಲ್ಯ! ಅತ್ಯಮೂಲ್ಯ!

"ಸೌಂದರ್ಯವನ್ನು ಕಳೆದುಕೊಳ್ಳದ ಎಲ್ಲವನ್ನೂ ದ್ವೇಷಿಸುತ್ತೇನೆ. ನೀನು ಸೃಷ್ಟಿಸಿರುವ ಈ ಭಾವಚಿತ್ರವನ್ನು ಕಂಡರೂ ನನಗೆ ಅಸೂಯೆ! ನಾನು ಸೌಂದರ್ಯ ವಂಚಿತನಾದಾಗ ಅದು ಮಾತ್ರ ಯಾಕೆ ಹಾಗೇ ಸುಂದರವಾಗಿ ಉಳಿದಿರಬೇಕು? ಬದಲಾಗಿ, ಅದು ಸೌಂದರ್ಯ ಕಳೆದುಕೊಂಡು, ನಾನು ಹಾಗೇ ಸುಂದರವಾಗಿ ಉಳಿಯಲು ಸಾಧ್ಯವಾದರೆ!.... ಹಾಗೇನಾದರೂ ಅದು ಸುಂದರವಾಗಿ ಉಳಿದು ಬಿಟ್ಟರೆ, ಪ್ರತಿಕ್ಷಣವೂ ಅದನ್ನು ನೋಡಿದಾಗ, ಅದು ನನ್ನನ್ನು ಭಯಂಕರವಾಗಿ ಅಣಕಿಸುತ್ತದೆ! ಭಯಂಕರವಾಗಿ!! ಈ ಮಾತುಗಳು ಹೊರಬರುತ್ತಿದ್ದಂತೆ, ಅವನ ಕಣ್ಣುಗಳೂ ತುಂಬಿ ಬಂದವು. ಸೋಫಾದ ಮೇಲೆ ಕುಕ್ಕರಿಸಿ, ಮುಖ ಮುಚ್ಚಿಕೊಂಡು ಗಟ್ಟಿಯಾಗಿ ಅಳತೊಡಗಿದ.

"ಇದೆಲ್ಲ ನಿನ್ನಿಂದ ಆದದ್ದು, ಹಾಲ್‌ವಾರ್ಡ್" ಆರೋಪದ ದನಿಯಲ್ಲಿ ಹೇಳಿದ, ಲಾರ್ಡ್ ಹೆನ್ರಿ ಇದೇ ನಿಜವಾದ ಡೋರಿಯನ್ "ಅಷ್ಟು ಮಾತ್ರವೇ ಹೇಳಬಲ್ಲೆ" ಎಂದು ಸುಮ್ಮನಾದ.

"ಅಲ್ಲ"

"ಅಲ್ಲ ಅನ್ನೋದಾದರೆ ನಾವೇನು ಮಾಡಬೇಕಿತ್ತು."

"ನಾನು ನಿನ್ನನ್ನು ಹೋಗು ಅಂತ ಹೇಳಿದಾಗ ಹೊರಟು ಹೋಗಬೇಕಿತ್ತು."

"ನೀನು ಆಮೇಲೆ, ಇರು ಅಂತ ಹೇಳಿದ್ದಕ್ಕಷ್ಟೆ ಇದ್ದೆ."

"ಹ್ಯಾರಿ, ನನ್ನಿಬ್ಬರು ಆತ್ಮೀಯ ಗೆಳೆಯರೊಂದಿಗೆ ಏಕಕಾಲದಲ್ಲಿ ಜಗಳ ಮಾಡೋದು ನನ್ನಿಂದ ಸಾಧ್ಯವಿಲ್ಲ. ನಿಮ್ಮಿಬ್ಬರ ಬಗ್ಗೆ ಹೇಳೋದಾದರೆ, ನೀವಿಬ್ಬರೂ ಸೇರಿ ನನ್ನ ಕಲಾಕೃತಿಯನ್ನು ದ್ವೇಷಿಸುವ ಹಾಗೆ ಮಾಡಿದಿರಿ, ಇರಲಿ ಇಷ್ಟು ಅಮೂಲ್ಯವಾದ ಕಲಾಕೃತಿಯಾಗಿದ್ದರೂ ಇದನ್ನು ಈಗಲೇ ನಾಶಪಡಿಸುತ್ತೇನೆ. ಇದರಲ್ಲಿ ಇರುವುದಾದರೂ ಏನು? ಕ್ಯಾನ್‌ವಾಸ್ ಮತ್ತು ಬಣ್ಣಗಳು ಅಷ್ಟೆ! ನಮ್ಮ ಮೂರೂ ಜನರ ಸ್ನೇಹ ಹಾಳು

ಮಾಡೋದಕ್ಕೆ ಕಾರಣವಾಗುವುದು ನನಗೆ ಬೇಡವೇ ಬೇಡ!" ಎನ್ನುತ್ತಾ ಪೈಂಟಿಂಗ್ ಟೇಬಲ್ ಕಡೆಗೆ ಹೆಜ್ಜೆ ಹಾಕಿದ. ಹರಡಿಕೊಂಡಿದ್ದ ಬಣ್ಣಗಳು ಟ್ಯೂಬುಗಳ ನಡುವೆ ಕೈಯಾಡಿಸಿ ಏನನ್ನೊ ಹುಡುಕುತ್ತಿದ್ದ. ಕಡೆಗೆ ಅವನ ಕೈಗೆ ಪ್ಯಾಲೆಟ್ ನೈಫ್ ಸಿಕ್ಕಿತು. ಅದರಿಂದ ಕ್ಯಾನ್‌ವಾಸನ್ನು ಚೂರು ಚೂರಾಗಿ ಸೀಳುವುದಕ್ಕೆ ಸಿದ್ಧನಾದ. ಅದೇ ಸಮಯಕ್ಕೆ ತಲೆಯೆತ್ತಿ, ತನ್ನ ಚಿತ್ರಶಿಲ್ಪಿ ಏನು ನಡೆಸುತ್ತಿದ್ದಾನೆಂದು ಗಮನಿಸುತ್ತಿದ್ದವನು ದಿಢೀರನೆ ಎದ್ದು ಟೇಬಲ್ ಬಳಿಗೆ ಬಂದು ತನ್ನ ಸೃಷ್ಟಿಕರ್ತ ಕಲಾವಿದನ ಕೈಯಿಂದ ನೈಫನ್ನು ಕಿತ್ತುಕೊಂಡು ದೂರಕ್ಕೆ ಎಸೆದ. ಅವನನ್ನು ಸಮೀಪಿಸುವಷ್ಟು ಹೊತ್ತಿಗೆ ಹತ್ತು ಸಲ, ಬೇಡ ಬೇಸಿಲ್ ಬೇಡ! ಹಾಗೆ ಮಾಡಬೇಡ! ಮಾಡಿದರೆ ಅದು ಕೊಲೆಯಾಗುತ್ತದೆ ಎಂದು ಕಿರುಚುತ್ತಲೇ ಬಳಿಗೆ ಸಾಗಿ ಬಂದಿದ್ದ.

"ಸದ್ಯ ಕಡೆಗಾದರೂ ನನ್ನ ಕಲಾಕೃತಿಯನ್ನು ಮೆಚ್ಚಿಕೊಂಡೆಯಲ್ಲ ನೀನೆಂದೂ ಮೆಚ್ಚಿಕೊಳ್ಳುವುದಿಲ್ಲವೆಂದೇ ಭಾವಿಸಿದ್ದೆ." "ಮೆಚ್ಚಿಕೊಳ್ಳುವುದೇ?... ಅದು ನಿನ್ನ ಪ್ರಾಣ ಅದರ ಬಗ್ಗೆ ಎಲ್ಲಿಲ್ಲದ ಪ್ರೀತಿ!"

"ಆಯ್ತು . ಬಣ್ಣಗಳೆಲ್ಲ ಒಣಗಿದ ಮೇಲೆ ಅದಕ್ಕೆ ಫ್ರೇಮ್ ಹಾಕಿಸಿ ನಿನ್ನಲ್ಲಿಗೆ ಕಳಿಸಿಕೊಡುತ್ತೇನೆ ಆಮೇಲೆ, ನಿನ್ನನ್ನು ನೀನು ಏನು ಮಾಡ್ತೀಯೋ ಮಾಡಿಕೋ.

ಹಾಲ್ ವಾರ್ಡ್ ಗಂಟೆ ಬಾರಿಸಿದ "ಡೋರಿಯನ್ ಟೀ ಕುಡಿಯುತ್ತೀಯಲ್ಲ? ಹೆನ್ರಿ ನೀನೂ ಕುಡಿಯುತ್ತೀಯೋ ಇಲ್ಲ ಇಂಥ ಸಣ್ಣ ಸಣ್ಣ ಸುಖಗಳನ್ನು ಬೇಡವೆನ್ನುತ್ತೀಯಾ?"

"ನನಗೆ ಇಂಥ ಸಣ್ಣ ಸುಖಗಳೇ ಬಹಳ ಇಷ್ಟ. ಆದರೆ ಸ್ಟೇಜ್ ಮೇಲಲ್ಲದೆ, ಬೇರೆಲ್ಲಿಯೂ ಸೀನ್ ಕ್ರಿಯೇಟ್ ಮಾಡೋದು ಮಾತ್ರ ಇಷ್ಟ ಆಗೊಲ್ಲ. ನೀವಿಬ್ಬರೂ ಅದೆಂಥ ವಿಚಿತ್ರ ಗೆಳೆಯರು!... ಅದು ಯಾರೋ ಮನುಷ್ಯನನ್ನು ವಿಚಾರ, ವಿವೇಕ ಇರುವ ಪ್ರಾಣಿ ಎಂದು ವಿವರಿಸಿದ್ದಾರೆ. ಆದರೆ ಆ ವಿವರಣೆ ಪೂರ್ತಿಯಾಗಿ ಒಪ್ಪೊಲ್ಲ. ಅವನು ಏನೇನೋ ಆಗಿರಬಹುದು. ಆದರೆ ವಿಚಾರವಂತನಂತು ಅಲ್ಲವೇ ಅಲ್ಲ. ಸದ್ಯ ಹಾಗಿಲ್ಲದಿರುವುದು ನನಗೆ ಸಂತೋಷಾನೆ ! ನೀವಿಬ್ಬರೂ ಇನ್ನು ಆ ಪಿಕ್ಚರ್ ಬಗ್ಗೆ ಕಿತ್ತಾಡೋದನ್ನು ನಿಲ್ಲಿಸಿದರೆ ಒಳ್ಳೇದೇನೋ ಎನಿಸುತ್ತೆ. ನೀನು ಅದನ್ನು ನನಗೇ ಕೊಟ್ಟರೆ ನೀನು ಇಟ್ಟುಕೊಳ್ಳೋಕ್ಕಿಂತ ಚೆನ್ನಾಗಿರುತ್ತೆ! ಈ ಹುಚ್ಚು ಹುಡುಗನಿಗೆ ಅದು ಬೇಕಿಲ್ಲ. ಆದ್ದರಿಂದ ನನಗೇ ಕೊಟ್ಟು ಬಿಡು" ಎಂದ ಹೆನ್ರಿ.

"ಬೇಸಿಲ್ ನನ್ನ ಹೊರತಾಗಿ ಬೇರೆ ಯಾರಿಗಾದರೂ ಇದನ್ನು ಕೊಟ್ಟರೆ ನಾನು ಸುಮ್ಮನೆ ಇರೋದಿಲ್ಲ ಎಂದೂ ನಿನ್ನನ್ನು ಕ್ಷಮಿಸುವುದಿಲ್ಲ" ಅಲ್ಲದೆ ನನ್ನನ್ನು ಹುಚ್ಚು ಹುಡುಗ ಅಂತ ಕರೆಯೋದನ್ನು ನಾನು ಸಹಿಸುವುದಿಲ್ಲ.

"ಈ ಭಾವಚಿತ್ರ ಖಂಡಿತ ನಿನ್ನದೇ! ಮೊದಲೇ ನಿನಗೆಂದು ಮೀಸಲಿಟ್ಟಿದ್ದೇನೆ."

"ಗ್ರೇ, ಹುಚ್ಚು ಹುಡುಗ ಅಂದದ್ದು ಪ್ರೀತಿಯಿಂದ. ನೀನು ಇನ್ನೂ ಚಿಕ್ಕ ಪ್ರಾಯದಲ್ಲಿರುವವನು ಎಂದು ನಿನಗೆ ನೆನಪು ಮಾಡಿದರೆ, ತಪ್ಪಾಗಿ ಭಾವಿಸಲಾರೆ ಎಂದುಕೊಳ್ಳಬಹುದಲ್ಲವೆ?"

ಬಾಗಿಲು ಬಡಿದ ಸದ್ದಾಯಿತು. ಅಷ್ಟರಲ್ಲಿ ಬಟ್ಲರ್ ಚಹದ ಕಪ್ಪುಗಳನ್ನು ತಂದಿರಿಸಿದ. ಮೂವರು ಚಹಾ ಹೀರಿದರು. ನಿರಾಳವೆನಿಸಿತು. ಒಂದು ಬಗೆಯ ಸೌಹಾರ್ದತೆ ವ್ಯಾಪಿಸಿತು.

"ನಾವೆಲ್ಲ ಯಾಕೆ ಇವತ್ತು ರಾತ್ರಿ ಥಿಯೇಟರ್‌ಗೆ ಹೋಗಬಾರದು ಎಲ್ಲೋ ಯಾವುದಾದರೂ ಏನಾದರೂ ಚೆನ್ನಾಗಿರೋ ನಾಟಕ ಇದ್ದೀತು."

"ಅಯ್ಯೋ ಬೇಡ ಯಾಕೋ ಬೋರಾಗುತ್ತೆ. ಆ ಹಳೇ ವೇಷಭೂಷಣ? ಅಬ್ಬಾ! ಬೇಡ ಅನಿಸುತ್ತೆ"

"ನಿಜ. ಹತ್ತೊಂಬತ್ತನೇ ಶತಮಾನದ ಆ ವೇಷಭೂಷಣವೆಲ್ಲ ನೋಡೋಕೆ ಅಸಹ್ಯವೆನಿಸುತ್ತೆ"

"ಅದನ್ನೆಲ್ಲ ನೀನು ಡೋರಿಯನ್ ಮುಂದೆ ಹೇಳಬೇಡ ಹ್ಯಾರಿ!"

"ಯಾವ ಡೋರಿಯನ್ ಚಹಾ ಚಪ್ಪರಿಸುತ್ತಿರುವ ಡೋರಿಯನ್ನೋ ಇಲ್ಲ ಕ್ಯಾನ್‌ವಾಸ್ ಮೇಲಿರೋ ಡೋರಿಯನ್ನೋ!?"

"ಯಾವ ಡೋರಿಯನ್ ಮುಂದೆಯೂ ಬೇಡ" "ಹೆನ್ರಿ ನಾನೂ ನಿನ್ನ ಜೊತೆ ಥಿಯೇಟರ್‌ಗೆ ಬರಲೇ" ಎಂದು ಡೋರಿಯನ್ ಹೆನ್ರಿಯನ್ನು ಕೇಳಿದ.

"ಆಯ್ತು ಬಾ. ಬೇಸಿಲ್ ನೀನೂ ಬರುವೆಯಲ್ಲ?" "ಇಲ್ಲ ನನಗೆ ತುಂಬ ಕೆಲಸವಿದೆ" "ಸರಿ ಹಾಗಾದ್ರೆ, ಗ್ರೇ ಮತ್ತು ನಾನು ಹೋಗಿ ಬರುತ್ತೇವೆ"

"ನಿಂಜೊತೆ ನನಗೆ ಬಹಳ ಖುಷಿಯಾಗುತ್ತೆ. ಕಲಾವಿದ ಕಪ್ಪುಗಳನ್ನು ಕೈಲಿ ಹಿಡಿದುಕೊಂಡೇ ಕ್ಯಾನ್‌ವಾಸ್ ಮುಂದೆ ನಿಂತು, "ನಾನು ನಿಜವಾದ ಡೋರಿಯನ್ ಜೊತೆ ಇರುತ್ತೇನೆ ಹೆನ್ರಿ" ಎಂದ. "ಏನು? ನಿಜವಾದ ಡೋರಿಯನ್! ನಿಜವಾದ ನಾನು, ಡೋರಿಯನ್ ಇಲ್ಲಿರುವಾಗ ಮತ್ಯಾರು ನಿಜವಾದ ಡೋರಿಯನ್?" ಅದರಲ್ಲಿರುವವನಂತೆ ನಾನು ಇದ್ದೇನೆಯೇ?"

"ಹೌದು. ಥೇಟ್ ಅದರಂತೇ ಇದ್ದೀಯ!" "ಅದ್ಭುತವಾಗಿದೆ! ಬೇಸಿಲ್!"

"ನೋಡೋದಕ್ಕೆ ನೀನು ಹಾಗೇ ಇದ್ದೀ. ಆದರೆ ಅದು ಮಾತ್ರ ಎಂದೂ ಬದಲಾಗೋದಿಲ್ಲ ಅದೇ ವಿಶೇಷ!! ಮುಂದುವರೆದು ಹೇಳಿದ – ಡೋರಿಯನ್ ಥಿಯೇಟರ್‌ಗೆ ಹೋಗಬೇಡ ನನ್ನಜೊತೆ ಊಟ ಮಾಡುವಿಯಂತೆ!"

"ಆಗೋಲ್ಲ ಬೇಸಿಲ್"

"ಯಾಕೆ"

"ನೋಡು ಮತ್ತೊಮ್ಮೆ ಕೇಳಿಕೊಳ್ತಿದ್ದೀನಿ" ಹುಡುಗ ಹಿಂಜರಿದ. ಲಾರ್ಡ್ ಹೆನ್ರಿಯತ್ತ ಒಮ್ಮೆ ನೋಡಿದ. ಹೆನ್ರಿ ತನ್ನ ಪಾಡಿಗೆ ತಾನು ಟೀ ಟೇಬಲ್ ಬಳಿ ಕುಳಿತು ಅವರನ್ನು ಗಮನಿಸುತ್ತ ಮುಗುಳ್ನಗುತ್ತಿದ್ದ.

"ನಾನು ಲಾರ್ಡ್ ಹೆನ್ರಿಗೆ ಮಾತು ಕೊಟ್ಟಿದ್ದೇನೆ" ಮಾತು ಕೊಟ್ಟಿದ್ದನ್ನು ಮುರಿದರೆ ಅವನೇನೂ ತಪ್ಪು ತಿಳಿಯುವುದಿಲ್ಲ. ಯಾಕೆಂದರೆ ಅವನು ಎಷ್ಟೋ ಸಲ ಮಾತು ಕೊಟ್ಟು,

ಮರೆತು ತಪ್ಪಿಸಿಕೊಂಡಿದ್ದಾನೆ. ಹೋಗಬೇಡಾಂತ ನಿನ್ನನ್ನು ಕೇಳಿಕೊಳ್ತಿದ್ದೀನಿ"

ಡೋರಿಯನ್ ಸಾಧ್ಯವಿಲ್ಲವೆಂಬಂತೆ ತಲೆಯಾಡಿಸುತ್ತಾ ನಗುತ್ತಿದ್ದ.

"ನಾನು ಹೋಗಲೇ ಬೇಕು ಬೇಸಿಲ್" ಎಂದ. "ಆಯ್ತು ಹೋಗುವುದಿದ್ದರೆ ಹೋಗು" ಎನ್ನುತ್ತ, ಟೀ ಕಪ್ಪುಗಳನ್ನು ಟ್ರೇನಲ್ಲಿರಿಸಿದ. "ಈಗಾಗಲೇ ಲೇಟಾಗಿದೆ. ಇನ್ನೂ ನೀವು ಹೋಗಿ, ಬಟ್ಟೆ ಬದಲಾಯಿಸಬೇಕಾಗುತ್ತೆ. ಬೇಗ ಹೊರಡಿ ಗುಡ್ ಬೈ ಹ್ಯಾರಿ! ಗುಡ್ ಬೈ ಡೋರಿಯನ್. ಆದಷ್ಟು ಬೇಗ ಬಂದು ನನ್ನನ್ನು ಭೇಟಿ ಮಾಡಿ. ಆದರೆ ನಾಳೇನೆ ಬನ್ನಿ."

"ಖಂಡಿತ"

"ಮರೆಯೋದಿಲ್ಲ ಅಲ್ವಾ?"

"ಇಲ್ಲ ಇಲ್ಲ ಖಂಡಿತ ಮರೆಯೊಲ್ಲ" ಡೋರಿಯನ್ ಹೇಳಿದ.

"ಮತ್ತೆ ನೀನು... ಹ್ಯಾರಿ!"

"ಆಯ್ತು "

"ನೀನು ಹೊರಗೆ ಗಾರ್ಡನ್‌ನಲ್ಲಿದ್ದಾಗ. ನಾನು ಹೇಳಿದ್ದು ನೆನಪಿದೆ ತಾನೆ?"

"ಅದನ್ನು ಮರೆತುಬಿಟ್ಟಿದ್ದೇನೆ"

"ನಿನ್ನನ್ನು ನಂಬುತ್ತೇನೆ".

"ನನ್ನನ್ನು ನಾನೇ ನಂಬೋಕಾದ್ರೆ" ಎಂದ ನಗುತ್ತಾ ಲಾರ್ಡ್ ಹೆನ್ರಿ.

"ಬಾ ಡೋರಿಯನ್. ನನ್ನ ಕಾರು ಹೊರಗೇ ಇದೆ. ನಿನ್ನನ್ನು ಎಲ್ಲಿ ಬಿಡಬೇಕೋ ಹೇಳು ಅಲ್ಲಿಯೇ ಬಿಟ್ಟು ಹೋಗ್ತೇನೆ.... ಗುಡ್ ಬೈ ಬೇಸಿಲ್ "ಅವರು ಅತ್ತ ಹೊರಡುತ್ತಿದ್ದಂತೆ, ಬಾಗಿಲು ಮುಚ್ಚಿ ಒಳಗೆ ಬಂದ ಕಲಾವಿದ, ಸೋಫಾದಲ್ಲಿ ಮೈ ಚಾಚಿದ. ಒಂದೆರಡು ಕ್ಷಣದಲ್ಲಿ ಅವನ ಮೊಗದಲ್ಲಿ ನೋವಿನಗೆರೆಗಳು ಕಾಣಿಸಿಕೊಂಡವು.

❖

# ಅಧ್ಯಾಯ - 3

**ಮಾ**ರನೇ ದಿನ ಲಾರ್ಡ್ ಹೆನ್ರಿ ಹನ್ನೆರಡೂವರೆ ಗಂಟೆಗೆ ತನ್ನ ಅಂಕಲ್‌ನನ್ನು ಭೇಟಿ ಮಾಡಲು ಹೋದ. ಆತ ಸಾಕಷ್ಟು ಶ್ರೀಮಂತನಾಗಿದ್ದ. ರಾಜಕೀಯದಲ್ಲೂ ಇದ್ದು ಟೋರಿ ಪದವಿ ಗಿಟ್ಟಿಸಿಕೊಂಡಿದ್ದ. ಹೆನ್ರಿ ಒಳಗೆ ಪ್ರವೇಶಿಸಿದಾಗ ಅಂಕಲ್ ತನ್ನ ಶೂಟಿಂಗ್ ಕೋಟಿನಲ್ಲಿದ್ದ. ಸಿರೂಟನ್ನು ಬಾಯಲ್ಲಿರಿಸಿಕೊಂಡಿದ್ದ. ಹೆನ್ರಿ ಒಳಗೆ ಬರುತ್ತಿದ್ದಂತೆ, "ಓ ಹೆನ್ರಿ ಏನಪ್ಪ ಇಷ್ಟು ದೂರ. ನಿಮ್ಮಂಥ ಶೋಕಿಲಾಲರು ಮಧ್ಯಾಹ್ನದ ತನಕ ಏಳೋದೇ ಇಲ್ಲ ಅಂದುಕೊಂಡಿದ್ದೆ."

"ಏನಿಲ್ಲ, ಪ್ರೀತಿ ಸಂಬಂಧಗಳಿಂದಾಗಿ ಬಂದೆ. ನಿಮ್ಮಿಂದ ನನ್ನದೊಂದು ಕೆಲಸ ಆಗಬೇಕಿತ್ತು" "ದುಡ್ಡೇನಾದ್ರು?" ಸೊಟ್ಟ ಮೋರೆ ಮಾಡಿಕೊಂಡು ಕೇಳಿದ.

" ಸರಿ ಸರಿ ಕೂತ್ಕೋ. ಹೇಳು ಏನು ವಿಚಾರ? ಈಗಂತೂ ಯುವಕರಿಗೆ ದುಡ್ಡೇ ಎಲ್ಲಾ!"

"ಹೌದು" ಕೋಟಿನ ಗುಂಡಿಯನ್ನು ಸರಿಪಡಿಸಿಕೊಳ್ಳುತ್ತಾ ಹೇಳಿದ, "ಅವರು ದೊಡ್ಡವರಾದ ಮೇಲೆ ದುಡ್ಡಿನ ಬೆಲೆ ಅರ್ಥ ಮಾಡಿಕೊಳ್ತಾರೆ. ಆದರೆ ನಾನೀಗ ದುಡ್ಡಿಗಾಗಿ ನಿಮ್ಮ ಹತ್ತಿರ ಬರಲಿಲ್ಲ. ನನಗೇನೋ ಒಂದು ವಿಷಯ ತಿಳ್ಕೋಬೇಕಿತ್ತು. ಅದೇನೂ ಅಂಥ ಮಹತ್ವದ್ದಲ್ಲ "ಬ್ಲೂ ಬುಕ್ಕಲ್ಲಿ ಇರೋದಾದ್ರೆ ಹೇಳಬಲ್ಲೆ"

"ಅದೇನೂ ಅಲ್ಲ. ನನಗೆ ಮಿಸ್ಟರ್ ಡೋರಿಯನ್ ಗ್ರೇ ಬಗ್ಗೆ ಸ್ವಲ್ಪ ವಿವರ ಬೇಕಿತ್ತು."

"ಏನೆಂದೆ? ಡೋರಿಯನ್ ಗ್ರೇ? ಅವನು ಯಾರು?" ಹುಬ್ಬೇರಿಸಿ, ಅಂಕಲ್ ಜಾರ್ಜ್ ಮರು ಪ್ರಶ್ನಿಸಿದ.

“ಅದನ್ನು ತಿಳ್ಕೋಳ್ಳೋಕೆ ಬಂದಿದ್ದೀನಿ ಅಂಕಲ್. ನನಗೆ ಅವನು ಸ್ವಲ್ಪ ಗೊತ್ತು. ಅವನು ಕೊನೆಯ ಲಾರ್ಡ್ ಕೆಲ್ಸೋನ ಮೊಮ್ಮಗ. ಅವನ ತಾಯಿ ಲೇಡಿ ಮಾರ್ಗರೆಟ್ ದೆವೆರೊ. ಅವನ ತಾಯಿ ವಿಚಾರ ನನಗೆ ತಿಳ್ಕೊಬೇಕಾಗಿದೆ. ಅವಳ ಬಗ್ಗೆ ಹೇಳಿ. ಅವಳು ನೋಡೋಕೆ ಹೇಗೆ ಇದ್ದಳು? ಯಾರನ್ನು ಮದುವೆ ಆಗಿದ್ದಳು? ನಿಮ್ಮ ಕಾಲದವರ ಬಗ್ಗೆ ನಿಮಗೆ ಸಾಕಷ್ಟು ತಿಳಿದಿರುತ್ತೆ. ಆದ್ದರಿಂದ ಅವಳೂ ನಿಮಗೆ ಗೊತ್ತೇ ಇರ್ತಾಳೆ. ಡೋರಿಯನ್ ಗ್ರೇನನ್ನು ಇತ್ತೀಚೆಗಷ್ಟೇ ಭೇಟಿಯಾದೆ. ಅವನಲ್ಲಿ ನನಗೆ ತೀರಾ ಆಸಕ್ತಿ ಉಂಟಾಗಿದೆ.”

“ಓ ! ಕೆಲ್ಸೋನ್ ಮೊಮ್ಮಗ... ಅವನ ತಾಯಿ ಬಗ್ಗೆ ನನಗೆ ಚೆನ್ನಾಗಿ ಗೊತ್ತು. ಅವಳು ಅನುಪಮ ಸೌಂದರ್ಯವತಿ. ಆದರೆ ಎಂತೆಂಥವರೋ ಅವಳಿಗಾಗಿ ಸಾಯುತ್ತಿದ್ದಾಗ ಯಾರಿಗೂ ಹೇಳದೆ ಯಾವನೋ ಸಾಮಾನ್ಯ ದರ್ಜೆಯ ಯುವಕನೊಬ್ಬನ ಜೊತೆ ಓಡಿ ಹೋದಳು. ದುರಾದೃಷ್ಟ, ಅವಳ ಗಂಡ ದ್ವಂದ್ವ ಯುದ್ಧದಲ್ಲಿ ತೀರಿಕೊಂಡ. ಅವಳ ಅಪ್ಪ ಯಾವನೋ ಒಬ್ಬನಿಗೆ ಲಂಚ ಕೊಟ್ಟು ಓಡಿ ಹೋದ ಮಗಳ ಗಂಡನ ಬಗ್ಗೆ ಪಬ್ಲಿಕ್‌ನಲ್ಲಿ ಕೆಟ್ಟ ಕೆಟ್ಟ ಮಾತುಗಳಲ್ಲಿ ಬೈಯುವಂತೆ ಮಾಡಿದ. ಕೆಲ್ಸೋ ಒಂದಷ್ಟು ದಿನ ಅಲ್ಲಿ ಇಲ್ಲಿ ಕಳೆದ. ನಂತರ ಮಗಳನ್ನು ಹಿಂದಕ್ಕೆ ಕರೆಸಿಕೊಂಡ. ಆದರೆ ಅವಳು ಅವನೊಂದಿಗೆ ಮಾತಾಡಿದ್ದೇ ಇಲ್ಲ. ಸಂಬಂಧವೂ ಅಷ್ಟು ಚೆನ್ನಾಗಿರಲಿಲ್ಲ. ಪಾಪ! ಒಂದೆರಡು ತಿಂಗಳಲ್ಲೇ ಎಳೇ ಮಗುವನ್ನು ಬಿಟ್ಟು ಸತ್ತು ಹೋದಳು. ಬಹುಶಃ ಗಂಡು ಮಗು ಇರಬೇಕು. ಅವನು ಹೇಗಿದ್ದಾನೇಂದೆ? ಅವನೇನಾದರೂ ಅವನ ಅಮ್ಮನ ಥರ ಇದ್ದರೆ, ಬಹಳ ರೂಪವಂತನಾಗಿರಲೇ ಬೇಕು.”

“ಹೌದು ಬಹಳ ಚೆನ್ನಾಗಿದ್ದಾನೆ”

“ಹೋಗಲಿ ಅವನಾದರೂ ಒಳ್ಳೆಯವರ ಕೈಗೆ ಬೀಳಲಿ. ಕೆಲ್ಸೋ ಏನಾದರೂ ಸರಿಯಾದ ಕೆಲಸ ಮಾಡಿದ್ದರೆ, ಒಂದು ಕೊಪ್ಪರಿಗೆ ಹಣ ಅವನಿಗೆ ಸಿಕ್ಕಿರುತ್ತೆ, ಅವನಮ್ಮನ ಬಳಿಯೂ ಸಾಕಷ್ಟು ಹಣ ಇತ್ತು. ಸೆಲ್ಬಿ ವಂಶದ ಆಸ್ತಿಕೂಡಾ ಅವನಿಗೇ ಬಂದಿರಬೇಕು. ಅಮ್ಮನ ಅಜ್ಜನಿಗೆ ಕೆಲ್ಸೋನ ಕಂಡರೆ ಆಗ್ತಾ ಇರಲಿಲ್ಲ. ಅವನನ್ನು ಒಂದು ದರಿದ್ರ ನಾಯಿ ಅಂತಲೇ ಭಾವಿಸಿದ್ದ. ಅವನು ಹಾಗೆ ಇದ್ದ ಕೂಡಾ. ಮೊಮ್ಮಗನನ್ನು ತುಂಬ ಚೆನ್ನಾಗಿ ನೋಡಿಕೊಂಡಿರಬೇಕು.”

“ಅದೇನೊ ನನಗೆ ಗೊತ್ತಿಲ್ಲ. ಹುಡುಗ ಸುಖವಾಗಿ ಇರ್ತಾನೆ ಅಂದುಕೊಳ್ತೀನಿ. ಇನ್ನೂ ಅವನು ವಯಸಿಗೆ ಬಂದಿಲ್ಲ. ಅವನಮ್ಮ ಸುಂದರವಾಗಿರಬೇಕಲ್ಲ?”

“ನಾನು ನೋಡಿದವರಲೆಲ್ಲ ಅವಳು ಬಹಳ ರೂಪವತಿ. ಅಂಥವಳು ಅದ್ಯಾಕೆ ಹಾಗೆ ನಡೆದುಕೊಂಡಳೋ, ನನಗಂತೂ ಅರ್ಥ ಆಗುತ್ತಿಲ್ಲ. ಎಂಥಾವರನ್ನು ಬೇಕಾದರೂ ಅವಳು ಆರಿಸಿಕೊಳ್ಳಬಹುದಾಗಿತ್ತು. ಕಾರ್ಲಿಂಗ್‌ಟನ್ ಅಂತೂ ಅವಳ ಹಿಂದೆ ಬಿದ್ದಿದ್ದ. ಅವಳೂ ಬಹಳ ರೊಮ್ಯಾಂಟಿಕ್ಕೇ. ಆ ವಂಶದಲ್ಲಿನ ಎಲ್ಲಾ ಹೆಂಗಸರೂ ಸ್ವಲ್ಪ ಹೆಚ್ಚು ಕಡಿಮೆ ಹಾಗೇನೆ. ಗಂಡಸರು, ಅಯ್ಯೋ ಪಾಪ ಅನಿಸುತ್ತೆ. ಹೆಂಗಸರಂತು ಅದ್ಭುತ ! ಕಾರ್ಲಿಂಗ್‌ಟನ್ ಅವಳ ಕಾಲಿಗೆ ಬಿದ್ದು ಕೇಳಿಕೊಂಡ. ಅದನ್ನು ಅವನೇ ಹೇಳಿದ್ದ. ಆದರೂ ಅವಳು ಒಪ್ಪಲಿಲ್ಲ. ತಿರಸ್ಕರಿಸಿ ಬಿಟ್ಟಳು. ಲಂಡನ್‌ನ ಹುಡುಗೀರೆಲ್ಲಾ ಅವನ ಹಿಂದೆ ಬಿದ್ದಿದ್ದರು. ಅಂದ ಹಾಗೆ

ಹ್ಯಾರಿ, ಅದೇನೋ ನಿಮ್ಮಪ್ಪ ಇಂಗ್ಲಿಷ್ ಹುಡುಗೀರನ್ನು ಬಿಟ್ಟು ಅಮೆರಿಕಾ ಹುಡುಗೀನ ಮದುವೆ ಆಗಬೇಕೂಂತ ಡಾರ್ಟ್ ಮೋರ್ ಆಸೆಪಡ್ತಿದ್ದಾನೆ ಅಂತ ಹೇಳಿದನಲ್ಲ!

"ಈಗ ಅಮೆರಿಕನ್ ಹುಡುಗೀರನ್ನು ಮದುವೆ ಆಗೋದು ಫ್ಯಾಷನ್ ಆಗಿಬಿಟ್ಟಿದೆ ಅಂಕಲ್."

"ನಾನಂತು ಇಂಗ್ಲಿಷ್ ಹುಡುಗೀರನ್ನೇ ಬೆಂಬಲಿಸುತ್ತೇನೆ."

"ಅಮೆರಿಕನ್ ಹುಡುಗೀರೇ ಸ್ಪರ್ಧೆಯಲ್ಲಿರೋದು ಅವರು ತುಂಬ ದಿನ ಉಳಿಯೋದಿಲ್ಲ" ಗೊಣಗುತ್ತಾ ಅವನ ಅಂಕಲ್ ಹೇಳಿದ.

"ಈ ಅಮೆರಿಕನ್ ಹೆಂಗಸರು ಯಾಕಾದರೂ ಅವರ ದೇಶದಲ್ಲಿ ಇರೋದಿಲ್ಲಾಂತೀನಿ. ಹೆಂಗಸರಿಗೆ ಅದಂತು ಸ್ವರ್ಗ ಅಂತ ಹೇಳ್ತಾನೇ ಇರ್ತಾರೆ."

"ಅದೇ ಕಾರಣ, ಈವ್ ಅಂಥಾವರು ಅಲ್ಲಿಂದ ಹೊರಗೆ ಬರೋಕೆ ಪ್ರಯತ್ನಿಸುತ್ತಾರೆ. ಸರಿ ಅಂಕಲ್ ಹೋಗಿ ಬರ್ತೀನಿ. ಮತ್ತೆ ಊಟಕ್ಕೆ ಲೇಟಾಗಿ ಬಿಡುತ್ತೆ. ನನಗೆ ಯಾವಾಗಲೂ ಹಳೆ ಫ್ರೆಂಡ್ಸ್‌ಗಿಂತ ಹೊಸ ಫ್ರೆಂಡ್ಸ್‌ಗಳ ಬಗ್ಗೆ ತಿಳಿಯೋದಕ್ಕೇ ಇಷ್ಟಪಡ್ತೀನಿ.

"ಸರಿ ಊಟಕ್ಕೆ ಹೇಗೆ ಹೆನ್ರಿ?"

"ಅಗಾಥಾ ಆಂಟಿ ಮನೆಯಲ್ಲಿ. ನಾನು ಮತ್ತು ಡೋರಿಯನ್ ಇಬ್ಬರಿಗೂ ಹೇಳಿದ್ದೀನಿ. ಇತ್ತೀಚೆಗೆ ಡೋರಿಯನ್ ಅಗಾಥಾ ಆಂಟಿ ಆಶ್ರಿತನಾಗಿದ್ದಾನೆ."

"ಹ್ಯಾರಿ, ಆಂಟಿಗೆ ಹೇಳು. ಇನ್ನು ಮುಂದೆ ಚಾರಿಟಿಗೇಂತ ನನ್ನನ್ನು ಏನೂ ಕೇಳಬಾರದೂಂತ ಹೇಳು. ಅವಳ ಚಾರಿಟಿ ಕೆಲಸಗಳಿಗೆ ಚೆಕ್ಕುಗಳನ್ನು ಬರೆದೂ ಬರೆದೂ ಬೇಸತ್ತಿದ್ದೀನಿ."

"ನಾನು ಹೇಳೋದು ಹೇಳ್ತೀನಿ. ಆದರೆ ಅದರಿಂದ ಏನೂ ಪ್ರಯೋಜನ ಆಗಲಾರದು."

ಹೆನ್ರಿ ಡೋರಿಯನ್ ಗ್ರೇನ ತಂದೆ ತಾಯಿಗಳ ಬಗ್ಗೆ ಒಂದಿಷ್ಟು ವಿವರಗಳನ್ನು ಪಡೆದ. ಉದ್ದಕ್ಕೂ ಯೋಚಿಸುತ್ತಲೇ ಇದ್ದ. ಅಷ್ಟು ರೂಪವತಿ, ಚೆಲುವೆ ಆಗಿದ್ದ ಹೆಂಗಸು ಎಂಥ ಹುಚ್ಚು ಪ್ರೀತಿಗೆ ಬಿದ್ದಿದ್ದಳು. ಕೇವಲ ಒಂದೆರಡು ವಾರಗಳ ಸುಖಕ್ಕಾಗಿ ಪ್ರಾಣವನ್ನೇ ಬಲಿಗೊಡಬೇಕಾಯಿತು. ತಿಂಗಳುಗಟ್ಟಲೆ ಅನುಭವಿಸಿದ ಭಯಂಕರ ನೋವು! ನೋವಿನಲ್ಲೇ ಮಗುವಿಗೆ ಜನನ. ಮಗುವಿನಿಂದ ತಾಯಿಯನ್ನು ಕಸಿದುಕೊಂಡ ಮೃತ್ಯು. ಹುಟ್ಟಿದ ಮಗು ತಾಯಿಯಿಲ್ಲದೆ ಅನಾಥನಾಗುವುದು. ಮಗು ಏಕಾಂಗಿಯಾಗಿ ಬೆಳೆದದ್ದು, ಪ್ರೀತಿಯಿಲ್ಲದೆ ಒರಟನಾಗಿದ್ದ ಮುದಿಯನ ಹಿಂಸೆ. ಏನಿದೆಲ್ಲ ಎಂದು ಯೋಚಿಸುತ್ತಲೆ ಇದ್ದ. ಇಂಥ ಹಿನ್ನೆಲೆಯಲ್ಲಿ ಕುಂದುಕೊರತೆಗಳಿಲ್ಲದೆ ಸಮಗ್ರ ವ್ಯಕ್ತಿತ್ವದೊಂದಿಗೆ ಬೆಳೆಯುವುದು ಸವಾಲೇ ಆಗಿರಬೇಕು. ಆದರೂ ಪರಿಪೂರ್ಣತೆಯೊಂದಿಗೆ ಬೆಳೆದ. ಪ್ರಪಂಚದಲ್ಲಿ ಅತ್ಯುತ್ತಮವಾದ ಪ್ರತಿಯೊಂದರ ಹಿಂದೆ ಏನಾದರೂ ದುರಂತ ಇದ್ದೇ ಇರುತ್ತದೆ. ಎಂಥ ಪರಿಸರದಲ್ಲಿಯೂ

ಯಾವುದೋ ಒಂದು ಅದ್ಭುತವಾದ ಹೂ ಅರಳಬಹುದೆಂದು ಪ್ರಪಂಚ ನಿರೀಕ್ಷಿಸುತ್ತಾ ಕಾಯುತ್ತೆ. ಆ ದಿನ ಡಿನ್ನರ್ ಟೇಬಲ್‌ನಲ್ಲಿ ತನಗೆ ಎದುರಾಗಿ ಕುಳಿತಿದ್ದ ಮೋಹಕ ರೂಪದ ಡೋರಿಯನ್ ನೆನಪಾದ. ಅವನ ಮುದ್ದು ಮುಖ. ಮಾತಾಡಿದರೆ ವಾಯಲಿನ್ ಸಂಗೀತದಂತಹ ಮಾಧುರ್ಯ. ಅವನು ನುಡಿಸುವ ರೀತಿಯೂ ಹಾಗೇ ಇತ್ತು. ಬೇಸಿಲ್‌ನ ಮನೆಯಲ್ಲಿ ಕಂಡ ಡೋರಿಯನ್‌ನ ಸೌಂದರ್ಯ ಎಂಥದಿತ್ತು. ಮೋಡಿಗೆ ಸಿಲುಕದೆ ಇರುವುದು ಸಾಧ್ಯವೇ ಇರಲಿಲ್ಲ. ಆದರೆ.... ಎಂಥ ಅನ್ಯಾಯ !ಈ ಅದ್ಭುತ, ಮೋಹಕ ಸೌಂದರ್ಯ, ಕರಗಿಹೋಗುವ ದುರಂತದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಬಾಡಿ ಹೋಗುವುದೇ ಅದರ ಹಣೆಬರಹ.

ಬೇಸಿಲ್ ಎಂಥ ಕಲಾವಿದ. ಕಲಾ ಕ್ಷೇತ್ರದಲ್ಲಿ ಅವನು ಸಾಧಿಸಿದ ಅನನ್ಯತೆಗೆ ಎಣೆಯಿಲ್ಲ. ತನ್ನ ಅದ್ಭುತ ಸೌಂದರ್ಯದ ಬಗ್ಗೆ ತನಗೇ ಪರಿವೆಯಿಲ್ಲದ, ಒಬ್ಬ ವ್ಯಕ್ತಿಯನ್ನು ಎದುರು ನಿಲ್ಲಿಸಿಕೊಂಡು ಅದ್ಭುತವಾದದ್ದನ್ನು ಅನಾವರಣ ಮಾಡಿದ, ಹೊರತೆಗೆದ. ಡೋರಿಯನ್‌ನ ಅರಿವಿಗೇ ಬಾರದಂತೆ ಒಂದು ಸುಂದರ ಭಾವಚಿತ್ರವನ್ನು ಸೃಷ್ಟಿಸಿದ. ಇನ್ನು ಕಲಾವಿದನ ಮೇಲೇ ವಿಜಯ ಸಾಧಿಸಿಸುವ ಪ್ರಯತ್ನ. ಈಗಾಗಲೇ ಅರ್ಧ ಸಾಧಿಸಿದ್ದಾನೇ ಕೂಡಾ ! ಪ್ರೀತಿ ಮತ್ತು ಸಾವಿನ ಮಗನಾದ ಇವನಲ್ಲಿ ಆಕರ್ಷಕವಾದದ್ದೇನೋ ಇದೆ. ಹೀಗೆ ನಿರಂತರ ಯೋಚನೆಗಳ ಲಹರಿಯಲ್ಲಿ ಮುಳುಗಿದ್ದ. ಆಂಟಿ ಮನೆಯನ್ನೂ ದಾಟಿ ಹೋದ ಮೇಲೆ ಥಟ್ಟನೆ ನೆನಪಾಗಿ ಹಿಂದಕ್ಕೆ ನಡೆದ.

❖

# ಅಧ್ಯಾಯ - 4

**ಒಂ**ದು ಮಧ್ಯಾಹ್ನ ಡೋರಿಯನ್ ಗ್ರೇ ಲಾರ್ಡ್‌ಹೆನ್ರಿ ಮನೆಗೆ ಹೋದ. ಹೆನ್ರಿ ಇರಲಿಲ್ಲವಾಗಿ ಅವನ ಲೈಬ್ರರಿಯಲ್ಲಿ ಕುಳಿತು ಯಾವುದೋ ಒಂದು ಪುಸ್ತಕದ ಪುಟಗಳನ್ನು ತಿರುವಿ ಹಾಕುತ್ತಿದ್ದ. ಲೈಬ್ರರಿ ಅಚ್ಚುಕಟ್ಟಾಗಿತ್ತು. ಅಲ್ಲಿನ ಪರಿಸರವೂ ಚೆನ್ನಾಗಿತ್ತು. ತುಂಬಾ ಹೊತ್ತು ಲಾರ್ಡ್ ಹೆನ್ರಿಯ ನಿರೀಕ್ಷೆಯಲ್ಲಿ ಕುಳಿತಿದ್ದ. ಸ್ವಲ್ಪ ಸಮಯದ ನಂತರ ಥಟ್ಟನೆ ಬಾಗಿಲು ತೆರೆದುಕೊಂಡು ಯಾರೋ ಬಂದ ಹಾಗಾಯ್ತು. ಹೆನ್ರಿಯೇ ಬಂದಿರಬೇಕೆಂದು,

"ಹೆನ್ರಿ, ಎಷ್ಟು ಲೇಟು ಮಾಡಿಬಿಟ್ಟೆ" ಎಂದು ಬಾಗಿಲ ಕಡೆ ನೋಡಿದ!

"ಸಾರಿ, ನಾನು ಲಾರ್ಡ್ ಹೆನ್ರಿಯಲ್ಲ ಮಿಸ್ಟರ್ ಗ್ರೇ" ಕೀರಲು ದನಿ ಕೇಳಿಸಿತು.

"ಸಾರಿ, ಕ್ಷಮೆಯಿರಲಿ. ನಾನು ಹೆನ್ರಿಯೇ ಬಂದ ಎಂದುಕೊಂಡಿದ್ದೆ."

"ಓ ನನ್ನ ಗಂಡ ಬಂದ ಎಂದುಕೊಂಡಿದ್ದೆಯಾ? ಪರವಾಗಿಲ್ಲ, ನಾನು ಹೆನ್ರಿಯ ಹೆಂಡತಿ, ಲೇಡಿ ಹೆನ್ರಿ ನನ್ನ ಪರಿಚಯ ನಾನೇ ಮಾಡಿಕೊಡ್ತಿದ್ದೀನಿ. ನಿನ್ನ ಪರಿಚಯ ನನಗಿದೆ. ನನ್ನ ಗಂಡನ ಬಳಿ ನಿನ್ನ ಫೋಟೋಗಳು, ಹದಿನೇಳೋ ಹದಿನೆಂಟೊ ಇವೆ. ಅದರಲ್ಲಿ ನಿನ್ನನ್ನು ನೋಡಿದ್ದೇನೆ."

"ಹದಿನೇಳೇನಲ್ಲ, ಹದಿನೆಂಟು ಲೇಡಿ ಹೆನ್ರಿ"

"ಹೂಂ. ಸರಿ ಹದಿನೆಂಟೂಂತಲೇ ಇಟ್ಕೊ. ಆ ಹೊತ್ತೊಂದು ರಾತ್ರಿ ನಿನ್ನನ್ನು ಅಪೆರಾದಲ್ಲಿ ನೋಡಿದ್ದೆ." ಎಂದು ಹೇಳಿ ಸಣ್ಣಗೆ ನಕ್ಕಳು ಮತ್ತು ಅವನತ್ತ, ಕಣ್ಣು ರೆಪ್ಪೆ ಬಡಿಯದೆ ನೋಡಿದಳು. ಯಾವಾಗಲೂ ತುಂಬಾ ಚೆನ್ನಾಗಿ, ನೀಟಾದ ಉಡುಪಿನಲ್ಲಿ ಕಾಣಬೇಕೆಂದು ಪ್ರಯತ್ನಿಸುತ್ತಿದ್ದಳು! ಆದರೆ ನಿಜವಾಗಿ ಕಾಣುತ್ತಿದ್ದುದೆಂದರೆ ಅಡ್ಡಾದಿಡ್ಡಿಯಾಗಿ ಯಾವಾಗಲೂ

ಯಾರನ್ನಾದರೂ ಪ್ರೀತಿಸುವ ಪ್ರಯತ್ನಗಳಲ್ಲೇ ಇರುತ್ತಿದ್ದರೂ, ಪ್ರೀತಿಸುವವರು ಮಾತ್ರ ಯಾರೂ ಇರುತ್ತಿರಲಿಲ್ಲ. ಅವಳ ಹೆಸರು ವಿಕ್ಟೋರಿಯಾ. ಮಾಮೂಲಾಗಿ ಚರ್ಚಿಗೆ ಹೋಗುವುದನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ.

"ನನಗೆ ವ್ಯಾಗ್ನರ್ ಮ್ಯೂಸಿಕ್ ಎಂದರೆ ತುಂಬಾ ಇಷ್ಟ. ಯಾಕೇಂದ್ರೆ ಅದು ಎಷ್ಟು ಜೋರಾಗಿ ಇರುತ್ತೇಂದ್ರೆ, ಯಾರಾದರೂ ಏನಾದರೂ ಮಾತಾಡಿದರೂ ಕೂಡಾ ಕೇಳಿಸುವುದಿಲ್ಲ. ಡೋರಿಯನ್ ಮುಗುಳ್ನಕ್ಕ.

"ಸಂಗೀತ ಕೇಳಿಸಿಕೊಳ್ಳುವಾಗ, ನಾನು ಮಾತಾಡೋದಿಲ್ಲ. ನೀವು ಹೇಳಿದಂಗೆ ಕೆಟ್ಟ ಸಂಗೀತವಾದರೆ, ಸಂಭಾಷಣೆಯಲ್ಲಿ ಮುಳುಗಿಸಿ ಬಿಡಬಹುದು."

"ಆಹಾ ಹೆನ್ರಿ ಅಭಿಪ್ರಾಯ ಕೂಡಾ ಅದೇ! ಹೌದಲ್ಲ ಮಿಸ್ಟರ್ ಗ್ರೇ ! ಹ್ಯಾರಿಯ ಅಭಿಪ್ರಾಯಗಳೆಲ್ಲಾ ನನಗೆ ತಿಳಿಯೋದು ಅವರ ಫ್ರೆಂಡ್ಸ್‌ಗಳಿಂದ. ಒಂದು ವಿಷಯ. ನಾನು ಹೀಗೆಲ್ಲ ಮಾತಾಡಿದೆ ಅಂದ್ರೆ, ಒಳ್ಳೆ ಸಂಗೀತ ನನಗೆ ಇಷ್ಟ ಇಲ್ಲಾಂತಲ್ಲ ನನಗೂ ತುಂಬಾ ಇಷ್ಟಾನೇ. ಸಂಗೀತ ಕೇಳ್ತಾ ಇದ್ದರೆ ಏನೋ ರೋಮ್ಯಾಂಟಿಕ್ ಭಾವನೆ. ನಾನು ಮಾಡುವ ಪಾರ್ಟಿಗಳಿಗೆ ನೀನು ಬಂದೇ ಇಲ್ಲ ಅನಿಸುತ್ತೆ. ಖಂಡಿತ ಒಮ್ಮೆ ಬರಬೇಕು."

ಓ ಹ್ಯಾರಿ ! ಹ್ಯಾರಿ !ನಿನ್ನನ್ನು ಏನೋ ಕೇಳಬೇಕೂಂತ ಬಂದೆ. ನೋಡಿದರೆ ಮಿ॥ ಗ್ರೇ ಕೂತಿದ್ದರು. ಸಂಗೀತದ ಬಗ್ಗೆ ಒಳ್ಳೆ ಚರ್ಚೆ ನಡೀತಾ ಇತ್ತು. ಇಬ್ಬರದೂ ಒಂದೇ ಅಭಿಪ್ರಾಯಗಳು, ಅಲ್ಲ, ಅಲ್ಲ, ಬೇರೆ ಬೇರೆ! ಅವರ ಜೊತೆ ಮಾತಾಡಿದ್ದು ನನಗೆ ತುಂಬಾ ಸಂತೋಷ ಅಂತ ಅನ್ನಿಸಿತು.

"ಹೋಗಲಿ ಬಿಡು ಪ್ರಿಯೆ. ನನಗೂ ತುಂಬಾ ಖುಷಿ ಆಯ್ತು. ಕ್ಷಮಿಸು ಡೋರಿಯನ್, ಸ್ವಲ್ಪ ತಡ ಆಯ್ತು. ಏನೋ ಕೊಂಡುಕೊಳ್ಳಬೇಕೂಂತ ಹೋಗಿದ್ದೆ. ಚೌಕಾಶಿ ಮಾಡಿ ತಗೊಳ್ಳೋಷ್ಟು ಹೊತ್ತಿಗೆ ಇಷ್ಟು ಸಮಯ ಹಿಡೀತು."

"ಸರಿ, ನನಗೆ ಹೊತ್ತಾಯ್ತು ಹೊರಡಬೇಕಿದೆ" ಎಂದು ಒಂದು ಹುಚ್ಚು ನಗೆ ನಕ್ಕು, "ಬರ್‍ತೀನಿ ಹ್ಯಾರಿ, ಅಂದ ಹಾಗೆ ನೀವಿಬ್ಬರೂ ಹೊರಗಡೆ ಊಟ ಮಾಡುವವರಿದ್ದೀರಿ ಅಲ್ವೆ? ನಾನೂ ಕೂಡಾ ಹೊರಗೇ ಊಟಕ್ಕೆ ಹೋಗ್ತಿದ್ದೀನಿ" ಎಂದಳು ಲೇಡಿ ಹೆನ್ರಿ. ಅವಳು ಹೋದ ಬೆನ್ನಲ್ಲೇ ಬಾಗಿಲು ಮುಚ್ಚಿ ಬಂದು ಸೋಫಾದಲ್ಲಿ ಕುಕ್ಕರಿಸಿ, ಸಿಗರೇಟು ಹಚ್ಚಿದ.

"ಡೋರಿಯನ್ ಹುಲ್ಲಿನ ಬಣ್ಣದ ಕೂದಲು ಇರುವವರನ್ನು ಖಂಡಿತ ಮದುವೆಯಾಗಬೇಡ."

"ಯಾಕೆ ಹ್ಯಾರಿ"

"ಅವರು ಬಹಳ ಸೆಂಟಿಮೆಂಟಲ್"

"ಆದರೆ ನನಗೆ ಸೆಂಟಿಮೆಂಟಲ್ ಆಗಿ ಇರುವವರೇ ಬಹಳ ಇಷ್ಟ."

"ಎಂದೂ ಮದುವೆಯಂತೂ ಆಗಬೇಡ. ಗಂಡಸರು ಮದುವೆ ಆಗೋದು ಯಾಕೇಂದ್ರೆ

ಬೇಸತ್ತು ಹೋಗಿರ್ತಾರೆ. ಹೆಂಗಸರು ಯಾಕೆ ಮದುವೆಯಾಗ್ತಾರೆ ಅಂದ್ರೆ ಒಂದು ಥರಾ ಕುತೂಹಲ. ಆದರೆ ಇಬ್ಬರೂ ನಿರಾಶರಾಗುತ್ತಾರೆ."

"ನಾನು ಮದುವೆ ಆಗೋ ಇರಾದೆ ಇಟ್ಕೊಂಡಿಲ್ಲ. ಯಾಕೇಂದ್ರೆ ನಾನು ಒಬ್ಬರನ್ನು ಪ್ರೀತಿಸುತ್ತಿದ್ದೇನೆ. ಇದೆಲ್ಲಾ ನಿನ್ನದೇ ಮಾತುಗಳು. ನಾನು ಪ್ರಯೋಗಕ್ಕೆ ಇಳಿಸುತ್ತಿದ್ದೇನೆ. ಅದೇ ಮಾಮೂಲಿ ನೀನು ಹೇಳಿದ್ದನ್ನೆಲ್ಲಾ ಮಾಡುತ್ತಿರುವ ಹಾಗೆ."

"ಯಾರನ್ನು ಪ್ರೀತಿಸುತ್ತಿದ್ದೀಯಪ್ಪಾ?

"ಒಬ್ಬ ಅಭಿನೇತ್ರಿಯನ್ನು" ನಾಚುತ್ತಾ ಹೇಳಿದ ಡೋರಿಯನ್.

"ಅದೇ ಸಾಮಾನ್ಯ ನಟಿಯರು"

"ಹಾಗೆ ಹೇಳಬೇಡ ಹೆನ್ರಿ. ಅವಳನ್ನು ನೋಡಿದರೆ, ಹೀಗೆ ಮಾತಾಡೊಲ್ಲ"

"ಯಾರವಳು"

"ಅವಳ ಹೆಸರು ಸಿಬಿಲ್ ವೇನ್"

"ಯಾವತ್ತು ಆ ಹೆಸರು ಕೇಳಿಲ್ಲ".

"ಯಾರೂ ಕೇಳಿಲ್ಲ. ಆದರೆ ಜನಕ್ಕೆ ಆಮೇಲೆ ಗೊತ್ತಾಗುತ್ತೆ. ಅವಳು ನಿಜವಾಗಿಯೂ ಜೀನಿಯಸ್."

"ಹುಡುಗಾ ಯಾವ ಹೆಣ್ಣೂ ಜೀನಿಯಸ್ ಅಲ್ಲ, ಅವರೆಲ್ಲ ಅಲಂಕಾರಕ್ಕೆ, ಹೇಳೋಕೆ ಏನೂ ಇಲ್ಲ ಅವರ ಹತ್ತಿರ. ಆದರೆ ಹೇಳುವುದನ್ನು ಮೈಮರೆಸುವಂತೆ ಹೇಳುತ್ತಾರೆ. ಬುದ್ಧಿ, ನೈತಿಕತೆಯ ಮೇಲೆ ದಿಗ್ವಿಜಯ ಸಾಧಿಸುವುದಕ್ಕೆ ಬದಲಾಗಿ ಕೇವಲ ಮಾತುಗಳ, ಶಬ್ದಗಳ ಮೇಲೆ ದಿಗ್ವಿಜಯ ಸಾಧಿಸುತ್ತಾರೆ. ಹ್ಯಾರಿ,

"ನಿಜ ಡೋರಿಯನ್. ಹೆಂಗಸರು ಹೇಗೆ ನೀನು ಹೇಗೆ ಅನ್ನುವುದನ್ನು ವಿಶ್ಲೇಷಿಸುತ್ತಿದ್ದೇನೆ. ಅದಕ್ಕಾಗಿ ಅವರನ್ನು ತಿಳಿದುಕೊಳ್ಳಬೇಕಾಗಿದೆ. ಹೆಂಗಸರನ್ನು ಅರ್ಥ ಮಾಡಿಕೊಳ್ಳೋದೇ ಕಷ್ಟದ ಕೆಲಸ. ನಾನು ಗಮನಿಸಿದ ಹಾಗೆ ಹೆಂಗಸರಲ್ಲಿ ಎರಡು ಥರ ಇರ್ತಾರೆ, ನೇರ ಮತ್ತು ಸರಳ ಸ್ವಭಾವದವರು ಮತ್ತು ಬಣ್ಣದ ಮಾತಿನವರು. ಬಣ್ಣ ಹಚ್ಚಿಕೊಂಡವರು. ಮೊದಲ ಗುಂಪಿನವರು. ನಿಜವಾಗಿಯೂ ನಮಗೆ ಪ್ರಯೋಜನಕ್ಕೆ ಬರುವವರು. ಸಮಾಜದಲ್ಲಿ ಗೌರವ ಪ್ರತಿಷ್ಠೆಗಳನ್ನು ಸಂಪಾದಿಸಲು ಇವರು ಕೆಲಸಕ್ಕೆ ಬರುತ್ತಾರೆ. ಎರಡನೇ ವರ್ಗದವರು ಬಹಳ ಆಕರ್ಷಕ ವಾಗಿರುತ್ತಾರೆ. ಹಾಗೆ ಕಾಣಿಸಿಕೊಳ್ಳುವುದಕ್ಕಾಗಿ ಬಣ್ಣ ಬಳಿದುಕೊಳ್ಳುತ್ತಾರೆ. ವಯಸ್ಸಿಗಿಂತ ಚಿಕ್ಕವರಾಗಿ ಕಾಣಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ತಮ್ಮ ಸ್ವಂತ ಮಕ್ಕಳಿಗಿಂತ ಚಿಕ್ಕವರಾಗಿ, ಯುವತಿಯರಾಗಿ ಕಾಣಿಸಿಕೊಂಡರೆ ಸಾರ್ಥಕವೆಂದುಕೊಳ್ಳುತ್ತಾರೆ. ಅದಿರಲಿ, ನೀನು ಜೀನಿಯಸ್ ಎಂದು ಕರೆದ ಹೆಣ್ಣಿನ ಬಗ್ಗೆ ಹೇಳು ಎಷ್ಟು ದಿನಗಳಿಂದ ನಿನಗೆ ಅವಳ ಪರಿಚಯ?"

"ಅಯ್ಯೋ ಹ್ಯಾರಿ, ಹೆಂಗಸರ ಬಗ್ಗೆ ಇರುವ ನಿನ್ನ ಅಭಿಪ್ರಾಯಗಳನ್ನು ಕೇಳಿದರೆ ಹೆದರಿಕೆ ಆಗುತ್ತೆ"

"ಅದಕ್ಕೆಲ್ಲ ತಲೆ ಕೆಡಿಸಿಕೊಳ್ಳಬೇಡ".

"ಒಂದು ಮೂರುವಾರದಿಂದ ಅವಳ ಪರಿಚಯ"

"ಅವಳನ್ನು ಎಲ್ಲಿ ನೋಡಿದೆ?"

"ಹೇಳ್ತೀನಿ ಹ್ಯಾರಿ. ಆದರೆ ಕೇಳಿ ನಗಬೇಡ. ನಾನು ನಿನ್ನನ್ನು ಭೇಟಿಯಾಗದಿದ್ದರೆ ಇದೆಲ್ಲ ಆಗುತ್ತಿರಲಿಲ್ಲ. ನೀನೇ ಬದುಕಿನಲ್ಲಿ ಎಲ್ಲವನ್ನು ಅರ್ಥ ಮಾಡಿಕೊಳ್ಳಬೇಕೆಂಬ ಆಸೆಯ ಕಿಡಿಯನ್ನು ಹೊತ್ತಿಸಿದೆ. ನಿನ್ನ ಭೇಟಿಯ ನಂತರ ನನ್ನ ನರನಾಡಿಗಳಲ್ಲಿ ಏನೋ ಒಂದು ರೀತಿಯ ಮಿಡಿತದ ಅನುಭವವಾಯಿತು. ನನ್ನ ಎದುರಿಗೆ ಬರುತ್ತಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಗಮನಿಸುತ್ತಿದ್ದೆ. ಇವರ ಬದುಕೆಲ್ಲ ಹೇಗಿರಬಹುದು ಎಂದು ಯೋಚಿಸುತ್ತಿದ್ದೆ. ಕುತೂಹಲಿಯಾಗುತ್ತಿದ್ದೆ. ಕೆಲವರು ನನಗೆ ತುಂಬ ಹಿಡಿಸಿದರು. ಮತ್ತೆ ಕೆಲವರು ಹೆದರಿಕೆ ಹುಟ್ಟಿಸಿದರು.... ಈಗ ಅನುಭೂತಿಗಳಿಗೆ ಮುಂದಾಗುತ್ತದೆ.... ಒಂದು ದಿನ ಸಂಜೆ ಏನಾದರೂ ಒಂದು ಸಾಹಸ ಮಾಡಲೇಬೇಕು ಎಂದುಕೊಂಡೆ. ಏನೇನೋ ಅನುಭವಗಳು ಅಪಾಯಗಳೂ ಕೂಡಾ ರೋಮಾಂಚಕಾರಿ ಎನಿಸಿದವು. ಹಾಗೆ ಹೋಗುವಾಗ, ಯಾವುದೋ ಒಂದು ಸಣ್ಣ ಥಿಯೇಟರ್, ಮುಂದೆ ನಿಂತಿದ್ದ ಒಬ್ಬ ಮನುಷ್ಯ ನನಗೆ ತಲೆಬಾಗಿ, ಟಿಕೆಟ್ ಬೇಕೇನು ಎಂದು ಕೇಳಿದ. ಅದ್ಯಾಕೊ ಅವನು ನನ್ನನ್ನು ಪ್ರಭಾವಿಸಿದ. ಒಂದು ಗಿನಿಯಾ ಕೊಟ್ಟು ಸ್ಟೇಜ್ ಬಾಕ್ಸ್ ಕೊಂಡೆ... ಓ ಹ್ಯಾರಿ ಅಂದು ನಾನು ಥಿಯೇಟರ್‌ಗೆ ಹೋಗದಿದ್ದರೆ, ನನ್ನ ಜೀವನದಲ್ಲಿ ಒಂದು ದೊಡ್ಡ, ರೊಮಾನ್ಸಿನ ಅವಕಾಶದಿಂದ ವಂಚಿತನಾಗುತ್ತಿದ್ದೆ... ನೋಡು ನೋಡು... ನೀನು ನಗ್ತಾ ಇದ್ದೀಯ... ತುಂಬಾ ಕೆಟ್ಟವನು ನೀನು!"

"ನಾನು ನಗ್ತಾ ಇಲ್ಲ. ಅದರಲ್ಲೂ ನಿನ್ನ ಮಾತಿಗಂತು ಅಲ್ಲವೇ ಅಲ್ಲ. ನೀನು ಬಹು ದೊಡ್ಡ ರೊಮಾನ್ಸ್ ಅಂತ ಹೇಳಬಾರದಿತ್ತು. ಮೊದಲ ರೊಮಾನ್ಸ್ ಎಂದು ಹೇಳಬೇಕಿತ್ತು. ಯಾವಾಗಲೂ ನಿನ್ನನ್ನು ಪ್ರೀತಿಸ್ತಾರೆ, ನೀನೂ ಪ್ರೀತಿಯನ್ನು ಪ್ರೀತಿಸುತ್ತೀ... ಹೆದರಬೇಡ ಇನ್ನೂ ಅದ್ಭುತವಾದದ್ದೆಲ್ಲಾ ನಿನಗಾಗಿ ಕಾದಿವೆ.

"ನೀನು ನನ್ನ ಅನುಭವಗಳನ್ನು ತೋರಿಕೆಯದು ಎಂದು ಭಾವಿಸುತ್ತಿರುವೆಯೇನು?" ಡೋರಿಯನ್ ಸಿಟ್ಟಿನಿಂದ ನುಡಿದ.

"ಇಲ್ಲ, ನಿನ್ನ ಸ್ವಭಾವ ಬಹಳ ಗಂಭೀರದ್ದು"

"ಏನಿದರ ಅರ್ಥ."

"ಮೊದಲ ಸಲದ ಪ್ರೀತಿಯನ್ನೇ ಬಹಳ ಪ್ರಾಮಾಣಿಕವಾದದ್ದು, ನಿಷ್ಠವಾದದ್ದು ಎಂದೆಲ್ಲಾ ಹೇಳಿಕೊಳ್ಳುತ್ತಾರೆ. ಆದರೆ ನೀನು ಹಾಗೆ ಆಗಬಾರದು. ನಾನು ಮಧ್ಯೆ ಪ್ರವೇಶ ಮಾಡೊಲ್ಲ ನಿನ್ನ ಕತೆ ಮುಂದುವರೆಸು."

"ನಾನು ಬಾಕ್ಸ್‌ನಲ್ಲಿ ಕೂತಿದ್ದೆ. ಆದರೆ ಗ್ಯಾಲರಿ ಮತ್ತು ಪಿಟ್‌ನಲ್ಲಿ ಕೂತಿದ್ದ ಪ್ರೇಕ್ಷಕರು ಜನಸಾಮಾನ್ಯರು. ಸ್ವಲ್ಪ ಕೊಳಕರು. ಬೀರು ಬಾಟಲಿಗಳು ಚೆಲ್ಲಾಡಿದ್ದವು. ತಿಂದ ತಿಂಡಿಗಳೆಲ್ಲ ಅಲ್ಲಲ್ಲಿ ಬಿದ್ದಿದ್ದವು. ಥಿಯೇಟರ್‌ನ ಪರಿಸರವೂ ಅಷ್ಟಾಗಿ ಚೆನ್ನಾಗಿ ಇರಲಿಲ್ಲ. ನೋಡೋಕೇ ಅಸಹ್ಯ ಎನಿಸಿತ್ತು."

"ನಾಟಕ ಹ್ಯಾಗಿತ್ತು?"

"ನನಗಂತೂ ನಾಟಕ ಬಹಳ ಹಿಡಿಸಿತು. ರೋಮಿಯೋ ಜೂಲಿಯಟ್ ನಾಟಕ ಅದಾಗಿತ್ತು. ಭರ್ಜರಿಯಾದ ದೃಶ್ಯ ಸಂಯೋಜನೆ. ರೋಮಿಯೋ ಪಾತ್ರ ಸುಮಾರಾಗಿತ್ತು. ಆದರೆ ಹ್ಯಾರಿ ಜೂಲಿಯಟ್ ಪಾತ್ರ ನೋಡಬೇಕಿತ್ತು. ಹೂವಿನಂತಹ ಮೃದು ಸ್ವಭಾವದ ಹದಿನೇಳು ವರ್ಷದ ಹುಡುಗಿ. ಅದ್ಭುತ ಸೌಂದರ್ಯ! ಅವಳಿಂದ ಕಣ್ಣುಕೀಳಲು ಸಾಧ್ಯವಾಗಲಿಲ್ಲ. ನನ್ನ ಜೀವನದಲ್ಲಿ ಇಲ್ಲೀವರೆಗೆ ಅಂತಹ ಸೌಂದರ್ಯವನ್ನು ನೋಡಿರಲಿಲ್ಲ. ನೋಡುತ್ತಿದ್ದಂತೆ ಕಂಬನಿಗಳಿಂದ ಕಣ್ಣು ಮಸುಕಾಯಿತು. ಅವಳ ಧ್ವನಿಯು ಕೂಡಾ ಎಷ್ಟು ಇಂಪಾಗಿತ್ತೆಂದರೆ, ಕೊಳಲಿನ ಮಧುರ ನಾದವನ್ನೇ ಕೇಳುತ್ತಿದ್ದೇನೋ ಎನಿಸಿತು. ಕೋಗಿಲೆಯ ಹಾಡು ಕೇಳುತ್ತಿದ್ದೇನೆ ಎನಿಸಿತು! ಅವಳ ಅಭಿನಯವಂತು ಬಣ್ಣಿಸಲು ಸಾಧ್ಯವೇ ಇಲ್ಲ. ವಿಷ ಕುಡಿದ ಆ ದೃಶ್ಯ ಮರೆಯಲು ಸಾಧ್ಯವೇ ಇಲ್ಲ. ಎಷ್ಟು ಅದ್ಭುತವಾದ, ಸಹಜವಾದ ಅಭಿನಯ! ಸಹಜ ಮನುಷ್ಯರಿಗಿಂತ ಅಭಿನೇತ್ರಿಯರು ಅಥವಾ ನಟಿಯರು ಎಷ್ಟು ಭಿನ್ನ?... ಹ್ಯಾರಿ... ಪ್ರೀತಿಸುವುದಕ್ಕೆ ಅಭಿನೇತ್ರಿಯಲ್ಲದೆ ಬೇರೆ ಯಾರೂ ಯೋಗ್ಯರಲ್ಲ ಎಂದು ಯಾಕೆ ಹೇಳಲಿಲ್ಲ."

"ಯಾಕೇಂದ್ರೆ ಬಹಳ ಮಂದಿ ಅಂಥವರನ್ನು ನಾನು ಪ್ರೀತಿಸಿದ್ದೆ ಡೋರಿಯನ್."

"ಹೌದೌದು ನೀನು ಪ್ರೀತಿಸಿದ್ದು ಕೂದಲಿಗೆ, ಮುಖಕ್ಕೆ ಬಣ್ಣ ಹಚ್ಚಿಕೊಂಡ ಭಯಂಕರ ಹೆಣ್ಣುಗಳನ್ನು."

"ಡೋರಿಯನ್ ಅವರೆಲ್ಲರನ್ನೂ ಸಾರಾಸಗಟಾಗಿ ದೂರಬೇಡ. ಅವರಲ್ಲೂ ಕೆಲವರು ಬಹಳ ಮೋಹಕರಾಗಿರುತ್ತಾರೆ."

"ನಾನು ಸಿಬಿಲ್ ವೇನ್ ಬಗ್ಗೆ ಹೇಳಬಾರದಾಗಿತ್ತೋ ಏನೋ"

"ನನಗೆ ಹೇಳದೆ ಇರೋಕಾಗೊಲ್ಲ. ನಿನ್ನ ಬದುಕಿನ ಎಲ್ಲ ವಿವರಗಳನ್ನು ನನಗೆ ಹೇಳಿಯೇ ಹೇಳುತ್ತೀ"

"ನಿಜ ಹ್ಯಾರಿ. ನಿನಗೆ ಹೇಳದೆ ಇರಲು ಸಾಧ್ಯವೇ ಆಗುವುದಿಲ್ಲ. ನನ್ನ ಮೇಲೆ ನನಗೇ ನಂಬಿಕೆಯಾಗದಂತಹ ಪ್ರಭಾವ ನಿನ್ನದಿದೆ, ನಾನೇನಾದರೂ ಅಪರಾಧ ಮಾಡಿದರೆ, ಅದನ್ನೂ ನಿನ್ನ ಮುಂದೆ ಬಂದು ಹೇಳಿಯೇ ಹೇಳುತ್ತೀನಿ. ನೀನು ನನ್ನನ್ನು ಅರ್ಥಮಾಡಿಕೊಳ್ತೀ."

"ನಿನ್ನಂಥವರಿಂದ ಅಪರಾಧ ಆಗುವುದು ಸಾಧ್ಯವೇ ಇಲ್ಲ ಡೋರಿಯನ್. ನನ್ನ ಬಗ್ಗೆ ನುಡಿದ ಅಭಿಮಾನದ ಮಾತುಗಳಿಗೆ ನಾನು ಕೃತಜ್ಞ... ಹೂಂ! ಈಗ ಹೇಳು ಆ ಬೆಂಕಿಪಟ್ಣ ಕೊಡಿಲ್ಲಿ... ಸಿಬಿಲ್‌ವೇನ್ ಜೊತೆಗಿನ ನಿನ್ನ ಸಂಬಂಧ ಎಂಥಾದ್ದು?"

ಡೋರಿಯನ್ ಗ್ರೇ ಜಿಗಿದು ನಿಂತ. ನಾಚಿದ ಕೆನ್ನೆಗಳು ಉರಿಯುವ ಆಸೆ ಕಂಗಳು "ಹ್ಯಾರಿ! ಹ್ಯಾರಿ! ಸಿಬಿಲ್‌ವೇನ್ ಪವಿತ್ರಳು."

"ಇಂಥ ಪವಿತ್ರ ವಸ್ತುಗಳೇ ಸ್ಪರ್ಶಕ್ಕೆ ಯೋಗ್ಯ ಡೋರಿಯನ್ ಎಂದು ಹೇಳುವ ದನಿಯಲ್ಲಿ ಒಂದು ಬಗೆಯ ವಿಷಾದವಿತ್ತು.

"ನೀನು ಇದರಿಂದ ಉದ್ವಿಗ್ನನಾಗಬೇಕಾದ್ದಿಲ್ಲ. ಒಂದಲ್ಲ ಒಂದು ದಿನ ಅವಳು ನಿನ್ನವಳಾಗಬಹುದು. ಒಬ್ಬ ಪ್ರೀತಿಗೆ ಬಿದ್ದಾಗ, ತನ್ನನ್ನು ತಾನೇ ಮೊದಲಿಗೆ ಮೋಸ ಮಾಡುತ್ತಾನೆ, ನಂತರ ಬೇರೆಯವರಿಗೆ ಮೋಸಮಾಡುತ್ತಾನೆ. ಅದನ್ನೇ ರೊಮಾನ್ಸ್ ಅಂತ ಕರೆಯೋದು. ಏನಾದರಾಗಲಿ ಅವಳ ಬಗ್ಗೆ ತಿಳ್ಕೊಂಡಿದ್ದಿಯೇನು?"

"ಬಹಳ ಚೆನ್ನಾಗಿಯೇ ಬಲ್ಲೆ. ಆ ದಿನ ಥಿಯೇಟರ್‌ನಲ್ಲಿ ನಾಟಕ ಮುಗಿದ ಮೇಲೆ ಆ ದೈತ್ಯನಂತಿದ್ದ ಮುದಿ ಯಹೂದಿ ನನ್ನ ಬಳಿ ಬಂದು, ನನ್ನನ್ನು ರಂಗದ ಹಿಂಭಾಗಕ್ಕೆ ಕರೆದೊಯ್ದು ಅವಳ ಪರಿಚಯ ಮಾಡಿಸುವುದಾಗಿ ಹೇಳಿದ. ನನಗೆ ಸಿಟ್ಟು ಬಂತು. ಜೂಲಿಯಟ್ ಸತ್ತು ನೂರಾರು ವರ್ಷಗಳಾಗಿದೆ. ಅವಳ ಶರೀರ ವೆರೋನಾದ ಅಮೃತ ಶಿಲೆಯ ಸಮಾಧಿಯಲ್ಲಿ ಮಲಗಿದೆ ಎಂದು ಸಿಟ್ಟಿನಲ್ಲಿ ವಿವರಿಸಿ ತಿಳಿಸಿದೆ. ಅವನು ದಿಗ್ಭ್ರಾಂತನಾಗಿ ನನ್ನತ್ತ ನೋಡಿದ. ಅವನ ನೋಟದಲ್ಲಿ ನಾನು ಸ್ವಲ್ಪ ಹೆಚ್ಚಾಗಿಯೇ ಷಾಂಪೇನ್ ಕುಡಿದಿರಬಹುದೆಂಬ ಅನುಮಾನವಿದ್ದಂತಿತ್ತು"

"ಹಾಗಾದದ್ದರಲ್ಲಿ ಅನುಮಾನವೇ ಇಲ್ಲ"

"ನಂತರ ನಾನು ಪತ್ರಿಕೆಗೇನಾದರೂ ಬರೆಯುತ್ತೇನೆಯೇ" ಎಂದು ಕೇಳಿದ. ಬರೆಯೋದಿರಲಿ, ನಾನು ಪತ್ರಿಕೆಗಳನ್ನು ಓದುವುದು ಕೂಡಾ ಇಲ್ಲ ಅಂದೆ. ಅವನಿಗೆ ನಿರಾಶೆಯಾಯಿತು. ಗುಟ್ಟಾಗಿ ಒಂದು ಮಾತು ಹೇಳಿದ, "ಪತ್ರಕರ್ತರೆಲ್ಲರೂ ಅಂದರೆ ನಾಟಕ ವಿಮರ್ಶಕರೆಲ್ಲರೂ ತನ್ನ ವಿರುದ್ಧ ಪಿತೂರಿಯ ಹುನ್ನಾರದಲ್ಲಿದ್ದಾರೆ" ಎಂದು ಒಬ್ಬೊಬ್ಬರನ್ನೂ ಕೊಂಡಕೋಬೇಕಾಗಿದೆ. "ಅವನು ಹೇಳಿದ್ದರಲ್ಲಿ ನಿಜ ಇರಲೇ ಬೇಕು. ಅವರನ್ನು ಹೊರಚಹರೆಗಳಿಂದ ತಿಳಿದುಕೊಳ್ಳೋದು ಸಾಧ್ಯವೂ ಇಲ್ಲ. ಒಬ್ಬೊಬ್ಬರನ್ನು ಕೊಂಡುಕೊಳ್ಳೋದು ಅಂಥಾ ದುಬಾರಿಯೂ ಅಲ್ಲ."

"ಬಹುಶಃ ಅವನಿಗೆ ಅವರನ್ನು ಕೊಳ್ಳೋ ಸಾಮರ್ಥ್ಯ ಇರಲಿಲ್ಲವೇನೋ" ಎಂದು ಡೋರಿಯನ್ ಜೋರಾಗಿ ನಕ್ಕ. ಅಷ್ಟು ಹೊತ್ತಿಗೆ ದೀಪಗಳನ್ನು ಆರಿಸಿಬಿಟ್ಟರು. ಒಂದೆರಡು ಸಿಗರೇಟನ್ನು ನೀಡಿದ. ನಾನು ಬೇಡವೆಂದೆ. ಮರುದಿನ ರಾತ್ರಿ ಮತ್ತೆ ಥಿಯೇಟರ್‌ಗೆ ಹೋದೆ. ಅವನು ಕಾಣಿಸಿಕೊಂಡು ಸ್ವಾಗತಿಸಿದ. ಮತ್ತು ನನ್ನನ್ನು ಬಹಳ ದೊಡ್ಡ ಕಲಾಪ್ರೇಮಿ ಎಂದು ಹೊಗಳಿದ. ಅವನಿಗೆ ಶೇಕ್ಸ್‌ಪಿಯರ್ ಎಂದರೆ ಒಂದು ಥರ ಹುಚ್ಚು. ತಾನು ಈ ಹುಚ್ಚಿನಿಂದ ಐದು ಸಲ ನಿರ್ಗತಿಕ ಸ್ಥಿತಿಗೆ ಬಂದದ್ದನ್ನು ಬಹಳ ಹೆಮ್ಮೆಯಿಂದಲೇ ಹೇಳಿಕೊಂಡ. ಅದು ಅವನಿಗೆ ಏನೋ ದೊಡ್ಡ ಗೌರವ ಎನಿಸಿದಂತಿತ್ತು.

"ಅವನು ಭಾವಿಸಿದಂತೆ ಅದು ದೊಡ್ಡ ಗೌರವವೇ ಡೋರಿಯನ್... ಇರಲಿ ಸಿಬಿಲ್ ವೇನ್‌ಳನ್ನು ಮೊದಲು ಮಾತಾಡಿಸಿದ್ದು ಯಾವಾಗ?

"ಮೂರನೇ ದಿನ ರಾತ್ರಿ ಅವಳು ರೋಸಾಲಿಂಡ್ ಪಾತ್ರದಲ್ಲಿದ್ದಳು. ನಾನು ಒಂದಷ್ಟು ಹೂವು ಎರಚಿದೆ. ಅವಳು ನನ್ನ ಕಡೆ ನೋಡಿದಳು... ಅಂದರೆ ನಾನು ಹಾಗೆ ಭಾವಿಸಿದೆ. ಆ ಯಹೂದಿ ಬಹುಶಃ ನನ್ನನ್ನು ಅವಳಿಗೆ ಪರಿಚಯ ಮಾಡಿಸಬೇಕೆಂದೇ ಹಟ ತೊಟ್ಟಿದ್ದಂತೆ ಕಾಣಿಸಿತು. ಸರಿ ನಾನೂ ಒಪ್ಪಿದೆ. ನಾನು ನೋಡಲು ಒಪ್ಪದಿದ್ದಲ್ಲಿ ಅದೊಂದು ವಿಚಿತ್ರ ಎನಿಸುತ್ತಿತ್ತು ಅಲ್ಲವೇ?"

"ಇಲ್ಲ ಹಾಗೇನೂ ಇಲ್ಲ"

"ಪ್ರಿಯ ಗೆಳೆಯ ಹ್ಯಾರಿ, ಯಾಕಿಲ್ಲ"

"ಬೇರೆ ಯಾವೊತ್ತಾದರೂ ಹೇಳ್ತೀನಿ. ಈಗ ಅವಳ ಬಗ್ಗೆ ಹೇಳು"

"ಸಿಬಿಲ್ ಬಗ್ಗೆ ತಾನೇ! ಒಂದು ಥರಾ ನಾಚಿಕೆ ಸ್ವಭಾವದವಳು. ಬಹಳ ಮೃದು. ಒಂದು ಬಗೆಯ ಮಗುತನದ ಮುಗ್ಧತೆ. ಅವಳ ಅಭಿನಯದ ಬಗ್ಗೆ ಮೆಚ್ಚಿ ನುಡಿದಾಗ ದೊಡ್ಡದಾಗಿ ಕಣ್ಣರಳಿಸಿ ನೋಡಿದಳು. ಅವಳಿಗೆ ತನ್ನ ಸಾಮರ್ಥ್ಯದ ಅರಿವೇ ಇದ್ದಂತೆ ಕಾಣಲಿಲ್ಲ. ಇಬ್ಬರೂ ಸಂಕೋಚ ಹೆದರಿಕೆಗಳಿಂದ ಕೂಡಿದ್ದಂತಿತ್ತು. ಒಬ್ಬರ ಮುಖ ಒಬ್ಬರು ನೋಡುತ್ತಾ ಮಕ್ಕಳಂತೆ ನಿಂತಿದ್ದಾಗ, ಆ ಯಹೂದಿ ಏನೇನೋ ಭಾಷಣ ಬಿಗಿಯುತಿದ್ದ. ನನ್ನನ್ನು ಯಜಮಾನರೇ ಎಂದು ಸಂಬೋಧಿಸುತ್ತಿದ್ದ. ಅವಳಿಗೆ ನಾನು ಅದೆಲ್ಲಾ ಏನಿಲ್ಲ ಎಂದು ತಿಳಿಸಿ ಹೇಳಿದೆ. ಆದರೆ ಅವಳು ಅದಕ್ಕಿಂತ ಹೆಚ್ಚಾಗಿ ನೀನು ನೋಡೋಕೆ ರಾಜಕುಮಾರ ಇದ್ದ ಹಾಗೆ ಇದ್ದೀಯ. ಆದ್ದರಿಂದ ನಿನ್ನನ್ನು ನಾನು ಪ್ರಿನ್ಸ್ ಚಾರ್ಮಿಂಗ್ ಅಂತಲೇ ಕರೀತೀನಿ ಎಂದಳು.

"ಡೋರಿಯನ್ ಅವಳಿಗೆ ಯಾರನ್ನು ಹೇಗೆ ಸಂಬೋಧಿಸಿ ಮೆಚ್ಚಿಸಬೇಕು ಎನ್ನುವ ಅರಿವಿದೆ."

"ಹ್ಯಾರಿ ನಿನಗೆ ಅರ್ಥವಾಗೊಲ್ಲ. ಅವಳು ನನ್ನನ್ನು ನಾಟಕದಲ್ಲಿನ ಒಂದು ಪಾತ್ರವೆಂದು ಮಾತ್ರವೇ ಭಾವಿಸಿದ್ದಾಳೆ. ಜೀವನದ ಅನುಭವ ಇಲ್ಲ. ಒಂದು ಕಾಲದಲ್ಲಿ ಸಣ್ಣ ಪುಟ್ಟ ಪಾತ್ರ ಮಾಡುತ್ತಿದ್ದು ಈಗ ಜೀರ್ಣಶೀರ್ಣವಾಗಿರುವ ತಾಯಿಯ ಜೊತೆ ಇದ್ದಾಳೆ."

"ಆ ದೃಶ್ಯ ನನಗೆ ನೆನಪಿದೆ."

"ಆ ಯಹೂದಿಗೆ ಅವಳ ಕತೆಯನ್ನೆಲ್ಲಾ ನನಗೆ ಹೇಳಬೇಕೆನ್ನುವ ಉತ್ಸಾಹ. ಆದರೆ ಅದರಲ್ಲಿ ನನಗೆ ಆಸಕ್ತಿ ಇಲ್ಲ ಅಂತ ಹೇಳಿಬಿಟ್ಟೆ! "ನೀನು ಹೇಳಿದ್ದು ಸರಿಯಿದೆ. ಬೇರೆಯವರ ದುರಂತ ಕತೆಗಳಲ್ಲಿ ಏನೇನೋ ಇರುತ್ತೆ."

"ಸಿಬಿಲ್ ಬಗ್ಗೆ ಮಾತ್ರವೇ ನನಗೆ ಆಸಕ್ತಿ. ದಿನಾ ಥಿಯೇಟರ್‌ಗೆ ಹೋಗಿ ಅವಳನ್ನು ನೋಡಿ ಬರ್ತೇನೆಯೇ ಹೊರತಾಗಿ ಅವಳು ಯಾರು? ಎಲ್ಲಿಂದ ಬರ್ತಾಳೆ ಅನ್ನೋದು ನನಗೆ ಮುಖ್ಯ ಅಲ್ಲ. ನಿಜವಾಗಿ ಅವಳೊಬ್ಬ ದೇವತೆ. ಪ್ರತಿರಾತ್ರಿಯೂ ನನಗೆ ಅವಳು ಅದ್ಭುತವಾಗಿ ಕಾಣ್ತಾಳೆ."

“ಬಹುಶಃ ಅದಕ್ಕೇ ನೀನು ಈ ನಡುವೆ ನನ್ನ ಜೊತೆ ರಾತ್ರಿ ಊಟಕ್ಕೆ ಬರುವುದಿಲ್ಲ. ಏನೋ ರೋಮಾನ್ಸ್‌ನಲ್ಲಿ ಮುಳುಗಿರುತ್ತೀ ಅಂತ ಭಾವಿಸಿದೆ. ಆದರೆ ನಾನು ಊಹಿಸಿದ ರೀತಿಯ ರೊಮಾನ್ಸ್ ಅಲ್ಲ ಅಂತ ಗೊತ್ತಾಯ್ತು.”

“ಹ್ಯಾರಿ ಹಾಗೇನಿಲ್ಲ. ಎಷ್ಟು ಸಲ ನಿನ್ನ ಜೊತೆ ಮಧ್ಯಾಹ್ನದ ಊಟ, ರಾತ್ರಿ ಊಟ ಮಾಡಿಲ್ಲ. ಎಷ್ಟು ಸಲ ಅಪೆರಾಗಳಿಗೆ ಬಂದಿಲ್ಲ” ಎಂದು ಡೋರಿಯನ್ ತನ್ನ ನೀಲಿ ಕಣ್ಣುಗಳನ್ನು ಅರಳಿಸಿ ಹೇಳಿದ.”

“ಯಾವಾಗಲೂ ನೀನು ಬಹಳ ಲೇಟಾಗಿ ಬರ್ತೀಯ.”

“ಏನು ಮಾಡಲಿ? ಅವಳನ್ನು ನೋಡದೆ ಇರೋಕೆ ಆಗೊಲ್ಲ. ಪ್ರತಿ ರಾತ್ರಿ ಹೋಗ್ತೀನಿ. ಒಂದು ದೃಶ್ಯಾನಾದರೂ ಸರಿ ನೋಡಿ ಬರ್ತೀನಿ. ಅವಳನ್ನು ನೋಡಲು ತುಡೀತಿರ್ತೇನೆ. ಆ ಪುಟ್ಟ ದೇಹದಲ್ಲಿ ಅಡಗಿ ಕುಳಿತಿರುವ ಆತ್ಮದ ಬಗ್ಗೆ ಯೋಚಿಸುವಾಗಲೆಲ್ಲ ಮನಸ್ಸಿಗೆ ಯಾಕೋ ನೋವಾಗುತ್ತದೆ.”

“ಈ ಹೊತ್ತಾದರೂ ನನ್ನ ಜೊತೆ ರಾತ್ರಿ ಊಟಕ್ಕೆ ಬಾ”

“ಇಲ್ಲ. ಇವತ್ತು ಅವಳು ಇಮೋಜನ್ ಪಾತ್ರದಲ್ಲಿರುತ್ತಾಳೆ. ನಾಳೆ ಮತ್ತೆ ಜೂಲಿಯಟ್ ಪಾತ್ರ ವಹಿಸುತ್ತಾಳೆ.”

“ಹಾಗಾದರೆ ಸಿಬಿಲ್‌ವೇನಳಾಗಿ ಸಿಗೋದು ಯಾವಾಗ?”

“ಯಾವಾಗಲೂ ಸಿಗೊಲ್ಲ”

“ಹಾಗಾದರೆ ಅಭಿನಂದನೆಗಳು”

“ಎಂಥ ಧೂರ್ತ ಹ್ಯಾರಿ! ಒಂದೇ ವ್ಯಕ್ತಿತ್ವದಲ್ಲಿ ಜಗತ್ತಿನ ಎಲ್ಲ ನಾಯಕಿಯರನ್ನು ಒಳಗೊಂಡಿದ್ದಾಳೆ. ವೈಯಕ್ತಿಕವೆನ್ನುವುದೇ ಇಲ್ಲ. ನೀನು ನಗ್ತೀ! ನಿಜವಾಗಿಯೂ ಅವಳು ಜೀನಿಯಸ್! ಅವಳನ್ನು ನಾನು ಪ್ರೀತಿಸ್ತೇನೆ. ಅವಳೂ ನನ್ನನ್ನು ಪ್ರೀತಿಸುವಂತೆ ಮಾಡಬೇಕು. ನೀನು, ಜೀವನದ ಎಲ್ಲ ರಹಸ್ಯಗಳನ್ನು ತಿಳಿದವನು. ಅವಳನ್ನು ಪ್ರೀತಿಸುವುದು ಹೇಗೆಂದು ತಿಳಿಸಿಕೊಡು... ಅವಳನ್ನು ಎಷ್ಟೊಂದು ಆರಾಧಿಸುತ್ತೇನೆ! ಎಂದೆಲ್ಲಾ ಹೇಳುವಾಗ ಶತಪಥ ಹಾಕುತ್ತಾ ಅಡ್ಡಾಡುತ್ತಿದ್ದ. ವಿಪರೀತ ಭಾವೋದ್ರಿಕ್ತನಾಗಿದ್ದ.”

“ಲಾರ್ಡ್ ಹೆನ್ರಿ ಒಳಗೊಳಗೇ ಮುಸಿ ಮುಸಿ ನಗುತ್ತಾ ಅವನನ್ನು ಗಮನಿಸುತ್ತಿದ್ದ ಬೇಸಿಲ್ ಸ್ಟುಡಿಯೋದಲ್ಲಿ ಮೊದಲ ಬಾರಿ ನೋಡಿದಾಗ ಭಯ, ಸಂಕೋಚಗಳಿಂದ ಕೂಡಿದ ಮುಗ್ಧ ಹುಡುಗನಂತಿದ್ದವನು ಈಗ ಎಷ್ಟೊಂದು ಬದಲಾಗಿದ್ದಾನೆ! ಅವನ ಸ್ವಭಾವ ಈಗ ತುಂಬು ಅರಳಿದ ಕೆಂಜ್ವಾಲೆಯ ಹೂವಿನಂತಿದ್ದಾನೆ. ಅವನ ಆತ್ಮ ಅಡಗಿದ್ದೆಡೆಯಿಂದ ಹೊರಬಂದಿದೆ. ಅವನ ಬಯಕೆ ಅದನ್ನು ಭೇಟಿಯಾಗಲು ಮುಂದಾಗಿದೆ.

“ಹಾಗಾದರೆ ಮುಂದೇನು ಮಾಡಬೇಕೆಂದಿದ್ದೀಯ?” ಹೆನ್ರಿ ಕಡೆಯಲ್ಲಿ ಪ್ರಶ್ನಿಸಿದ.

“ನೀನು ಮತ್ತು ಬೇಸಿಲ್ ಒಂದು ದಿನ ನನ್ನ ಜೊತೆ ಬಂದು ಅವಳು ಅಭಿನಯಿಸುವುದನ್ನು ನೋಡಬೇಕು. ನೀವು ಏನು ಹೇಳಬಹುದು ಅನ್ನುವುದರ ಭಯ ನನಗೆ ಒಂದಿಷ್ಟೂ ಇಲ್ಲ. ಅವಳು ಜೀನಿಯಸ್ ಅನ್ನೋದನ್ನು ನೀವೂ ಕೂಡಾ ಒಪ್ತೀರಿ. ಆಮೇಲೆ ಆ ಯಹೂದಿ ಮುಷ್ಟಿಯಿಂದ ಅವಳನ್ನು ಬಿಡಿಸಿ ತರಬೇಕಾಗುತ್ತೆ. ಅವಳು ಮೂರು ವರ್ಷ ಅಥವಾ ಎರಡೂವರೆ ವರ್ಷ ಅವನಿಗೆ ಬಾಂಡ್ (ಕರಾರು ಪತ್ರ) ಕೊಟ್ಟಿದ್ದಾಳೆ. ಬಿಡಿಸಿಕೋ ಬೇಕಾದರೆ ಅವನಿಗೆ ಸ್ವಲ್ಪ ಹಣ ಕೊಡಬೇಕಾಗುತ್ತೆ. ಅದೆಲ್ಲ ತೀರ್ಮಾನ ಆದ ಮೇಲೆ ವೆಸ್ಟೆಂಡ್ ಥಿಯೇಟರ್‌ಗೆ ತರ್ತೀನಿ. ಜಗತ್ತಿಗೇ ಅವಳ ಪ್ರತಿಭೆ ಏನೂಂತ ತೋರಿಸ್ತೀನಿ, ನನ್ನನ್ನು ಹುಚ್ಚನನ್ನಾಗಿ ಮಾಡಿದ ಹಾಗೆ ಎಲ್ಲರನ್ನೂ ಮಾಡಿಬಿಡ್ತಾಳೆ.”

“ಅದು ಸಾಧ್ಯವೇ ಇಲ್ಲ ಹುಡುಗ”

“ಇಲ್ಲ ಅವಳು ಅದನ್ನು ಸಾಧ್ಯ ಮಾಡ್ತಾಳೆ. ಕಲೆ ಅನ್ನೋದು ಅವಳ ಅಂತರ್ಗತ ಭಾಗವಾಗಿದೆ. ಜೊತೆಗೆ ಅವಳಿಗೆ ಅದಕ್ಕೆ ತಕ್ಕ ಹಾಗೆ ರೂಪವೂ ಇದೆ. ವ್ಯಕ್ತಿತ್ವವೂ ಇದೆ. ನೀನೇ ಹೇಳಿದ್ದೆ! ಸಿದ್ಧಾಂತಗಳಿಗಿಂತ ವ್ಯಕ್ತಿತ್ವದ ಪ್ರಭಾವವೇ ಹೆಚ್ಚಾಗಿರುತ್ತೆ ಅಂತ”

“ಹಾಗಾದರೆ ಯಾವೊತ್ತು ಹೋಗೋಣ”

“ನೋಡ್ತೀನಿ ಇವತ್ತು ಮಂಗಳವಾರ. ಆದರೆ ನಾಳೆ ಹೋಗೋಣ. ನಾಳೆ ಅವಳು ಜೂಲಿಯಟ್ ಪಾತ್ರ ಮಾಡ್ತಿದ್ದಾಳೆ.”

“ಸರಿ ಹಾಗಾದರೆ, ನಾನು ಬ್ರಿಸ್ಟೋಲ್‌ಗೆ 8 ಗಂಟೆಗೆ ಬರ್ತೀನಿ. ಬರುವಾಗ ಬೇಸಿಲ್‌ನನ್ನು ಕರ್ಕೊಂಡು ಬರ್ತೀನಿ.”

“8 ಗಂಟೆಗಲ್ಲ ಹ್ಯಾರಿ. ದಯವಿಟ್ಟು 6.30 ಕ್ಕೆ ಬಂದ್ಬಿಡಿ. ನಾಟಕ ಶುರು ಆಗೋಕೆ ಮುಂಚೆ ಇರಬೇಕು. ಅವಳನ್ನು ಮೊದಲನೇ ಅಂಕದಲ್ಲಿ ರೋಮಿಯೋನನ್ನು ಭೇಟಿಯಾಗುವ ಸನ್ನಿವೇಶವನ್ನು ನೋಡಬೇಕು.”

“ಆರೂವರೆಗೆ! ಓ ಇಲ್ಲಪ್ಪ. ಅದೆಂಥ ಸಮಯ! ಬೇಕಾದರೆ ಏಳುಗಂಟೆ ಆಗಬಹುದು. ಏಳುಗಂಟೆಗೆ ಮುಂಚೆ ಯಾರೂ ಊಟ ಮಾಡೋದಿಲ್ಲ. ಅಷ್ಟುಹೊತ್ತಿಗೆ ಬೇಸಿಲ್‌ನನ್ನು ನೋಡೋಕಾಗುತ್ತಾ ಇಲ್ಲ ನಾನು ಅವನಿಗೆ ಬರೆಯಲಾ?”

“ಗೆಳೆಯ ಬೇಸಿಲ್! ಒಂದು ವಾರದಿಂದ ಅವನನ್ನು ನೋಡೇ ಇಲ್ಲ. ಎಷ್ಟು ಕೆಟ್ಟವನಲ್ಲವೆ ನಾನು, ಎಷ್ಟು ಸುಂದರವಾದ ಫ್ರೇಮ್ ಹಾಕಿ ನನ್ನ ಭಾವಚಿತ್ರವನ್ನು ಕಳಿಸಿಕೊಟ್ಟಿದ್ದಾನೆ. ನನಗಿಂತ ಒಂದು ತಿಂಗಳು ಚಿಕ್ಕವನಂತೆ ಕಾಣುವ ಅದನ್ನು ನೋಡಿದಾಗ ಹೊಟ್ಟೆಕಿಚ್ಚಾಗುತ್ತೆ, ಆದರೂ ಆ ಚಿತ್ರಾ ನೋಡುತ್ತಿದ್ದರೆ ನನಗೆ ಬಹಳ ಖುಷಿ ಆಗುತ್ತೆ. ಬಹುಶಃ ನೀನೇ ಬರೆದರೆ ಒಳ್ಳೋದೇನೋ ಎನಿಸುತ್ತೆ. ನಾನು ಒಬ್ಬನೇ ಅವನನ್ನು ನೋಡೋದು ಇಷ್ಟವಿಲ್ಲ. ಏನೇನೋ ಮಾತಾಡಿ ಬೇಸರ ಮಾಡ್ತಾನೆ. ಒಳ್ಳೇ ಉಪದೇಶ ಮಾಡ್ತಾನೆ.”

ಹೆನ್ರಿ ನಕ್ಕು “ಯಾರಿಗೆ ಹೆಚ್ಚಾಗಿ ಈ ಉಪದೇಶ ಬೇಕೋ ಅವರೇ ಬೇರೆಯವರಿಗೆ ಕೊಡೋಕೆ ಶುರುಮಾಡ್ತಾರೆ.”

"ಬೇಸಿಲ್ ಬಹಳ ಒಳ್ಳೆಯವನೇ ಆದರೆ ಸ್ವಲ್ಪ ತಲೆ ತಿಂತಾನೆ. ನಿನ್ನ ಪರಿಚಯ ಆದ ಮೇಲೆ ಅದನ್ನು ಕಂಡುಹಿಡಿದೆ."

"ಬೇಸಿಲ್ ಹೇಗೇಂದ್ರೆ, ಆಕರ್ಷಕವಾಗಿ ಮೋಹಕವಾಗಿ ಕಾಣಿಸುವ ಎಲ್ಲವನ್ನೂ ತನ್ನ ಕಲೆಯಲ್ಲಿ ಇಳಿಸುತ್ತಾನೆ. ಅದಕ್ಕಾಗಿ ಅವನಿಗೇಂತ ಉಳಿಯೋದೆಂದ್ರೆ ಪೂರ್ವಗ್ರಹಗಳು, ಸಿದ್ಧಾಂತಗಳು, ವ್ಯವಹಾರಜ್ಞಾನ – ಇಂಥವು ಮಾತ್ರವೇ! ವೈಯಕ್ತಿಕವಾಗಿ ಯಾವಾಗಲೂ ಗೆಲುವಿನಿಂದ ಕೂಡಿರುವವರು.ಕೆಟ್ಟ ಕಲಾವಿದರಾಗಿರುತ್ತಾರೆ, ಒಳ್ಳೆಯ ಕಲಾವಿದರು ಯಾವಾಗಲೂ ಬಹಳ ಸರಳವಾಗಿ ಕಾಣುತ್ತಾರಾದರೂ ತಮ್ಮೆಲ್ಲ ಒಳ್ಳೆಯದನ್ನು ಕಲೆಯಲ್ಲಿ ಭಟ್ಟಿ ಇಳಿಸಿಬಿಟ್ಟಿರುತ್ತಾರೆ. ಹಾಗೆಯೇ ಕೆಟ್ಟ ಕವಿಗಳು ವೈಯಕ್ತಿಕವಾಗಿ ಬಹಳ ಆಕರ್ಷಕವಾಗಿರುತ್ತಾರೆ. ಒಳ್ಳೆಯ ಕವಿಗಳು ಯಾರನ್ನೂ ಸೆಳೆದುಕೊಳ್ಳುವಲ್ಲಿ ಸೋಲುತ್ತಾರೆ."

"ಆಶ್ಚರ್ಯ! ನೀನು ಹೇಳಿದ್ದೆಲ್ಲಾ ನಿಜವೇನು? ಸರಿ ನಾನು ಈಗ ಹೊರಟೆ. ಇಮೋಜಿನ್ ನನಗಾಗಿ ಕಾಯುತ್ತಿರುತ್ತಾಳೆ. ಗುಡ್ ಬೈ."

ಡೋರಿಯನ್ ಬಾಗಿಲತ್ತ ಹೆಜ್ಜೆಹಾಕುತ್ತಿದ್ದಂತೆ ಹೆನ್ರಿ ಭಾರವಾಗಿ ಭಾಸವಾಗುತ್ತಿದ್ದ ಕಣ್ಣು ಮುಚ್ಚಿದ. ಆದರೂ ಅದರ ನಡುವೆಯೂ ಆ ಹುಡುಗನ ಬಗ್ಗೆ ಯೋಚಿಸುತ್ತಿದ್ದ. ಅವನ ಅತಿಯಾದ ಪ್ರೀತಿ, ಹುಚ್ಚು ಭಾವುಕತೆಗಳಿಂದ ಅಸೂಯೆಯಾಗಲೀ ಸಂತೋಷವಾಗಲೀ ಉಂಟಾಗಲಿಲ್ಲ. ಸಂಗೀತದಂತೆ ಮಧುರವಾದ ದನಿ, ಸವಿಯೆನಿಸುವ ಮಾತುಗಳು ಅವನಿಗೆ ಆಪ್ತವೆನಿಸಿದವು. ಡೋರಿಯನ್ ಗ್ರೇನ ಆತ್ಮವು ಸಂಪೂರ್ಣವಾಗಿ ಅವನು ಪ್ರೀತಿಸುವ ಹುಡುಗಿಯ ಮುಂದೆ ಗತಮಾಸ್ತಕವಾಗಿತ್ತು. ಈ ಹುಡುಗ ತನ್ನ ಸ್ವಂತ ಸೃಷ್ಟಿಯೇ ಆಗಿದ್ದಾನೆ. ಸಮಯಾನುಗುಣವಾಗಿ ಅಂತರಂಗದ ಅನಾವರಣವಾಗುವುದು ಲೋಕದ ಸಾಮಾನ್ಯರೂಢಿ. ಆದರೆ ಈ ಹುಡುಗ ಸಮಯಕ್ಕೆ ಮೊದಲೇ ಅಪ್ರಾಪ್ತ ವಯಸ್ಸಿನಲ್ಲಿಯೇ ತನ್ನೆಲ್ಲ ನಿಗೂಢತೆಯನ್ನು ತೆರೆದಿರಿಸಿ ಬಿಟ್ಟ, ಕೆಲವು ಸಲ ಇಂಥದ್ದೆಲ್ಲ ಕಲೆಯ ಪರಿಣಾಮವೇ ಆಗಿರುತ್ತೆ.

ವಯಸ್ಸಿಗೆ ಮೊದಲೇ ಪ್ರಬುದ್ಧನಾಗಿಬಿಟ್ಟಿದ್ದಾನೆ. ಮೊಳಕೆಯಲ್ಲಿಯೇ ಗಿಡದ ಸಿರಿ ಹೊಡೆದೆದ್ದು ಕಾಣಿಸತೊಡಗಿದೆ. ಅವನ ಯೌವ್ವನ, ಸುಂದರ ಮುಖ, ಅಂದವಾದ ಆತ್ಮ – ಎಲ್ಲವೂ ನೋಡುವುದೇ ಒಂದು ಹಬ್ಬ!

ಆತ್ಮ ಮತ್ತು ದೇಹ ಇವೆರಡೂ ಎಷ್ಟು ನಿಗೂಢ! ಆತ್ಮದಲ್ಲಿ ವಿಷಯಲಂಪಟತೆಯಿದ್ದರೆ, ದೇಹದಲ್ಲಿ ಆಧ್ಯಾತ್ಮಿಕ ಕ್ಷಣಗಳೂ ಇರುತ್ತವೆ. ಆತ್ಮ ದೇಹಗಳು ಯಾವಾಗ ಹೇಗೇಗೆ ವರ್ತಿಸುತ್ತವೆ ಎನ್ನುವುದನ್ನು ಯಾರಿಗೆ ತಾನೇ ಹೇಳಲು ಸಾಧ್ಯ? ಪಾಪದ ಗೂಡಿನಲ್ಲಿ ಅವಿತಿರುವ ಆತ್ಮ ಕೇವಲ ಛಾಯೆಯೇ? ಇಲ್ಲ ದೇಹ ನಿಜವಾಗಿ ಆತ್ಮದಲ್ಲಿ ಅಧೀಷ್ಠವಾಗಿದೆಯೇ?

ಪ್ರಯೋಗಾತ್ಮಕವಾಗಿ ಮಾಡುವ ವಿಧಾನವೇ, ಭಾವನೆಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದಕ್ಕೆ ಇರುವ ನಿಜವಾದ ವಿಧಾನ ಎನ್ನುವುದು ಅವನಿಗೆ ಸ್ಪಷ್ಟವಾಗಿ ಅರಿವಾಗತೊಡಗಿತು. ಹೀಗೆ ಏನೇನೋ ವಿಚಾರಗಳನ್ನು ಯೋಚಿಸುತ್ತಾ ಮೌನದಲ್ಲಿ

ಮುಳುಗಿದ್ದಾಗ, ಬಾಗಿಲು ತಟ್ಟಿದ ಸದ್ದು ಕೇಳಿಬಂತು. ಸೇವಕ ಒಳಗೆ ಬಂದು, ಹೊರಡಲು ವೇಳೆಯಾಯಿತೆಂದು ನೆನಪಿಸಿದ. ಕೂಡಲೇ ಡಿನ್ನರ್‌ಗೆ ಹೊರಡಲು ಸಿದ್ಧವಾಗಬೇಕೆಂದು ತರಾತುರಿಯಿಂದ ಬಟ್ಟೆ ಬದಲಾಯಿಸಲು ಕೋಣೆ ಪ್ರವೇಶಿಸಿದ.

ರಸ್ತೆಯತ್ತ ಒಂದು ನೋಟ ಬೀರಿದ. ಸೂರ್ಯ ಮುಳುಗುತ್ತಿದ್ದ. ಅವನಿಗೆ ತನ್ನ ಗೆಳೆಯನ ಬದುಕು ಯಾವ ದಿಕ್ಕಿನಲ್ಲಿ ಸಾಗಿ ಕೊನೆಯಾಗುವುದೋ ಎಂದು ಯೋಚಿಸ ತೊಡಗಿದ. ಹಿಂತಿರುಗಿ ಬಂದಾಗ ರಾತ್ರಿ ಹನ್ನೆರಡು ಗಂಟೆ ಮೀರಿತ್ತು. ಹಜಾರದಲ್ಲಿನ ಮೇಜಿನ ಮೇಲೆ ಬಿದ್ದಿದ್ದ ಟೆಲಿಗ್ರಾಂ ಕಣ್ಣಿಗೆ ಬಿದ್ದು ಅದನ್ನು ಕೈಗೆತ್ತಿಕೊಂಡು ಕಣ್ಣಾಡಿಸಿದ.

ಡೋರಿಯನ್ ಗ್ರೇನಿಂದ ಬಂದಿತ್ತು ಸಿಬಿಲ್ ವೇನ್‌ಳನ್ನು ಮದುವೆಯಾಗುವುದಾಗಿ ತಿಳಿಸಿ ಬರೆದಿದ್ದ.

❖

# ಅಧ್ಯಾಯ - 5

ಅಮ್ಮ! ಅಮ್ಮ! ನಾನು ತುಂಬಾ ಸಂತೋಷವಾಗಿದ್ದೀನಿ ಎಂದು ಭಾವೋತ್ಸಾಹದಿಂದ ಹೇಳುತ್ತಾ, ಇಕ್ಕಟ್ಟಾದ ಕೋಣೆಯಲ್ಲಿನ ಕುರ್ಚಿಯೊಂದರಲ್ಲಿ ಗೋಡೆಗೆ ಮುಖಮಾಡಿ ಕುಳಿತಿದ್ದ. ದುರ್ಬಲ ಶರೀರದ, ದಣಿದ ದೇಹದ ಅಮ್ಮನನ್ನು ಅಪ್ಪಿಕೊಂಡು ಕೈಗಳನ್ನು ಕೊರಳ ಬಳಸಿ, "ಅಮ್ಮಾ ನಾನು ತುಂಬಾ ಸಂತೋಷವಾಗಿದ್ದೀನಿ, ಬಹುಶಃ ನೀನೂ ಕೂಡಾ ಸಂತೋಷ ಪಟ್ಟಿರಬೇಕಲ್ಲ."

"ಸಂತೋಷಾನಾ!... ನನಗೆ ನಿಜವಾದ ಸಂತೋಷ ಆಗೋದು ನೀನು ಆ್ಯಕ್ಟ್‌ಮಾಡಿದಾಗ ಮಾತ್ರ! ಆ್ಯಕ್ಟ್ ಮಾಡೋದರ ಹೊರತು ನೀನು ಬೇರೇನನ್ನೂ ಯೋಚಿಸಬಾರದು. ಮಿಸ್ಟರ್ ಐಸಾಕ್ಸ್ ಎಷ್ಟು ಒಳ್ಳೆಯವನು. ಅವನಿಗೆ ನಾವೆಷ್ಟೋ ಸಾಲದ ಹಣ ಕೊಡಬೇಕಾಗಿದೆ!"

"ಹಣ! ಸಾಲ!" ತಲೆಯೆತ್ತಿ ಸಿಡಿಮಿಡಿಯ ದನಿಯಲ್ಲಿ ಕೇಳಿದಳು. ಹಣದಿಂದ ಏನಾಗಬೇಕು? ಪ್ರೀತಿ ಹಣಕ್ಕಿಂತ ದೊಡ್ಡದಲ್ಲವೇ?"ಎಂದು ಮುಂದುವರೆಸಿ ಪ್ರಶ್ನಿಸಿದಳು.

"ಮಿಸ್ಟರ್ ಐಸಾಕ್ಸ್ ಐವತ್ತು ಪೌಂಡುಗಳನ್ನು ಸಾಲ ತೀರಿಸಲೆಂದು ಕೊಟ್ಟಿದ್ದಾನೆ. ಜೇಮ್ಸ್‌ಗೆ ಒಳ್ಳೆ ಬಟ್ಟೆ ಬೇರೆ ಕೊಳ್ಳಬೇಕು. ಇದನ್ನೆಲ್ಲ ಮರೆಯಬಾರದು ಸಿಬಿಲ್. ಐವತ್ತು ಪೌಂಡುಗಳು ಸಾಮಾನ್ಯ ಮೊತ್ತವಲ್ಲ. ಐಸಾಕ್ಸ್ ನಮ್ಮ ಬಗ್ಗೆ ಎಷ್ಟು ಉದಾರವಾಗಿದ್ದಾನೆ!

"ಅವನು ಸರಿಯಿಲ್ಲ ಅಮ್ಮ. ನನ್ನ ಜೊತೆ ಅಸಭ್ಯವಾಗಿ ಮಾತಾಡುತ್ತಾನೆ" ಎಂದು ಹೇಳುತ್ತಾ ಎದ್ದು ಕಿಟಕಿಯಿದ್ದ ಕಡೆಗೆ ಹೆಜ್ಜೆ ಹಾಕಿದಳು."ಅವನಿಲ್ಲದೆ ಸಂಸಾರ ನಡೆಸೋದು ಹೇಗೆ?" ಎಂದು ಆ ಮುದಿ ತಾಯಿ ತಾನೂ ಗಟ್ಟಿಯಾಗಿಯೇ ಮಾತಾಡಿದಳು."

ಸಿಬಿಲ್ ವೇನ್ ತಲೆಯೆತ್ತಿ ಅವಳತ್ತ ನೋಡಿ ನಗುತ್ತಾ "ಇನ್ನು ಮುಂದೆ ಅವನ ಸಹಾಯ ಬೇಕಾಗೋದಿಲ್ಲ. ಪ್ರಿನ್ಸ್ ಚಾರ್ಮಿಂಗ್ ಇನ್ನು ಮುಂದೆ ನಮ್ಮ ಬದುಕಿನ ಕಡೆ ಗಮನ ಕೊಡ್ತಾನೆ." ಒಂದು ಕ್ಷಣ ಮೌನ. ಕೆನ್ನೆಗಳಲ್ಲಿ ಕೆಂಪು ಮೂಡಿತು. ತುಟಿಯ ದಳಗಳು ಅರಳಿದವು ಸಣ್ಣ ಕಂಪನ ಅವುಗಳಲ್ಲಿ ಕಾಣಿಸಿಕೊಂಡಿತ್ತು.

"ಮೂರ್ಖ ಹುಡುಗಿ! ಮೂರ್ಖ ಹುಡುಗಿ! ಹುಡುಗಿ ಮತ್ತೆ ತುಟಿ ಮೇಲೆ ನಗು ತಂದುಕೊಂಡಳು. ಬಂಧನದಲ್ಲಿದ್ದ ಹಕ್ಕಿಯ ಬಿಡುಗಡೆಯಂತೆ ಇತ್ತು ಅವಳ ದನಿ. ಮುಖದಲ್ಲಿ ಗೆಲುವಿನ ಹೊಳಪು ಕಾಣಿಸಿತು. ಹೃದಯ ರಹಸ್ಯವನ್ನು ಬಚ್ಚಿಡುವಂತೆ ಕಣ್ಣುಗಳನ್ನು ಮುಚ್ಚಿಕೊಂಡಳು. ಮತ್ತೆ ಮತ್ತೆ ತನ್ನ ಪ್ರಿಯಕರನನ್ನು ಕಣ್ಣ ಮುಂದೆ ತಂದು ಕೊಂಡಳು. ಅವನ ಚುಂಬನದ ಮುದ್ರೆಯ ಮೇಲೆ ಕೈಯಾಡಿಸಿದಳು. ಕಣ್ಣು ಮುಚ್ಚಿದಳು. ಬಿಸಿಯುಸಿರನ್ನು ಹೊಮ್ಮಿಸಿದಳು.

ಸಿಬಿಲ್ ತಾಯಿಗೆ ಅವನು ಶ್ರೀಮಂತನೆಂಬುದು ತಿಳಿದಾಗ ಮದುವೆಯ ಬಗ್ಗೆ ಯೋಚಿಸಬಹುದೇನೊ ಎಂದುಕೊಂಡಳು. ಇದ್ದಕ್ಕಿದ್ದಂತೆ ಮೌನ ಮುರಿದು ಹೇಳಿದಳು.

ಅಮ್ಮ! ಅಮ್ಮ ಅವನು ನನ್ನನ್ನೇಕೆ ಪ್ರೀತಿಸುತ್ತಾನೆ? ನಾನು ಅವನನ್ನು ಯಾಕೆ ಪ್ರೀತಿಸುತ್ತಿದ್ದೇನೆಂತ ನನಗೆ ಗೊತ್ತಿದೆ. ಪ್ರೀತಿ ಹೇಗಿರಬೇಕು ಅನ್ನುವ ಹಾಗೆ ಅವನು ಇರುವುದರಿಂದಲೇ ನಾನು ಪ್ರೀತಿಸುತ್ತೇನೆ. ನನ್ನಲ್ಲಿ ಏನಿದೇಂತ ಅವನು ಪ್ರೀತಿಸುತ್ತಿದ್ದಾನೆ? ಅವನಿಗೆ ನಾನು ಯೋಗ್ಯಳೇ ಅಲ್ಲ. ಆದರೂ ಯಾಕೆ, ಯಾಕೆ ಪ್ರೀತಿಸುತ್ತಿದ್ದಾನೆ? ನನಗಂತೂ ಗೊತ್ತಾಗ್ತಿಲ್ಲ. ಅವನು ಇರೋ ಸ್ಥಿತಿಗಿಂತ ಬಹಳ ಕೆಳಗಿದ್ದೀನಿ ಆದರೂ ಅವನ ಮುಂದೆ ನನಗೆ ನಾನು ಕಡಿಮೆಯೇನಲ್ಲ ಅನಿಸುತ್ತೆ. ತುಂಬ ಹೆಮ್ಮೆ ಅನಿಸುತ್ತೆ. ಅಮ್ಮ ನೀನೂ ಕೂಡಾ ಮದುವೆಗೆ ಮುಂಚೆ ಅಪ್ಪನನ್ನು, ನಾನು ಪ್ರಿನ್ಸ್ ಚಾರ್ಮಿಂಗ್‌ನನ್ನು ಪ್ರೀತಿಸುವಷ್ಟು ಗಾಢವಾಗಿ ಪ್ರೀತಿಸುತ್ತಿದ್ದಿಯೇನು?

ಶ್ರೀಮತಿ ವೇನ್‌ಳ ದಟ್ಟವಾಗಿ, ಪೌಡರ್ ಹಚ್ಚಿಕೊಂಡ ಕೆನ್ನೆಗಳು ಪೇಲವವಾದವು. ಸಣ್ಣದಾದ ನೋವಿನ ಸೆಳಕು ತುಟಿಯಂಚಿನಲ್ಲಿ ಕಾಣಿಸಿತು. ಸಿಬಿಲ್ ಅವಳ ಬಳಿಗೆ ಓಡಿ ಬಂದು ಗಟ್ಟಿಯಾಗಿ ಕೊರಳ ಸುತ್ತ ತೋಳುಗಳನ್ನು ಹೆಣೆದು ಕೆನ್ನೆಯ ಮೇಲೆ ಒಂದು ಮುತ್ತನ್ನೊತ್ತಿ, "ತಪ್ಪಾಯ್ತು ಅಮ್ಮ. ಅಪ್ಪನ ಪ್ರಸ್ತಾಪ ಮಾಡಿ ನಿನಗೆ ನೋವುಂಟು ಮಾಡಿದೆ. ನಿನಗೆ ನೋವಾದದ್ದು, ನೀನು ಅಪ್ಪನನ್ನು ಅತಿಯಾಗಿ ಪ್ರೀತಿಸುತ್ತಿದ್ದೆಯಾದ್ದರಿಂದ. ಸಪ್ಪೆ ಮೋರೆ ಹಾಕಿಕೊಳ್ಳಬೇಡ. ಇಪ್ಪತ್ತು ವರ್ಷಗಳ ಹಿಂದೆ ನೀನೆಷ್ಟು ಸಂತೋಷವಾಗಿದ್ದೆಯೋ ಅಷ್ಟೇ ಸಂತೋಷವಾಗಿದ್ದೀನಿ.

"ಮಗು ಪ್ರೀತಿಗೀತಿ ಅಂತ ಯೋಚನೆ ಮಾಡೋಕೆ ನೀನು ಇನ್ನೂ ಚಿಕ್ಕವಳು. ಅಲ್ಲದೆ ಈ ಹುಡುಗನ ಬಗ್ಗೆ ನಿನಗೇನು ತಾನೇ ಗೊತ್ತಿದೆ? ಕಡೆಗೆ ಅವನ ಹೆಸರು ಕೂಡಾ ಗೊತ್ತಿಲ್ಲ. ನೀನು ಮಾಡ ಹೊರಟಿರೋದು ನಿಜವಾಗಿಯೂ ಸರಿ ಅನಿಸೊಲ್ಲ. ಅಲ್ಲದೆ ಜೇಮ್ಸ್ ಬೇರೆ ಆಸ್ಟ್ರೇಲಿಯಾಗೆ ಹೋಗ್ತಿದ್ದಾನೆ. ಅಂಥಾದ್ದರಲ್ಲಿ ನೀನು ಇದನ್ನೆಲ್ಲ ಯೋಚನೆ ಮಾಡಬೇಕಿತ್ತು.

ಆದರೂ, ನಾನು ಮೊದಲೇ ಹೇಳಿದಂತೆ, ಅವನೇನಾದರೂ ಶ್ರೀಮಂತನೇ ಆಗಿದ್ದ ಪಕ್ಷದಲ್ಲಿ..."
"ಅಮ್ಮಾ, ಅಮ್ಮಾ! ನನಗೆ ಸಂತೋಷವಾಗಿರಲು ಬಿಡು."

ಶ್ರೀಮತಿ ವೇನ್, ನಾಟಕದಲ್ಲಿಯಂತೆ ಕೃತಕ ನಗೆಯನ್ನು ತಂದುಕೊಂಡು, ಮಗಳನ್ನು ಗಟ್ಟಿಯಾಗಿ ಅಪ್ಪಿಕೊಂಡಳು. ಅದೇ ಕ್ಷಣದಲ್ಲಿ ಜೇಮ್ಸ್ ಬಾಗಿಲು ತಳ್ಳಿಕೊಂಡು, ಕಂದು ಬಣ್ಣದ ಕೂದಲಿನ ಒರಟು ಒರಟಾಗಿ ಕಾಣುವ, ಒರಟು ಹೆಜ್ಜೆಗಳಿಡುತ್ತಾ ಒಳ ಬಂದ. ಅಕ್ಕನಿಗೆ ದೊರೆತಿದ್ದ ಸಂಸ್ಕಾರ ಅವನಿಗೆ ದೊರೆತಿರಲಿಲ್ಲವೆಂಬಂತೆ ಕಾಣುತ್ತಿತ್ತು. ಅವರಿಬ್ಬರ ನಡುವೆ ಎಳ್ಳಷ್ಟೂ ಹೋಲಿಕೆಯಿರಲಿಲ್ಲ ವೇನ್ ಅವನತ್ತ ನೋಡಿ ಮುಗುಳ್ನಕ್ಕಳು. ಮಾನಸಿಕವಾಗಿ ಅವನನ್ನು ಪ್ರತಿಷ್ಠಿತ ಪ್ರೇಕ್ಷಕನ ಸ್ಥಾನದಲ್ಲಿ ಕಲ್ಪಿಸಿಕೊಂಡಳು. ಈ ದೃಶ್ಯ ಬಹಳ ಚೆನ್ನಾಗಿದ್ದಿರಬೇಕು ಎಂದು ಭಾವಿಸಿದಳು.

"ನೀನು ಕೊಡುತ್ತಿರುವ ಮುತ್ತುಗಳಲ್ಲಿ ನನಗೂ ಒಂದೆರಡು ಉಳಿಸಿಕೊ" ಎಂದು ತಮಾಶೆಯಾಗಿ ಹೇಳಿದ.

"ನಿನಗೆ ಮುತ್ತುಗಿತ್ತು ಅಂದರೆ ಇಷ್ಟ ಆಗೋದಿಲ್ವಲ್ಲ ಜಿಮ್. ನೀನಂತು ಭಯಂಕರ ಮುದಿ ಕರಡಿ" ಎಂದು ಹೇಳುತ್ತಾ ಓಡಿ ಅವನನ್ನು ಆಲಂಗಿಸಿಕೊಂಡಳು. ಜೇಮ್ಸ್ ವೇನ್ ಸಿಬಿಲ್ ಕಡೆ ತಿರುಗಿ ಅವಳ ಕೋಮಲವಾದ ಮುಖವನ್ನು ನೋಡಿದ.

"ಸಿಬಿಲ್ ನನ್ನ ಜೊತೆ ಬಾ ಹೊರಗೆ ಸ್ವಲ್ಪ ಅಡ್ಡಾಡಿ ಬರೋಣ, ಇನ್ನು ಬಹುಶಃ ಈ ದರಿದ್ರ ಲಂಡನ್‌ನನ್ನು ನೋಡೋದಿಲ್ಲ ಅನಿಸುತ್ತೆ. ನನಗೆ ನೋಡೋ ಇಷ್ಟ ಕೂಡಾ ಇಲ್ಲ."

"ಮಗು ಹಾಗೆಲ್ಲ ಮಾತಾಡಬೇಡ" ಎನ್ನುತ್ತಾ ಹಳೆಯದಾಗಿದ್ದ ಕಾಸ್ಟ್ಯೂಮ್‌ಗೆ ತೇಪೆ ಹಾಕತೊಡಗಿದಳು. ಅವನೂ ನಾಟಕದ ತಂಡ ಸೇರಲಿಲ್ಲ. ಸೇರಿದ್ದರೆ ದೃಶ್ಯ ಇನ್ನಷ್ಟು ರಮಣೀಯವಾಗುತ್ತಿತ್ತು.

"ಯಾಕೆ ಮಾತಾಡಬಾರದು ಅಮ್ಮ? ನಾನು ಹೇಳಿದ್ದು ನಿಜ."

"ಮಗು ನನಗೆ ನೋವುಂಟು ಮಾಡುತ್ತಿದ್ದೀ. ಆಸ್ಟ್ರೇಲಿಯಾಗೆ ಹೋಗಿ, ಒಳ್ಳೆ ಸಂಪಾದನೆ ಮಾಡಿ ಶ್ರೀಮಂತನಾಗಿ ಬರ್ತೀಯ ಅನ್ನೋ ಭರವಸೆಯಿದೆ ಇಲ್ಲಿರುವಂತಹ ಸಮಾಜ, ಅಲ್ಲಿನ ಕಾಲನಿಗಳಲ್ಲಿ ಸಮಾಜ ಎಂದು ಕರೆಯಲಲು, ಯೋಗ್ಯವಾದ ಸಮಾಜಗಳು ಇರೋದಿಲ್ಲ. ನಿನ್ನ ಅದೃಷ್ಟ ಖುಲಾಯಿಸಿದ ಮೇಲೆ ನೀನು ಇಲ್ಲಿಗೆ ಹಿಂತಿರುಗಿ ಬಂದು ಲಂಡನ್‌ನಲ್ಲಿ ನಿನ್ನ ಪ್ರತಿಷ್ಠೆಯನ್ನು ಸ್ಥಾಪಿಸಿಕೋ."

"ಏನೆಂದೆ? ಸಮಾಜ! ಅದೆಲ್ಲ ನನಗೆ ಗೊತ್ತಿಲ್ಲ. ಆದಷ್ಟು ಬೇಗ ನಾನೊಂದು ನೆಲೆಗೆ ಬಂದು, ನಿಮ್ಮಿಬ್ಬರನ್ನು ಅಲ್ಲಿಗೆ ಕರೆಸಿಕೊಳ್ಳುವುದಷ್ಟೇ ನನ್ನ ಉದ್ದೇಶ. ನಿಮ್ಮಿಬ್ಬರನ್ನೂ ಸ್ಟೇಜಿಂದ ದೂರವಿರಿಸ ಬೇಕೆಂದಿದ್ದೇನೆ. ಸ್ಟೇಜ್ ಅಂದರೆ ಯಾಕ್ಟಂಗ್ ಅಂದರೆ ನನಗೆ ಆಗೊಲ್ಲ"

" ಜಿಮ್ ನೀನೆಂಥ ನಿಷ್ಠುರಿ! ನಿಜವಾಗಿ ನನ್ನ ಜೊತೆ ವಾಕ್‌ಗೆ ಹೋಗೋಣ ಎಂದೆಯಾ? ಹಾಗಿದ್ದರೆ, ಬಹಳ ಚೆನ್ನಾಗಿರುತ್ತೆ, ನನಗೇನೋ ನೀನು ಫ್ರೆಂಡ್ಸ್‌ಗೆಲ್ಲ ಗುಡ್ ಬೈ ಹೇಳೋಕೆ

ಹೋಗ್ತಿಯೇನೋ ಎಂದ್ಕೊಂಡಿದ್ದೆ. ಹೋಗಲಿ ಬಿಡು ಕೊನೇಸಲವಾದರೂ ಒಂದು ಮಧ್ಯಾಹ್ನ ನಿನ್ನ ಜೊತೆ ಕಳೆಯೋಕಾಯ್ತು ಹೇಳು ಎಲ್ಲಿಗೆ? ಪಾರ್ಕ್‌ಗೆ ಹೋಗೋಣವೇ? ಪಾರ್ಕ್‌ಗೀರ್ಕ್ ನನ್ನಂಥ ಕೊಳಕನಿಗಲ್ಲ. ನನ್ನ ಬಟ್ಟೆ ನೋಡು ಹೇಗಿದೆ? ಅದೆಲ್ಲ ಶ್ರೀಮಂತರಿಗೆ."

"ಅರ್ಥವಿಲ್ಲದ್ದು ಜಿಮ್" ಎಂದು ಅವನ ಕೋಟಿನ ತುದಿ ಎಳೆದುಹೇಳಿದಳು ಜೇಮ್ಸ್ ಒಂದೆರಡು ಮೂರು ಬಾರಿ. ಶತಪಥ ಹೆಜ್ಜೆ ಹಾಕಿದ. ನಂತರ ಕುರ್ಚಿಯಲ್ಲಿ ಮೌನವಾಗಿ ಕುಳಿತಿದ್ದ ತಾಯಿಯತ್ತ ಮುಖ ಮಾಡಿ, "ಅಮ್ಮ ನನ್ನ ವಸ್ತುಗಳನ್ನೆಲ್ಲ ಪ್ಯಾಕ್ ಮಾಡಿ ರೆಡಿ ಇಟ್ಟಿದ್ದೀಯ?"

"ಎಲ್ಲಾ ರೆಡಿಯಾಗಿದೆ, ಎಂದ ತಾನು ಮಾಡುತ್ತಿದ್ದ ಕೆಲಸದ ಮೇಲೇ ಮನವಿರಿಸಿ ಹೇಳಿದಳು.ಕೆಲದಿನಗಳಿಂದ ಈ ಒರಟು ಮಗನ ಜೊತೆಯಲ್ಲಿದ್ದು ಬೇಸರಗೊಂಡಿದ್ದಳು. ಅವನನ್ನು ನೋಡಿದಾಗಲೆಲ್ಲ ಏನೋ ಒಂದು ಥರಾ ಹಿಂಸೆಯಾಗುತ್ತಿತ್ತು.ತನ್ನ ಬಗ್ಗೆ ಏನಾದರೂ ಅನುಮಾನ ಪಡುತ್ತಿದ್ದಾನಾ ಹೇಗೆ ಎಂದು ಯೋಚಿಸಿದಳು. ತನ್ನ ಮೌನದ ಹೊರತಾಗಿ ಮತ್ತೇನನ್ನೂ ಗಮನಿಸದೆ ಇದ್ದದ್ದು ಅವಳಿಗೆ ಅಸಹನೀಯವೆನಿಸಿತು. ಹೆಂಗಸರ ಸ್ವಭಾವದ ಬಗ್ಗೆ ಏನೇನೋ ಹೇಳಿದಳು. ನಿನ್ನ ನಾವಿಕ ವೃತ್ತಿ ಜೀವನ ನಿನಗೆ ಸಮಧಾನ ತಂದೀತು ಎಂದುಭಾವಿಸುತ್ತೇನೆ. ನೋಡು ಇದು ನಿನ್ನದೇ ಆಯ್ತು.ಕಾನೂನು ಸಲಹಾ ಕಛೇರಿಯಲ್ಲಿ ಕೆಲಸ ಮಾಡಬಹುದಾಗಿತ್ತು. ಕಾನೂನು ಸಲಹಗಾರರಿಗೆ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನವಿದೆ ಬಹಳ ಬಹಳ ದೊಡ್ಡ ಶ್ರೀಮಂತರ ವರಿಷ್ಠರ ಜೊತೆ ಊಟಮಾಡುವ ಅವಕಾಶಗಳೂ ಇರುತ್ತವೆ ಎಂದೆಲ್ಲ.

" ನನಗೆ ಆಫೀಸುಗಳು ಮತ್ತು ಕ್ಲರ್ಕಗಳು ಎಂದರೆ ಅಸಹ್ಯ ನೀನು ಹಾಳಿದಂತೆ ಇದು ನನ್ನ ಆಯ್ಕೆಯೇ? ನೀನು ಗಮನವಿರಸ ಬೇಕಾಗಿರೋದು ಸಿಬಿಲ್ ಮೇಲೆ. ಅವಳಿಗೆ ಏನೂ ತೊಂದರೆಯಗದಂತೆ ನೋಡಿ ಕೊಳ್ಳೋದು ನಿನ್ನ ಜವಾಬ್ದಾರಿ ದಯವಿಟ್ಟು ಅಮ್ಮ ಅವಳನ್ನು ಜತನದಿಂದೆ ಕಾಪಾಡು"

"ಜೇಮ್ಸ್ ಇದೇನು ಹೊಸದಾಗಿ ಮಾತಾಡ್ತಿದ್ದೀ ಅವಳನ್ನು ಜಾಗರೂಕತೆಯಿಂದಲೇ ನೋಡಿ ಕೊಳ್ಳುತ್ತಿದ್ದೇನೆ.

" ನಾನು ಕೇಳಿದ್ದೇನಂದ್ರೆ ಪ್ರತಿ ರಾತ್ರಿ ಒಬ್ಬ ಯುವಕ ಥಿಯೇಟರ್‌ಗೆ ಬಂದು ಪರದೆ ಹಿಂದೆ ಹೋಗಿ ಮಾತಾಡಿಸಿ ಬರುತ್ತಾನಂತೆ! ಇದೆಲ್ಲ ನಿಜವೇನು? ಇದಕ್ಕೆಲ್ಲ ಏನು ಹೇಳ್ತಿ?"

"ನೀನು ಮಾತಾಡ್ತಿರೋದು ನಿನಗೆ ಅರ್ಥವಾಗದ ವಿಷಯಗಳನ್ನು ಕುರಿತು. ನಮ್ಮ ವೃತ್ತಿಯಲ್ಲಿ ನಮಗೆ ಅನೇಕ ಅಭಿಮಾನಿಗಳು ಇರ್ತಾರೆ. ಸ್ವತಃ ನಾನೇ ಅನೇಕ ಅಭಿಮಾನಿಗಳು ಕಳಿಸಿದ ಹೂಗುಚ್ಛಗಳನ್ನು ಸ್ವೀಕರಿಸುತ್ತಿದ್ದೆ, ಯಾವಾಗ ನಮ್ಮ ಅಭಿನಯವನ್ನು ಚೆನ್ನಾಗಿ ಅರ್ಥ ಮಾಡಿ ಕೊಂಡಿರ್ತಾರೋ ಆವಾಗ, ಸಿಬಿಲ್ ವಿಚಾರದಲ್ಲಿ ನನಗೆ ಇನ್ನೂ ಸ್ಪಷ್ಟವಾಗಿ ಏನೂ ಗೊತ್ತಾಗಿಲ್ಲ. ಅವಳಿಗಿರುವ ಗಾಢ ಸ್ನೇಹ ಎಷ್ಟು ಗಂಭೀರದ್ದೋ ನನಗೆ ತಿಳಿದಿಲ್ಲ ಆದರೆ

ಒಂದು ಮಾತಂತೂ ಸ್ಪಷ್ಟ ಅವಳ ಸ್ನೇಹಕ್ಕಾಗಿ ಹಾತೊರೆಯುತ್ತಿರುವವನು ನಿಜವಾಗಿಯೂ ಒಬ್ಬ ಸಭ್ಯ ಯುವಕ. ನನ್ನ ಹತ್ತಿರ ಕೂಡ ಬಹಳ ಸಭ್ಯನಂತೆ ವರ್ತಿಸುತ್ತಾನೆ ನೋಡಲು ಕೂಡಾ ಬಹಳ ಸಾಧು ಸ್ವಭಾವದಂತೆ ಕಾಣುತ್ತಾನೆ. ಜೊತೆಗೆ ಬಹಳ ಶ್ರೀಮಂತನಂತೆ ಕೂಡಾ ಇದ್ದಾನೆ. ಅವನು ಕಳಿಸುವ ಹೂಗುಚ್ಛಗಳು ಭಾರಿ ಬೆಲೆಯುಳ್ಳದ್ದಾಗಿರ ಬೇಕು ಎನಿಸುತ್ತೆ."

ಇಷ್ಟೆಲ್ಲ ಆದರೂ ಅವನ ಹೆಸರೇನೂ ಅಂತಗೊತ್ತಿಲ್ಲ ಒರಟಾಗಿ ಹೇಳಿದ.

"ಇಲ್ಲ" ಶಾಂತವಾಗಿ ಹೇಳಿದಳು ಇನ್ನೂ ತನ್ನ ನಿಜವಾದ ಹೆಸರನ್ನು ಹೇಳಿಲ್ಲ. ನೋಡಿದರೆ ಆಗರ್ಭ ಶ್ರೀಮಂತ ಕುಟುಂಬದವನಿರಬೇಕು ಎನಿಸುತ್ತದೆ."

ಜೇಮ್ಸ್ ತುಟಿ ಕಚ್ಚಿ ಹಿಡಿದ "ಸಿಬಿಲ್ ಮೇಲೆ ಒಂದು ಕಣ್ಣಿಟ್ಟಿರು ಎಚ್ಚರಿಕೆಯಿಂದ ಗಮನಿಸುತ್ತಿರು"

"ಮಗು ನಿನ್ನ ಮಾತುಗಳಿಂದ ನನಗೆ ನೋವಾಗುತ್ತೆ. ನೀನು ನಿರೀಕ್ಷಿಸುವುದಕ್ಕಿಂತ ಹೆಚ್ಚಿನ ಜಾಗರೂಕತೆಯಿಂದ ನೋಡಿಕೊಳ್ಳುತ್ತೀದ್ದೇನೆ. ಒಂದು ವೇಳೆ ಅವನು ಶ್ರೀಮಂತನೇ ಆಗಿದ್ದರೆ, ಅವಳು ಅವನ ಸ್ನೇಹ ಮಾಡುವುದರಲ್ಲಿ ತಪ್ಪಿಲ್ಲ. ಖಂಡಿತ ಅವನು ಸಾಕಷ್ಟು ಶ್ರೀಮಂತನೆ ಇರಬೇಕಂತ ನನ್ನ ಭಾವನೆ. ಅವನು ನೋಡುವುದಕ್ಕೂ ಅದೇ ಗತ್ತಿನಲ್ಲಿ ಕಾಣಿಸುತ್ತಾನೆ. ಅವರಿಬ್ಬರೂ ಮದುವೆಯಾದರೆ ಸರಿಯಾದ ಜೋಡಿ ಆಗುತ್ತೆ, ಮುದ್ದಾದ ದಂಪತಿ ಗಳಾಗುತ್ತಾರೆ. ಅವನ ರೂಪವು ಅನನ್ಯವಾಗಿದೆ. ಪ್ರತಿಯೊಬ್ಬರ ಗಮನ ಸೆಳೆಯುವಂತಿದೆ"

ಅವನು ಒಳಗೊಳಗೇ ಗೊಣಗಿಕೊಂಡ. ಕಿಟಕಿಯ ಗಾಜಿನ ಮೇಲೆ ತಬಲೆಯಂತೆ ಬೆರಳುಗಳನ್ನು ಆಡಿಸಿದ. ಏನೋ ಹೇಳಬೇಕೆಂದು ತಾಯಿಯ ಕಡೆ ತಿರುಗಿದನೋ ಇಲ್ಲವೋ ಸಿಬಿಲ್ ಒಳ ನುಗ್ಗಿದಳು.

"ಏನಿದು ಇಬ್ಬರೂ ಎಷ್ಟೊಂದು ಸೀರಿಯಸ್ಸಾಗಿದ್ದೀರಿ ವಿಷಯ ಏನು?

"ಏನಿಲ್ಲ" ಉತ್ತರಿಸಿದ" ಒಂದೊಂದುಸಲ ಹೀಗೆ ಸೀರಿಯಸ್ಸಾಗೆ ಇರಲೇ ಬೇಕಾಗುತ್ತೆ. ಗುಡ್ ಬೈ ಅಮ್ಮ , ಐದು ಗಂಟಗೇ ಊಟ ಮಾಡಿ ಬಿಡ್ತೀನಿ ನನ್ನ ಷರ್ಟಗಳ ಹೊರತು ಎಲ್ಲ ಪ್ಯಾಕಾಗಿರುವುದರಿಂದ, ನೀನು ತೊಂದರೆತೊಗೊಳ್ಳ ಬೇಕಾದ್ದಿಲ್ಲ. ಗುಡ್ ಬೈ ಮಗು ಏನೋ ಒಂದು ರೀತಿಯ ಭಾರವಾದ ದನಿಯಲ್ಲಿ ಹೇಳಿದಳು. ಅವನು ಮಾತಾಡಿದ ಧ್ವನಿ ಅವಳಿಗೆ ಸರಿಬರಲಿಲ್ಲ. ಅವನ ನೋಟದಲ್ಲೂ ಕೂಡಾ, ಏನೋ ಭಯ ಹುಟ್ಟಿಸುವಂತಿತ್ತು.

"ಅಮ್ಮ ನನಗೊಂದು ಮುತ್ತು ಕೊಡು ಎಂದು ಸಿಬಿಲ್ ಬಳಿಗೆ ಬಂದಳು. ಸಿಬಿಲ್ ಕೆನ್ನೆಯ ಸ್ಪರ್ಶ ಶ್ರೀಮತಿ ವೇನ್‌ಳಿಗೊ ಹಿತವೆನಿಸಿತು.

"ನಡಿ, ಸಿಬಿಲ್ ಜೇಮ್ಸ್ ಆತುರ ಪಡಿಸಿ ಕರೆದ. ಅವನಿಗೆ ಕಾಯುವ ನಟನೆ ಅಸಹ್ಯವೆನಿಸಿತು. ಇಬ್ಬರೂ ಬೀದಿಗಿಳಿದು ನಡೆಯ ತೊಡಗಿದರು. ಅವಳು ನಡೆಯುವಾಗ ಹಲವರ ಕಣ್ಣು ಅವಳ ಮೇಲೆ ಬಿತ್ತಾದರೂ ಅವಳಿಗೆ ಗಮನವಿರಲಿಲ್ಲ. ಅವಳು ಮಾತ್ರ ಜೇಮ್ಸನ ಬದುಕಿನ ಬಗ್ಗೆ ಯೋಚಿಸುತ್ತಿದ್ದಳು ಅವನು ಹೋದ ಮೇಲೆ ಅವನ ಬದುಕು

ಚೆನ್ನಾಗಿ ಆಗುತ್ತೆ. ಯಾವುದಾದರೂ ಹುಡುಗೀನ ಪ್ರೀತಿಸಿ ಮದುವೆಯಾಗ್ತಾನೆ. ಅಲ್ಲಿಂದ ಲಂಡನ್‌ಗೆ ವಾಪಸ್ ಬಂದು ದೊಡ್ಡ ಮನೆ ಮಾಡ್ತಾನೆ. ಅವನ ಮುಂದಿನ ಬದುಕು ಅದ್ದೂರಿಯಾಗಿರುತ್ತೆ. ಆದರೆ ಅವನು ತನ್ನ ಸಿಟ್ಟನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕು. ದೇವರು ದಯಾವಂತ, ಅವನೆಲ್ಲ ನೋಡಿ ಕೊಳ್ತಾನೆ. ತಾನೂ ಅವನಿಗಾಗಿ ಪ್ರಾರ್ಥಿಸ್ತೇನೆ. ಒಟ್ಟಲ್ಲಿ ಭಾರಿ ಹಣವಂತನಾಗಿ, ಸುಖ ಸಂತೋಷಗಳಿಂದ ಸಂತೃಪ್ತನಾಗಿ ಮರಳಿ ಬರ್ತಾನೆ ಎಂದೆಲ್ಲಾ ಯೋಚಿಸುತ್ತಿದ್ದಳು. ತನ್ನೆಲ್ಲ ಇಂಥ ಆಲೋಚನೆಗಳನ್ನು ಅವನಿಗೆ ಕೇಳಿಸುವಂತೆ ಹೇಳುತ್ತಿದ್ದರೂ ಅವನು ಕಿವಿ ಮೇಲೆ ಹಾಕಿಕೊಳ್ಳದೆ ತನ್ನದೇ ಚಿಂತೆಗಳಲ್ಲಿ ಮಗ್ನನಾಗಿದ್ದ, ತನ್ನ ಭವಿಷ್ಯದ ಬಗ್ಗೆ, ಸಿಬಿಲ್ ಕುರಿತಾಗಿ ಎದುರಾಗ ಬಹುದಾದ ಅಪಾಯಗಳ ಬಗ್ಗೆ ಹೆದರಿದಂತಿದ್ದ. ಯಾವುದನ್ನೂ ಗಂಭೀರವಾಗಿ, ಆಳವಾಗಿ ಅರ್ಥ ಮಾಡಿಕೊಳ್ಳಲಾಗದ ತಾಯಿಯ ಅಸಮರ್ಥತೆ, ಒಣ ಪ್ರತಿಷ್ಠೆಗಳ ಬಗ್ಗೆ ಅವನಿಗೆ ಅರಿವಿತ್ತು. ಇದರಿಂದಾಗಿ ಸಿಬಿಲ್‌ಳ ಸಂತೋಷಕ್ಕೆ ದೊಡ್ಡ ಅಪಾಯವೇ ಕಾದಿರುವಂತೆನಿಸಿತು.

ತಾಯಿಯನ್ನು ಕೇಳ ಬೇಕೆಂದಿದ್ದ ಒಂದು ವಿಚಾರ ಅವನನ್ನು ಕೊರೆಯುತ್ತಿತ್ತು. ಥಿಯೇಟರ್‌ನಲ್ಲಿ ಸಿಬಿಲ್ ಕುರಿತಾಗಿ ಏನೇನೋ ಮಾತುಗಳು ಕೇಳಿ ಬರುತ್ತಿತ್ತು. ಹಗುರವಾಗಿ, ವ್ಯಂಗ್ಯವಾಗಿ ಜನ ಟೀಕೆ ಮಾಡುತ್ತಿದ್ದರು. ಸ್ಟೇಜ್ ಬಾಗಿಲು ಬಳಿಯೇ ನಿಂತಿದ್ದವನಿಗೆ ಈ ಮಾತುಗಳನ್ನು ಕೇಳಿ ಸಹಿಸಿಕೊಳ್ಳಲಾಗಲಿಲ್ಲ ಹೃದಯ ಹಿಂಡಿದಂತಾಗುತ್ತಿತ್ತು."

"ಜಿಮ್ ನಾನು ಹೇಳ್ತಾ ಇರೋದನ್ನು ನೀನು ಕೇಳಿಸಿಕೊಳ್ಳುತ್ತಲೇ ಇಲ್ಲ. ನಿನ್ನ ಭವ್ಯ ಭವಿಷ್ಯ ಹೇಗಿರಬೇಕೆಂದು ನಾನು ಏನೇನೋ ಯೋಜನೆಗಳನ್ನು ಯೋಚಿಸುತ್ತಿದ್ದೇನೆ. ಏನಾದರೂ ಮಾತಾಡು ಜಿಮ್" ಎಂದು ಒತ್ತಾಯಿಸಿದಳು.

"ಏನು ಹೇಳಲಿ ನಾನು"

"ಅದೇ ಒಳ್ಳೆಯವನಾಗಿರ್ತೀನಿ. ನಿಮ್ಮನ್ನು ಮರೆಯೊಲ್ಲ" ಅಂತೆಲ್ಲ ಹೇಳ ಬಹುದಲ್ಲ"

"ನಾನು ಮರೆಯುವುದಿರಲಿ, ನನಗಿಂತ ಮುಂಚೆ ನೀನೇ ನಮ್ಮನ್ನು ಮರೆತು ಬಿಡ್ತೀಯ!"

"ಏನು ಮಾತು ಜಿಮ್" ಸಿಬಿಲ್ ಪ್ರಶ್ನಿಸಿದಳು, ನಾಚುತ್ತಾ!

"ನಿನಗ್ಯಾರೋ ಹೊಸ ಸ್ನೇಹಿತರು ಸಿಕ್ಕಿದ್ದಾರಂತೆ? ಯಾರವರು? ಅವರ ಬಗ್ಗೆ ನನಗ್ಯಾಕೆ ಹೇಳಲಿಲ್ಲ. ಅವನಿಂದ ನಿನಗೆ ಒಳ್ಳೇದೇನೂ ಆಗೊಲ್ಲ"

"ಸಾಕು ಮಾಡು ಜಿಮ್ ಅವನ ವಿರದ್ಧವಾಗಿ ನೀನು ಏನೂ ಹೇಳ ಬೇಡ. ಅವನನ್ನು ನಾನು ತುಂಬಾ ಪ್ರೀತಿಸ್ತೀನಿ"

"ಅವನ ಹೆಸರೂಕೂಡಾಗೊತ್ತಿಲ್ವಂತೆ ನಿನಗೆ? ಅವನು ಯಾರು? ಅದನ್ನು ತಿಳಿಯಲು ನನಗೆ ಹಕ್ಕಿದೆ."

"ಅವನನ್ನು ಪ್ರಿನ್ಸ್ ಚಾರ್ಮಿಂಗ್ ಅಂತಕರೀತಾರೆ. ಹೆಸರು ಇಷ್ಟ ಆಗಲಿಲ್ಲವೇನು? ನೀನೊಬ್ಬ! ಈ ಹೆಸರನ್ನು ಯಾವತ್ತೂ ಮರೀಬೇಡ. ಅವನನ್ನು ನೋಡಿದರೆ, ನಿನಗೇ

ಗೊತ್ತಾಗುತ್ತೆ, ಪ್ರಪಂಚದಲ್ಲಿ ಅವನಂಥ ಇನ್ನೊಬ್ಬರು ಇರಲು ಸಾಧ್ಯವೇ ಇಲ್ಲಾಂತ! ನೀನು ಅಸ್ಟ್ರೇಲಿಯಾದಿಂದ ಬಂದ ಮೇಲೆ ಒಂದು ದಿನ ಅವನನ್ನು ನೋಡಿಯೇ ನೋಡ್ತೀಯ ಎಷ್ಟು ಇಷ್ಟವಾಗುತ್ತೆ ಗೊತ್ತಾ ನಿನಗೆ! ಪ್ರತಿಯೊಬ್ಬರೂ ಅವನನ್ನು ಇಷ್ಟ ಪಡ್ತಾರೆ. ನಾನು ಅವನನ್ನು ಪ್ರೀತಿಸ್ತೀನಿ. ಇವತ್ತು ರಾತ್ರಿ ನೀನು ಥಿಯೇಟರ್‌ಗೆ ಬಂದರೆ ಚೆನ್ನಾಗಿರುತ್ತೆ, ಅವನನ್ನು ನೀನು ನೋಡ ಬಹುದು. ಜೂಲಿಯಟ್ ಪಾತ್ರ ಮಾಡ್ತಿದ್ದೀನಿ. ನಾನು ಪ್ರೇಮಿಸುತ್ತಲೇ ಜೂಲಿಯಟ್ ಪಾತ್ರ ಮಾಡೋದನ್ನು ಊಹಿಸಿಕೊಂಡರೇನೇ ಅವನು ನನ್ನೆದುರಿಗೇ ಕುತಿರುತ್ತಾನೆ. ನಾನು ಹೇಗೆ ಮಾಡ್ತೀನೇಂದ್ರೆ ಕಂಪನಿಯನ್ನ, ಜನರನ್ನ ಹೆದರಿಸಿ ಬಿಡ್ತೇನೋ ಅಥವಾ ಸಂಭ್ರಮಾಶ್ಚರ್ಯಗಳಿಗೆ ದೂಡುತ್ತೇನೊ ಏನೋ ಎನಿಸುತ್ತೆ, ಪಸಾಕ್ಸ್‌ಂತೂ ನನ್ನನ್ನು ಜೀನಿಯಸ್ ಅಂತ ದೊಡ್ಡದನಿಯಲ್ಲಿ ಕೂಗಿ ಹೇಳುತ್ತಾನೆ. ತನಗೆ  ನನ್ನ ಪ್ರತಿಭೆ ಏನು ಅನ್ನುವುದರ ಬಗ್ಗೆ ಜ್ಞಾನೋದಯ ಆಯ್ತುಅಂತ ಘೋಷಿಸುತ್ತಾನೆ. ಇಷ್ಟೆಲ್ಲ ಯಾರಿಂದ, ಪ್ರಿನ್ಸ್‌ಚಾರ್ಮಿಂಗ್ ನಿಂದ! ನನ್ನ ಪ್ರಿಯಕರನಿಂದ! ನನ್ನ ಹೃದಯದೇವರಿಂದ! ಆದರೆ ಅಂಥವನ ಮುಂದೆ ನಾನು ಏನೂ ಅಲ್ಲ! ದರಿದ್ರಳು! ಆದರೇನು? ದಾರಿದ್ರ್ಯ ಬಾಗಿಲೊಳಗಿಂದ ನುಗ್ಗಿದರೆ, ಪ್ರೀತಿ ಕಿಟಕಿಯೊಳಗಿಂದ ಪ್ರವೇಶಿಸುತ್ತೆ.

"ಹೂಂ!ಅವನು ಸಭ್ಯ" ಸಪ್ಪೆ ಮುಖ ಹಾಕಿ ಹೇಳಿದ.

"ರಾಜಕುವಾರ! ಅದಕ್ಕಿಂತ ಏನು ಬೇಕಾಗಿದೆ" ಗಟ್ಟಿಯಾಗಿ ಕಿರುಚಿ ಹೇಳಿದಳು.

"ನಿನ್ನನ್ನು ಗುಲಾಮಳನ್ನಾಗಿಸುತ್ತಾನೆ"

"ಸ್ವತಂತ್ರವಾಗಿರೋದೂಂದ್ರೇನೆ ನನಗೆ ಹೆದರಿಕೆ ಹುಟ್ಟುತ್ತೆ.

"ಏನಾದರಾಗಲಿ ಅವನ ವಿಚಾರದಲ್ಲಿ ಜಾಗರೂಕಳಾಗಿರು"

"ಅವನನ್ನು ನೋಡೋದೊಂದ್ರೆ ಪೂಜೆ ಮಾಡಿದ ಹಾಗೆ, ಅವನನ್ನು ತಿಳ್ಕೋಳ್ಳೊದೊಂದ್ರೆ ಅವನಲ್ಲಿ ನಂಬಿಕೆ ಇಡೋದು"

"ಸಿಬಿಲ್ ನೀನು ಅವನಿಗೆ ತುಂಬಾ ಮರುಳಾಗ್ಬಿಟ್ಟಿದ್ದೀ" ಸಿಬಿಲ್ ನಗುತ್ತಲೇ ಅವನ ತೋಳನ್ನು ಹಿಡಿದುಕೊಂಡಳು

"ಜಿಮ್ ನೀನು ಮಾತಾಡೋದು ಹೇಗಿರುತ್ತೇಂದ್ರೆ, ಏನೋ ನೂರು ವರ್ಷದ ವೃದ್ಧ ಮಾತಾಡ್ತಿರೋ ಹಾಗಿರುತ್ತೆ. ಒಂದಲ್ಲ ಒಂದು ದಿವಸ ನೀನೂ ಪ್ರೀತಿಗೆ ಬೀಳ್ತಿ ಆಗ ನಿನಗೆ ಪ್ರೀತಿ ಏನೊಂತ ಗೊತ್ತಾಗುತ್ತೆ. ಸಿಡುಕು ಮೋರೆತೋರ ಬೇಡ ನಿಜವಾಗಿ ನೀನು ಸಂತೋಷ ಪಡಬೇಕು. ಯಾಕೆ ಗೊತ್ತಾ< ನೀನು ನನ್ನಿಂದ ದೂರ ಹೋಗ್ತಿದ್ದರೂ ಹಿಂದೆಂದಿಗಿಂತಲೂ ಸಂತೊಷವಾಗಿರುವಂತೆ ಮಾಡಿದ್ದೀಯ. ಬದುಕು ನಮ್ಮಿಬ್ಬರಿಗೂ ಬಹಳ ಕಷ್ಟವಾಗಿಯೇ ಇತ್ತು. ಆದರೆಇನ್ನು ಮುಂದೆ ಹಾಗಿರೊಲ್ಲ. ನೀನೊಂದು ಹೊಸ ಜಗತ್ತಿನೆಡೆಗೆ ಹೋಗುತ್ತಿದ್ದೀಯ. ನಾನೂ ನನ್ನ ಜಗತ್ತೊಂದನ್ನು ಕಂಡುಕೊಂಡಿದ್ದೇನೆ. ಬಾ ಇಲ್ಲಿಎರಡು ಕುರ್ಚಿಗಳಿವೆ. ಕೂತು. ಚುರುಕಾಗಿ ಓಡಾಡುವ ಜನರನ್ನು ಗಮನಿಸೋಣ"

ಇಬ್ಬರೂ ಕುಳಿತು ಬಂದು ಹೋಗುತ್ತಿರುವವರನ್ನು ನೋಡುತ್ತಿದ್ದರು. ಸಿಬಿಲ್ ಜಿಮ್‌ನನ್ನು ಅವನ ಆಕಾಂಕ್ಷೆಗಳು, ಭವಿಷ್ಯದ ಯೋಜನೆಗಳ ಕುರಿತು ಹೇಳಲು ಒತ್ತಾಯಿಸಿದಳು. ಅವನೂ ನಿಧಾನವಾಗಿ ಪ್ರಯತ್ನ ಪೂರ್ವಕವಾಗಿ ಹೇಳತೊಡಗಿದ. ಸಿಬಿಲ್ ಕೂಡಾ ಮಧ್ಯೆ, ಮಧ್ಯೆತನ್ನ ಬಗ್ಗೆ ಮಾತಾಡಿದಳು. ಅವರಿಬ್ಬರ ನಡುವೆ ಮಾತುಕತೆ ಎನ್ನುವುದಕ್ಕಿಂತ ಹೆಚ್ಚಾಗಿ ಪದ ವಾಕ್ಯಗಳ ವಿನಿಮಯದಂತೆ ಇತ್ತು. ಸಿಬಿಲ್‌ಗೆ ತುಂಬ ಬೇಸರವಾಯಿತು. ತನ್ನ ಉಕ್ಕುತ್ತಿದ್ದ ಸಂತೋಷವನ್ನು ಇದರಿಂದಾಗಿ ಹಂಚಿಕೊಳ್ಳಲು ಸಾಧ್ಯವೇ ಆಗಲಿಲ್ಲ. ಮೌನವಾಗಿ ಕುಳಿತಿದ್ದಳು, ಇದ್ದಕ್ಕಿದ್ದಂತೆ ಎಚ್ಚರ ಗೊಂಡಳು. ಒಂದು ಗಾಡಿಯಲ್ಲಿ ಡೋರಿಯನ್ ಇಬ್ಬರು ಹೆಂಗಸರೊಂದಿಗೆ ಪ್ರಯಾಣಿಸುತ್ತಿದ್ದುದನ್ನು ಗಮನಿಸಿದಳು.

"ಅಗೋ ಅವನು ಅಲ್ಲಿ!" ಹರ್ಷೋದ್ಗಾರದಿಂದ ಹೇಳುತ್ತಾ ಎದ್ದು ನಿಂತಳು.

"ಯಾರು? ಜಿಮ್ ಕೇಳಿದ.

"ಪ್ರಿನ್ಸ್ ಚಾರ್ಮಿಂಗ್!"

ಥಟ್ಟನೆ ಎದ್ದು ಸಿಬಿಲ್‌ಳ ತೋಳನ್ನು ಹಿಡಿದು,

"ಯಾರುತೋರಿಸು ಅವನನ್ನು, ಎಲ್ಲಿದ್ದಾನೆ, ಹೇಗಿದ್ದಾನೆ, ಯಾವಕಡೆ ಇದ್ದಾನೆ? ಅವನನ್ನು ನಾನು ನೋಡಲೇ ಬೇಕು" ಎಂದು ಅಬ್ಬರಿಸಿ ಕೇಳಿದ. ಆದರೆ ಅಷ್ಟು ಹೊತ್ತಿಗೆ ಗಾಡಿ ಹೊರಟು ಹೋಗಿತ್ತು.

"ಅಯ್ಯೋ ಅವನು ಹೊರಟು ಹೋದ! ನೀನು ನೋಡಿದ್ದರೆ ಚೆನ್ನಾಗಿತ್ತು." ದುಃಖದಿಂದ ಹೇಳಿದಳು.

"ನೋಡಿದ್ದೇ ಆದರೆ, ನಾನು ನಂಬುತ್ತಿದ್ದೆ. ಆದರೆ ಒಂದು ತಿಳಿದುಕೋ ಅವನಿಂದ ನಿನಗೆ ಏನೇ ತೊಂದರೆ ಆದರೂ ಅವನನ್ನು ಸಾಯಿಸದೆ ಬಿಡೋದಿಲ್ಲ."

ಭಯಬೀತಳಾಗಿ, ಸಿಬಿಲ್ ಅವನೆಡೆ ನೋಡಿದಳು. ಹೇಳಿದ ಬೆರಿಕೆಯ ಮಾತುಗಳನ್ನು ಮತ್ತೆ ಪುನರುಚ್ಚರಿಸಿದ. ಸುತ್ತಲೂ ಇದ್ದ ಜನ ದುರುಗುಟ್ಟಿ ನೋಡಿದರು.

"ಬಾ ಜಿಮ್" ಎಂದು ಅವನ ರೆಟ್ಟೆ ಹಿಡಿದು ಎಳೆದು ಕೊಂಡು ಹೋದಳು. ಗುಂಪಿನ ನಡುವೆ ಹಾದು ಹೋದರು. ಜಿಮ್ ತಾನಾಡಿದ ಮಾತಿನಿಂದ ಸಂತೋಷಗೊಂಡಿದ್ದ.

ಸ್ವಲ್ಪದೂರ ನಡೆದು ಹೋದ ಮೇಲೆ ಅವನೆಡೆ ಮುಖಮಾಡಿದಳು. ಕಣ್ಣಲ್ಲಿದ್ದ ದಯನೀಯತೆ ತುಟಿಗಳ ಮೇಲೆ ನಗುವಾಗಿ ಹರಿಯಿತು.

"ನೀನೊಬ್ಬ ಮೂರ್ಖ! ನಿಜವಾಗಿಯೂ ಮೂರ್ಖನೇ! ಸಾಲದ್ದಕ್ಕೆ ಮುಂಗೋಪಿ ಬೇರೆ! ಕ್ರೂರವಾದ ಇಂಥ ಮಾತುಗಳನ್ನು ಆಡುವುದಕ್ಕಾದರೂ ನಿನಗೆ ಹೇಗೆ ಮನಸು ಬಂತು? ಏನು ಮಾತಾಡ್ತಾ ಇದ್ದೀ ಅನ್ನೋದು ನಿನಗೇ ಗೊತ್ತಿಲ್ಲ. ನೀನು ಪ್ರೀತಿ ಮಾಡಿದ್ದರೆ ಎಷ್ಟು ಚೆನ್ನಅಂತ ಅನಿಸುತ್ತೆ! ಪ್ರೀತಿ ಜನರನು ಒಳ್ಳೆಯವರನ್ನಾಗಿಸುತ್ತೆ. ಆದರೆ ನೀನಾಡಿದ ಮಾತುಗಳು ಮಾತ್ರ ಭಯಂಕರ!"

"ನನಗೂ ಹದಿನಾರು ವರ್ಷ ಆಗಿದೆ, ನಾನು ಏನೂಂತ ನನಗೆ ಗೊತ್ತು. ತಾಯಿಯಿಂದ ನಿನಗೆ ಯಾವ ಪ್ರಯೋಜನವೂ ಇಲ್ಲ. ನಿನ್ನನ್ನು ಹೇಗೆ ನೋಡ್ಕೋಬೇಕು ಅನ್ನೋದೂ ಗೊತ್ತಿಲ್ಲ. ಈಗ ಅನ್ನಿಸ್ತಾ ಇದೆ, ಆಸ್ಟ್ರೇಲಿಯಾಗೆ ಹೋಗಬಾರದಿತ್ತು ಅಂತ. ಆದರೆ ಹೋಗೊದಕ್ಕೆ ಕಮಿಟ್ ಮಾಡಿಕೊಂಡು ಬಿಟ್ಟಿದ್ದೇನೆ"

"ಅಷ್ಟೊಂದು ಸೀರಿಯಸ್ ಆಗ ಬೇಡ. ಅಮ್ಮ ಹೇಗೇಂದ್ರೆ ಮೆಲೊಡ್ರಾಮಗಳಲ್ಲಿನ ತಾಯಂದಿರು, ತಮ್ಮ ಮಕ್ಕಳನ್ನು ತುಂಬಾ ಪ್ರೀತಿಸುವಂತೆ ನಟಿಸುವ ನಟಿಯರಂತೆ, ನಿನ್ನ ಜೊತೆ ಜಗಳ ಮಾಡೋದಿಲ್ಲ. ನಾನು ಅವನನ್ನು ನೋಡಿದ್ದೇನೆ. ನೋಡೋದೇ ನನಗೆ ಒಂದು ದೊಡ್ಡ ಸಂತೋಷ. ನಾವು ಜಗಳ ಮಾಡೋದು ಬೇಡ. ನಾನು ಪ್ರೀತಿಸುವವನಿಗೆ ಯಾವರೀತಿಯಲ್ಲೂ ತೊಂದರೆ ಕೊಡ ಬೇಡ. ಕೊಡೋದಿಲ್ಲ ತಾನೆ?"

"ಅವನು ನಿನ್ನನ್ನು ಪ್ರೀತಿಯಿಂದ ನೋಡ್ಕೋಳ್ಳೋವರೆಗೂ ನಾನೇನು ಮಾಡೊಲ್ಲ" ಮುಖ ಊದಿಸಿಕೊಂಡೇ ಹೇಳಿದ.

"ಎಂದಿಗೂ ನನ್ನನ್ನು ಪ್ರೀತಿಸುತ್ತಲೇ ಇರ್ತಾನೆ ನಾನೂ ಅವನನ್ನು ನನ್ನ ಉಸಿರು ಇರೋ ತನಕ ಪ್ರೀತಿಸ್ತೇನೆ."

"ಸರಿ ಹಾಗಾದರೆ"

ಅವನಿಂದ ದೂರ ಬಂದು ಮುದುಡಿ ನಿಂತಳು. ನಕ್ಕು ತನ್ನ ಕೈಯನ್ನು ಅವನ ತೋಳಿನ ಮೇಲೆ ಇರಿಸಿದಳು. ಅವನು ಇನ್ನೂ ಹುಡುಗನೇ ಆಗಿದ್ದ.

ಸ್ವಲ್ಪದೂರ ನಡೆದು, ಒಂದು ಬಸ್ ಹಿಡಿದು ತಮ್ಮ ಮನೆಗೆ ಹತ್ತಿರವಿದ್ದ ಯೂಸ್ರೆನ್‌ರೋಡಲ್ಲಿ ಇಳಿದರು. ಆಗಲೆ ಐದುಗಂಟೆ ಆಗಿತ್ತು. ಷೋ ಶುರುವಾಗೋಕೆ ಮುಂಚೆ ಒಂದೆರಡುಗಂಟೆ ವಿಶ್ರಾಂತಿ ತಗೋಬೇಕು ಎನಿಸಿತು. ಜಿಮ್ ಅವಳಿಗೆ ಹಾಗೇ ಮಾಡೇಂದು ಹೇಳಿದ. ಜೊತೆಗೆ ಅವಳು ಹಿಂತಿರುಗಿ ಬರುವುದಕ್ಕೆ ಮೊದಲೇ ಅದೂ ಅಮ್ಮ ಮನೇಲಿ ಇಲ್ಲದಿರುವಾಗ, ಹೊರಟುಬಿಡುವುದಾಗಿಯೂ ತಡವಾದರೆ ತಾಯಿ ಸೃಷ್ಟಿಸುವ ಸೀನುಗಳನ್ನು ತನಗೆ ನೋಡಲು ಅಸಹ್ಯವಾಗುವುದಾಗಿಯೂ ತಿಳಿಸಿದ.

ಸಿಬಿಲ್ ಕೋಣೆಯಿಂದಲೇ ಇಬ್ಬರೂ ಬೋಳ್ಕೋಂಡರು. ಜಿಮ್‌ನ ಎದೆಯಲ್ಲಿ ಭಯಂಕರ ಸಿಟ್ಟು, ಅಸೂಯೆಗಳು ಅಪರಿಚಿತ ಯುವಕನ ಮೇಲಿತ್ತು. ಅಕ್ಕ ತಮ್ಮನ ಮಧ್ಯ ಪ್ರವೇಶಿಸಿದ್ದಕ್ಕಾಗಿ ಅವನಿಗೆ ಸಿಟ್ಟು ಆದರೂ ಅವಳು ತಮ್ಮನ ಕೊರಳ ಸುತ್ತ ತೋಳುಗಳನ್ನಿರಿಸಿ ಮುತ್ತು ಕೊಟ್ಟಳು. ಅವನೂ ನಿಜವಾದ ಪ್ರೀತಿಯೊಂದಿಗೆ ಪ್ರತಿಯಾಗಿ ಮುದ್ದಿಸಿದ. ಅವಳಿಂದ ಸರಿದಾಗ ಅವನ ಕಣ್ಣುತುಂಬಿತ್ತು.

ಸ್ವಲ್ಪಹೊತ್ತಿನ ನಂತರ ಊಟದ ಪ್ಲೇಟನ್ನು ಬಲವಂತದಿಂದ ಪಕ್ಕಕ್ಕೆ ತಳ್ಳಿದ. ತಲೆಯನ್ನು ಕೈಗಳ ಮೇಲಿರಿಸಿದ. ಅವಳು ಮೊದಲೇ ತನಗೆ ತಿಳಿಸಬೇಕಿತ್ತು. ಅದನ್ನು ತಿಳಿದು ಕೊಳ್ಳೋ ಹಕ್ಕು ತನಗೂ ಇದೆ ಎಂದು ಭಾವಿಸಿದ. ತನ್ನಲ್ಲಿ ಅವನ ಬಗ್ಗೆ ಅನುಮಾನ ಹುಟ್ಟುವುದಕ್ಕೆ

ಮೊದಲೇ ಹೇಳ ಬೇಕಿತ್ತು ಎಂತಲೇ ಭಾವಿಸಿದ. ಅವನ ತಾಯಿ ಅವನನ್ನು ಹೆದರಿಕೆಯಿಂದಲೇ ಗಮನಿಸುತ್ತಿದ್ದಳು. ಆರುಗಂಟೆ ಹೊಡೆದಾಗ ಅವನೆದ್ದು ಬಾಗಿಲ ಬಳಿ ಹೋದ, ಮತ್ತೆ ಅಮ್ಮನತ್ತ ತಿರುಗಿ ನೋಡಿದ. ಇಬ್ಬರ ಕಣ್ಣೂ ಕೂಡಿದವು. ಅವಳ ಕಣ್ಣಲ್ಲಿ ದಯೆ ತೋರಿಸುವಂತೆ ಬೇಡಿಕೊಳ್ಳುವ ಭಾವನೆಯಿತ್ತು. ಅವನನ್ನು ಇನ್ನೂ ರೇಗಿಸಿತು, ಆ ನೋಟ!

"ಅಮ್ಮ ನಿನ್ನನ್ನು ಒಂದು ವಿಷಯ ಕೇಳಬೇಕಂತಿದ್ದೇನೆ." ಅವಳು ಕೋಣೆಯಲ್ಲಿ ಕಣ್ಣಾಡಿಸಿದಳೇ ಹೊರತಾಗಿ ಮಾತಾಡಲಿಲ್ಲ. ನಿಜ ಹೇಳು, ನನಗೆ ಕೇಳೋ ಹಕ್ಕಿದೆ. ನನ್ನ ತಂದೆಯನ್ನು ನೀನು ಮದುವೆಯಾಗಿದ್ದೆಯೇನು, ಒಂದು ಧೀರ್ಘ ನಿಟ್ಟಿಸಿರು ಬಿಟ್ಟಳು. ಅದೊಂದು ರೀತಿಯ ಬಿಡುಗಡೆಯಾಗಿತ್ತು. ಇಂಥ ಪ್ರಶ್ನೆಯನ್ನು ವಾರ, ತಿಂಗಳು ವರ್ಷಗಳಿಂದ ಎದುರು ನೋಡುತಿದ್ದಳು, ಅಂತೂ ಕಡೆಗೆ ಈಗಾಲಾದರೂ ಬಂತಲ್ಲ ಎಂದುಕೊಂಡಳು. ಇದರಿಂದ ಅವಳಿಗೆ ಹೆದರಿಕೆಯಾಗಲಿಲ್ಲ. ಆದರೆ ನಿರಾಶೆಯಾಯಿತು. ನೇರವಾಗಿ ಬಂದ ಪ್ರಶ್ನೆಗೆ ನೇರ ಉತ್ತರ ಬೇಕಾಗಿತ್ತು. ಪ್ರಶ್ನೆ ಎದುರಾದ ರೀತಿ ಮಾತ್ರ ಒರಟಾಗಿತ್ತು. ಅವಳಿಗೆ ಅದು ಕೆಟ್ಟದಾದ ರಿಹರ್ಸಲ್ ಇದ್ದಂತಿದೆ ಎನಿಸಿತು

"ಇಲ್ಲ" ಎಂದಳು. ಹಾಗಾದರೆ ನನ್ನ ತಂದೆ ಒಬ್ಬ ದುಷ್ಟ ಇದ್ದಿರಬೇಕು ಎಂದು ಮುಷ್ಠಿ ಬಿಗಿ ಹಿಡಿದ, ಅವನು ಬದುಕಿದ್ದರೆ ನಮಗೆ ಏನಾದರೂ ವ್ಯವಸ್ಥೆ ಮಾಡ್ತಿದ್ದ"

"ಹಾಗೆಲ್ಲ ಮಾತಾಡಬೇಡ ಮಗನೇ. ಅವನು ನಿನ್ನ ತಂದೆ. ಬಹಳ ಸಜ್ಜನ. ತುಂಬ ಅನುಬಂಧ ಇರಿಸಿಕೊಂಡಿದ್ದ."

"ನನಗೆ ನನ್ನ ಬಗ್ಗೆ ಚಿಂತೆಯಿಲ್ಲ. ಆದರೆ ಸಿಬಿಲ್‌ಳನ್ನು... ಅವನು ಸಭ್ಯ ಇರಬೇಕಲ್ಲ.

ಅಥವಾ ಅವನೇ ತನ್ನನ್ನು ಹಾಗಂತ ಹೇಳ್ಕೊಂಡಿದ್ದಾನಾ? ತುಂಬಾನೇ ಹತ್ತಿರದವನಾಗಿರಬೇಕಲ್ಲ!"

ಒಂದು ಕ್ಷಣ ಜೇಮ್‌ನ ತಾಯಿಗೆ ಅವನ ಮಾತುಗಳು ತುಂಬ ಅವಮಾನಕರ ಎನಿಸಿತು. ತಲೆ ತಗ್ಗಿಸಿ, ಕರವಸ್ತ್ರದಿಂದ ಕಂಬನಿ ಒರೆಸಿಕೊಂಡಳು ಸಿಬಿಲ್‌ಗೆ ತಾಯಿ ಅಂತ ಒಬ್ಬಳಿದ್ದಾಳೆ, ಆದರೆ ನನಗೆ ಯಾರೂ ಇರಲಿಲ್ಲ."

ಅವನ ಹೃದಯ ಕರಗಿತು. ಅವಳ ಬಳಿಗೆ ಹೋದ. ಪ್ರೀತಿಯಿಂದ ತುಟಿಯ ಮೇಲೆ ಮುದ್ದಿಸಿದ. ಅಪ್ಪನ ಬಗ್ಗೆ ಕೇಳಿ ನಿನಗೆ ನೋವುಂಟುಮಾಡಿದೆ, ದಯವಿಟ್ಟು ನನ್ನನ್ನು ಕ್ಷಮಿಸು. ಆದರೆ ಏನು ಮಾಡಲಿ. ಕೇಳದೆ ಇರೋಕೆ ನನ್ನ ಕೈಲಾಗಲಿಲ್ಲ. ಇನ್ನೇನು ಹೊರಡಬೇಕಿದೆ. ಗುಡ್ ಬೈ ಅಮ್ಮ, ಕಡೆಯದಾಗಿ ಒಂದು ಮಾತು – ನನ್ನ ಸೋದರಿ ಸಿಬಿಲ್‌ಗೆ ಏನೂ ಆಗದ ಹಾಗೆ ನೋಡಿಕೊ. ಅವಳಿಗೇನಾದರೂ ಅವನಿಂದ ತೊಂದರೆ ಆದರೆ, ನನಗೆ ಹೇಗೋ ಗೊತ್ತಾಗುತ್ತೆ. ಅವನನ್ನು ಜೀವ ಸಹಿತ ಉಳಿಸೊಲ್ಲ – ಇದು ನನ್ನ ಪ್ರತಿಜ್ಞೆ,

ಅವನ ಬೆದರಿಕೆ ಮಾತು, ಅದರಾಳದಲ್ಲಿನ ಪ್ರೀತಿ, ಶಬ್ದಗಳಲ್ಲಿನ ಭಾವೋದ್ರೇಕತೆ, ಬದುಕನ್ನು ಅವಳ ಕಣ್ಮುಂದೆ ಸ್ಪಷ್ಟವಾಗಿ ತೆರೆದಿರಿಸಿತು. ಒಂದು ನಿರಾಳತೆಯ ವಾತಾವರಣ

ಮನಸ್ಸಿಗೆ ಬಂತು. ಮೊಟ್ಟ ಮೊದಲ ಬಾರಿಗೆ ತಿಂಗಳುಗಳ ನಂತರ, ತನ್ನ ಮಗನನ್ನು ಮುಕ್ತವಾಗಿ ಮೆಚ್ಚಿಕೊಂಡಳು. ಇನ್ನೂ ಅವನು ಇದೇ ರೀತಿ ಮುಂದುವರೆಯಲಿ ಅಂತ ಬಯಸಿದಳು. ಆದರೆ ಅವನು ಅಲ್ಲಿಗೇ ನಿಲ್ಲಿಸಿದ. ಅವನು ಹೊರಡಲು, ಮನೆಯಲ್ಲಿದ್ದ ಟ್ರಂಕುಗಳು ಮತ್ತು ಇತರೆ ವಸ್ತುಗಳನ್ನು ಹೊರಗಿರಿಸಬೇಕಿತ್ತು. ಒಳಗೆ ಹೊರಗೆ ಓಡಾಡಿದ. ಎಲ್ಲ ವಸ್ತುಗಳನ್ನು ಹೊರಗೆ ತಂದಿರಿಸಿದ ಮೇಲೆ ಕ್ಯಾಬ್‌ನವನನ್ನು ಬರಲು ಹೇಳಿದ. ಕ್ಯಾಬ್ ಹತ್ತಿ ಕುಳಿತ ಮೇಲೆ ಶ್ರೀಮತಿ ವೇನ್ ತನ್ನ ಕರವಸ್ತ್ರವನ್ನು ಬೀಸಿ ಬೀಳ್ಕೊಟ್ಟಳು.

ಎಂಥೆಂಥ ಒಳ್ಳೆ ಅವಕಾಶಗಳನ್ನು ಕಳೆದುಕೊಂಡದ್ದು ನೆನಪಾಯಿತು. ತನ್ನ ಬದುಕು ಏನಾಗುತ್ತಿತ್ತೆಂಬುದನ್ನು ಸಿಬಿಲ್‌ಗೆ ವಿವರಿಸಿದಳು. ಈಗ ತನಗೆ ನೋಡಿಕೊಳ್ಳಲು ಒಂದು ಮಗು ಮಾತ್ರವೇ ಇದೆ. ಅನ್ನುವುದು ಸಂತೋಷಕ್ಕೆ ಕಾರಣವಾಯಿತು. ಅವನು ಹೇಳಿದ ಬೆದರಿಕೆಯ ವಿಷಯವನ್ನು ಮಾತ್ರ ಅವಳಿಗೆ ಹೇಳಲಿಲ್ಲ.

❖

# ಅಧ್ಯಾಯ - 6

“ಬೇಸಿಲ್ ನಿನಗೆ ಸುದ್ದಿ ಏನಾದರೂ ತಿಳೀತೇ? ಲಾರ್ಡ್ ಹೆನ್ರಿ ಬ್ರಿಸ್ಟೂಲ್‌ನಲ್ಲಿ ಊಟದ ಮೇಜಿನ ಮುಂದೆ ಕುಳಿತಿದ್ದಾಗ ಕೇಳಿದ.”

“ಇಲ್ಲ ಹ್ಯಾರಿ” ಎಂದು ತನ್ನ ಹ್ಯಾಟ್ ಮತ್ತು ಕೋಟನ್ನು ವೈಟರ್ ಕೈಗೆ ಕೊಡುತ್ತಾ ಹೇಳಿದ. “ಯಾವುದರ ಬಗ್ಗೆ? ಪಾಲಿಟಿಕ್ಸ್ ಅಲ್ಲ ತಾನೇ? ಅದೆಲ್ಲ ಕೇಳೋಕೆ ನನಗೆ ಇಷ್ಟ ಇಲ್ಲ. ರಾಜಕಾರಣಿಗಳಲ್ಲಿ ಒಬ್ಬರಾದರೂ ನನ್ನ ಭಾವಚಿತ್ರ ಸೃಷ್ಟಿಗೆ ಯೋಗ್ಯರಿದ್ದಾರಾ? ಅವರೆಲ್ಲ ಸುಣ್ಣ ಬಳಿಯೋಕಷ್ಟೇ ಲಾಯಕ್ಕು.

“ಡೋರಿಯನ್ ಗ್ರೇಗೆ ಮದುವೆ ನಿಶ್ಚಯ ಆಗಿದೆ” ಬೇಸಿಲ್‌ನನ್ನು ಗಮನಿಸುತ್ತಲೇ ಹೇಳಿದ. ಹಾಲ್‌ವಾರ್ಡ್ ಬೆಚ್ಚಿಬಿದ್ದ. ಸಿಟ್ಟು ತಂದುಕೊಂಡು”

“ಏನು ಡೋರಿಯನ್ ಮದುವೆಯಾಗುತ್ತಾನೆಯೇ? ಸಾಧ್ಯವೇ ಇಲ್ಲ!”

“ ಇದು ಸತ್ಯಸ್ಯ ಸತ್ಯ”

“ಯಾರ ಜೊತೆ?”

“ಯಾರೋ ಒಬ್ಬ ಸಾಮಾನ್ಯ ನಾಟಕ ಕಲಾವಿದೆ”

“ನನಗೆ ನಂಬೋಕೇ ಆಗ್ತಾ ಇಲ್ಲ ಅವನಿಗೆ ಏನೂ ಅರ್ಥವಾಗೊಲ್ಲ”

“ಡೋರಿಯನ್ ನೀನು ಅಂದುಕೊಂಡದ್ದಕ್ಕಿಂತ ಬಹಳ ಬುದ್ಧಿವಂತ. ಹುಚ್ಚು ಕೆಲಸಗಳು ಮಾಡುವಷ್ಟು ದಡ್ಡನಲ್ಲ. ಬೇಸಿಲ್”

“ಮದುವೆ ಅನ್ನೋದು ಯಾವಾಗಂದ್ರೆ ಆವಾಗ ಮಾಡುವಂಥಾದ್ದಲ್ಲ ಹ್ಯಾರಿ”

“ಅಮೇರಿಕಾ ಹೊರತುಪಡಿಸಿ” ಹೆನ್ರಿ ಬೇಸಿಲ್‌ನ ಮಾತಿಗೆ ಸೇರಿಸಿದ.

“ನಾನು ಹೇಳಿದ್ದು ಮದುವೆ ನಿಶ್ಚಯ ಆಗಿದೆ ಅಂತ ಹೇಳಿದನೇ ಹೊರತು ಮದುವೆ ಆಗಿದೆ ಅಂತ ಅಲ್ಲ. ಈ ಎರಡು ಮಾತುಗಳಲ್ಲಿ ಅಂತರ ಇದೆ. ನನಗೆ ಮದುವೆ ಆದದ್ದು ಸ್ವಲ್ಪನಾದರೂ ನೆನಪಿದೆಯೇ ಹೊರತು ಎಂಗೇಜ್‌ಮೆಂಟ್ ಅಂಥಾದ್ದೇನೂ ನೆನಪಿದ್ದಂಗಿಲ್ಲ ಬಹುಶಃ ಅಂಥಾದ್ದೇನೂ ನನ್ನ ವಿಷಯದಲ್ಲಿ ನಡೆದದ್ದಿಲ್ಲಾಂತಲೇ ಅನಿಸುತ್ತೆ.

“ಡೋರಿಯನ್ ಗ್ರೇನ ಹಿನ್ನೆಲೆ, ಶ್ರೀಮಂತಿಕೆ ಸಮಾಜದಲ್ಲಿನ ಪ್ರತಿಷ್ಠೆ ಇದೆಲ್ಲ ಯೋಚನೆ ಮಾಡಿದರೆ ನಾಟಕದವಳನ್ನು ಮದುವೆ ಆಗೋದು, ಅವನಂಥವನಿಗೆ ಸರಿಯಿರೊಲ್ಲ.”

“ಆ ಹುಡುಗಿಯನ್ನೇ ಮದುವೆ ಆಗಬೇಕು ಅನ್ನೋದಾದರೆ, ಇದನ್ನು ಅವನಿಗೆ ಹೇಳಿ ನೋಡು ಬೇಸಿಲ್. ನೀನು ಹೇಳಿದ್ದು ಕೇಳಬಹುದು. ಯಾರಾದರೂ ಇಂಥ ಸ್ಟುಪಿಡ್ ಕೆಲಸ ಮಾಡೋಕೆ ಮುಂದಾದ ಅಂದರೆ ಅದರ ಹಿಂದೆ” ಒಳ್ಳೆಯ ಉದ್ದೇಶ ಇದ್ದರೂ ಇರಬಹುದು” “ಹೋಗಲಿ ಹುಡುಗಿಯಾದರೂ ಒಳ್ಳೆಯವಳೇನು? ಡೋರಿಯನ್ ಯಾವಳೋ ಕೆಲಸಕ್ಕೆ ಬಾರದವಳಿಗೆ ಗಂಟು ಬೀಳಬಾರದು. ಹಾಗಾದರೆ ಅವನ ಬುದ್ಧಿವಂತಿಕೆ ಅವನ ವ್ಯಕ್ತಿತ್ವ ಎಲ್ಲ ಹಾಳಾಗಿ ಹೋಗುತ್ತೆ.”

“ಒಳ್ಳೆಯವಳು ಅನ್ನೋದಕ್ಕಿಂತ ಹೆಚ್ಚೇ. ಜೊತೆಗೆ ಬಹಳ ಸುಂದರವಾಗಿದ್ದಾಳೆ” ಎಂದು ಜ್ಯೂಸ್ ಕುಡಿಯುತ್ತಾ ಹೇಳಿದ. “ಡೋರಿಯನ್ ಸ್ವತಃ ಅವಳ ಸೌಂದರ್ಯದ ಬಗ್ಗೆ ಹೇಳಿದ. ಇಂಥ ವಿಚಾರಗಳಲ್ಲಿ ಅವನು ಎಂದೂ ತಪ್ಪು ಮಾಡೊಲ್ಲ. ನೀನು ಮಾಡಿದ ಭಾವಚಿತ್ರದಿಂದ ವ್ಯಕ್ತಿಗಳ ಚಹರೆಗಳಿಂದಲೇ ಅವರನ್ನು ಅರ್ಥಮಾಡಿಕೊಳ್ಳುವುದರಲ್ಲಿ! ಮೆಚ್ಚಿಕೊಳ್ಳುವುದರಲ್ಲಿ ಬಹಳ ಸ್ಮಾರ್ಟಾಗಿ ಬಿಟ್ಟಿದ್ದಾನೆ. ಅವನ ಈ ನಿಲುವು ಬೇರೆಯವರೂ ಮೆಚ್ಚಿಕೊಳ್ಳುವಂತಾಗಿದೆ. ಆ ಹುಡುಗ, ಕೊಟ್ಟ ಮಾತಿನಂತೆ ನಡೆದುಕೊಂಡರೆ, ಅವಳನ್ನು ಇವತ್ತು ರಾತ್ರಿಗೆ ನೋಡಬಹುದು.”

“ನಿಜವಾಗಿಯೂ ಹೇಳ್ತಿದ್ದೀಯಾ?”

“ಖಂಡಿತ ಸತ್ಯ< ಸೀರಿಯಸ್ಸಾಗಿಯೇ ಹೇಳ್ತಿದ್ದೀನಿ ಇವತ್ತು. ಸೀರಿಯಸ್ಸಾಗಿ ಹೇಳ್ತಿರುವಷ್ಟು ಹಿಂದೆಂದೂ ಇಲ್ಲ.”

“ನಿನಗೆ ಒಪ್ಪಿಗೆಯೇ ಹ್ಯಾರಿ?” ಕೋಣೆಯಲ್ಲಿ ಅಡ್ಡಾಡುತ್ತಾ ಕೇಳಿದ ಬೇಸಿಲ್.

“ನಿನಗೆ ಒಪ್ಪಿಗೆಯಾಗಲಾರದು ಅನ್ನೋದು ನನ್ನ ಭಾವನೆ. ಯಾಕೆಂದರೆ ಇದೊಂದು ಥರ ಪ್ರೇಮೋನ್ಮಾದ”

“ನಾನು ಈಗ ಒಪ್ಪೋದು, ಬಿಡೋದು ಮುಖ್ಯವಲ್ಲ. ಜೀವನವನ್ನು ಹಗುರವಾಗಿ ತೆಗೆದುಕೊಳ್ಳುವ ಪ್ರವೃತ್ತಿಯಾಗಿರುತ್ತೆ. ನಾವು ಪ್ರಪಂಚಕ್ಕೆ ಬಂದಿರೋದು ನಮ್ಮ ನೈತಿಕ

ಪೂರ್ವಗ್ರಹಗಳನ್ನು ಬಿಂಬಿಸೋದಕ್ಕಲ್ಲ. ಸಾಮಾನ್ಯ ಜನರು ಏನು ಮಾತಾಡ್ತಾರೆ ಅನ್ನೋದರ ಬಗ್ಗೆ ನಾನು ಗಮನ ಕೊಡೊಲ್ಲ. ಆಕರ್ಷಣೀಯ ವ್ಯಕ್ತಿಗಳು ಏನು ಮಾಡ್ತಾರೆ ಅನ್ನೋದರ ಮಧ್ಯೆ ಪ್ರವೇಶ ಮಾಡೋದಿಲ್ಲ. ಯಾರಾದರೂ ನನಗೆ ಇಷ್ಟ ಆದರೆ, ಅವರು ಯಾವುದೇ ರೀತಿಯಲ್ಲಿ ತಮ್ಮ ವ್ಯಕ್ತಿತ್ವದ ಅಭಿವ್ಯಕ್ತಿಯನ್ನು ಆಯ್ಕೆ ಮಾಡ್ಕೋತ್ತಾರೊ ಅದೆಲ್ಲವೂ ನನಗೆ ಖುಷಿ ಕೊಡುತ್ತೆ. ಡೋರಿಯನ್ ಗ್ರೇ ನಾಟಕದಲ್ಲಿ ಪಾತ್ರ ಮಾಡುವ ಹುಡುಗಿಯನ್ನು ಪ್ರೀತಿಸಿ ಮದುವೆ ಆಗಬೇಕೂಂತ ನಿರ್ಧಾರ ತಗೋತಾನೆ. ತೊಗೊಳ್ಳಿ. ಯಾಕೆ ತಗೋಬಾರದು? ನಿನಗೇ ಗೊತ್ತು ಮದುವೆ ವಿಚಾರದಲ್ಲಿ ಅನುಭವ ಇಲ್ಲದಿರುವವನು ನಾನು. ಮದುವೆ ಅನ್ನೋದರಲ್ಲಿ ಇರುವ ಒಂದೇ ಒಂದು ಕೊರತೆ ಏನು ಅಂದರೆ, ಅದು ವ್ಯಕ್ತಿಯನ್ನು ಸ್ವಾರ್ಥವಿಲ್ಲದಂತೆ ಮಾಡುತ್ತೆ. ಸ್ವಾರ್ಥವೇ ಇಲ್ಲದ ಮನುಷ್ಯರು ನಿಜವಾಗಿಯೂ ಆಸಕ್ತಿ ಹುಟ್ಟಿಸೋದೇ ಇಲ್ಲ. ಅವರಿಗೆ ತಮ್ಮದೇ ಆದ ವ್ಯಕ್ತಿತ್ವ ಇರೋದಿಲ್ಲ. ಆದರೂ ಅವರ ಕೆಲವು ಸ್ವಭಾವಗಳು ಮದುವೆಯನ್ನು ಸಂಕೀರ್ಣಗೊಳಿಸುತ್ತವೆ. ತಮ್ಮ ಅಭಿಮಾನ, ಅಹಂಗಳನ್ನು ಮತ್ತೆ ಪಡೆಯುವುದರ ಜೊತೆಗೆ ಬೇರೆ ಬೇರೆ ವಿಚಾರ ಸಂಬಂಧಿ ಅಹಂಗಳನ್ನು ಸೇರಿಸಿಕೊಳ್ಳುತ್ತಾರೆ. ಪ್ರತಿಯೊಂದು ಅನುಭವವೂ ಮೌಲಿಕವಾದದ್ದೆ. ಡೋರಿಯನ್ ಗ್ರೇ ಈ ಹುಡುಗಿಯನ್ನು ಹೆಂಡತಿಯನ್ನಾಗಿ ಮಾಡಿಕೊಳ್ಳುತ್ತಾನೆ. ಅತಿಯಾಗಿ ಪ್ರೀತಿಸುತ್ತಾನೆ. ಒಂದು ಆರು ತಿಂಗಳು ಹೀಗೆ ಇದ್ದ ಮೇಲೆ, ಇದ್ದಕ್ಕಿದ್ದಂತೆ ಒಂದು ದಿನ ಮತ್ಯಾರದೊ ಆಕರ್ಷಣೆಗೆ ಒಳಗಾಗಿ ಬಿಡ್ತಾನೆ. ಅವನು ಅಧ್ಯಯನಕ್ಕೆ ಒಳ್ಳೆ ಸ್ಪೆಸಿಮೆನ್ ಆಗ್ತಾನೆ."

"ಹ್ಯಾರಿ ನೀನು ಹೇಳ್ತಾ ಇರೋ ಇದೆಲ್ಲ ನಿಜ ಅಲ್ಲ ಅಂತ ನನಗೆ ಗೊತ್ತು. ನಿನಗೂ ಗೊತ್ತು ಡೋರಿಯನ್ ಗ್ರೇನ ಜೀವನ ಹಾಳಾದರೆ ಎಲ್ಲರಿಗಿಂತ ಹೆಚ್ಚಿಗೆ ಸಂಕಟ ಪಡುವವನು ನೀನೇ. ಯಾಕೆಂದರೆ ಎಲ್ಲರಿಗಿಂತ ಹೆಚ್ಚಾಗಿ ಅವನನ್ನು ಪ್ರೀತಿಸುವವನು ನೀನೇ ಆಗಿದ್ದೀ!

ಲಾರ್ಡ್ ಹೆನ್ರಿ ನಕ್ಕ. ನಾವೆಲ್ಲ ಬೇರೆಯವರ ಬಗ್ಗೆ ಒಳಿತನ್ನು ಯೋಚಿಸೋದಕ್ಕೆ ಕಾರಣ ಏನೂಂದ್ರೆ ನಮಗೆ ನಾವೇ ಹೆದರಿಕೊಳ್ತೇವೆ. ಆಶಾವಾದದ ಮೂಲದಲ್ಲಿ ಇರೋದು ಭಯ. ನಮ್ಮ ಅಕ್ಕಪಕ್ಕದವರನ್ನು ಹೊಗಳುವುದರಲ್ಲಿ ನಮ್ಮ ಸ್ವಾರ್ಥವಿರುತ್ತೆ. ಬ್ಯಾಂಕರ್‌ನ ಹೊಗಳೋದು ಯಾಕೇಂದ್ರೆ ನಾವು ಓವರ್ ಡ್ರಾ ಮಾಡಬಹುದಾದಂತ ದಾರಿಗಳನ್ನು ಹೊಗೊಳೋದು ಯಾಕೇಂದ್ರೆ ನಮ್ಮಲ್ಲಿರುವ ಹಣ ಸುಲಿಗೆ ಮಾಡದಿರಲಿ ಅಂತ! ನಾನು ಏನೆಲ್ಲ ಹೇಳಿದೆ ಅದೆಲ್ಲ ನಿಜ. ಆಶಾವಾದದ ಬಗ್ಗೆ ನನಗೆ ನಂಬಿಕೆ ಇಲ್ಲ... ಡೋರಿಯನ್ ಇಲ್ಲೇ ಇದ್ದಾನೆ ನೋಡು! ನಾನು ಹೇಳಿದ್ದಕ್ಕಿಂತ ಹೆಚ್ಚಾಗಿ ಅವನೇ ಹೇಳ್ತಾನೆ."

"ಪ್ರೀತಿಯ ಹ್ಯಾರಿ, ಪ್ರೀತಿಯ ಬೇಸಿಲ್ ನೀವಿಬ್ಬರೂ ನನಗೆ ಕಂಗ್ರಾಜ್ಯುಲೇಷನ್ ಹೇಳಬೇಕು ಎಂದು ಇಬ್ಬರು ಗೆಳೆಯರನ್ನೂ ಬೆನ್ನ ಮೇಲೆ ಕೈಗಳಿಟ್ಟು ಅಲ್ಲಾಡಿಸಿದ.

"ಈಗಿರುವಷ್ಟು ಸಂತೋಷ ಯಾವತ್ತೂ ಅನುಭವಿಸಿರಲಿಲ್ಲ. ಆದರೆ ಇದೆಲ್ಲ ನಿರೀಕ್ಷಿಸದೆ ದೊರೆತದ್ದು. ಜೀವನದಲ್ಲಿ ಯಾವುದಕ್ಕಾಗಿ ಇಷ್ಟೂ ದಿವಸ ಕಾಯುತ್ತಿದ್ದೆನೋ ಅದು ಈಗ ಸಿಕ್ಕಿದೆ ಸಂತೋಷ, ನಾಚಿಕೆಗಳಿಂದ ಕೆನ್ನೆ ಕೆಂಪಾಯಿತು. ಈ ಕ್ಷಣದಲ್ಲಿ ಅದ್ವಿತೀಯ ಸೌಂದರ್ಯ ಅವನಲ್ಲಿ ಕಾಣಿಸಿತು.

"ಡೋರಿಯನ್, ಸದಾ ಹೀಗೆ ಸಂತೋಷವಾಗಿಯೇ ಇರುತ್ತೀಯ ಎಂದು ಭಾವಿಸುತ್ತೇನೆ. ಆದರೆ ನಿನ್ನ ಎಂಗೇಜ್‌ಮೆಂಟ್ ವಿಷಯವನ್ನು ನನ್ನಿಂದ ಮುಚ್ಚಿಟ್ಟದ್ದನ್ನು ನಾನು ಕ್ಷಮಿಸಲಾರೆ. ಹ್ಯಾರಿಗೆ ಮಾತ್ರ ಹೇಳಿದೆ."

"ನೀನು ಡಿನ್ನರ್‌ಗೆ ತಡವಾಗಿ ಬಂದದ್ದನ್ನು ನಾನೂ ಕ್ಷಮಿಸುವುದಿಲ್ಲ, ಎಂದು ಹೆನ್ರಿ ತನ್ನ ಕೈಗಳನ್ನು ಡೋರಿಯನ್‌ನ ಹೆಗಲ ಮೇಲೆ ಇರಿಸಿ, ಮಧ್ಯೆ ಪ್ರವೇಶಿಸಿ ಹೇಳಿದ "ಸರಿ ಬಾ ಕೂತ್ಕೋ ಊಟ ಮಾಡ್ತಾ ಉಳಿದದ್ದೆಲ್ಲಾ ಮಾತಾಡೋಣ."

"ಹೇಳೋದಕ್ಕೆ ಹೆಚ್ಚೇನೂ ಇಲ್ಲ" ಎಂದು ಮೇಜಿನ ಮುಂದಿದ್ದ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ ಡೋರಿಯನ್ ಹೇಳಿದ.

"ಆದದ್ದಿಷ್ಟೆ ನಾನು ಥಿಯೇಟರ್‌ಗೆ ಹೋಗಿ ಕುಳಿತೆ. ಅವಳು ರೋಸಾಲಿಂಡ್ ಪಾತ್ರದಲ್ಲಿದ್ದಳು. ಅವಳನ್ನು ನೋಡಬೇಕಿತ್ತು. ಅಬ್ಬ! ನಾನೆಂದೂ ಅಂಥ ಸೌಂದರ್ಯ, ಆಕರ್ಷಕತೆ ನೋಡಿರಲಿಲ್ಲ. ಇನ್ನು ಅವಳ ಅಭಿನಯ! ಹೇಗಿದ್ದರೂ ಇವತ್ತು ನೋಡ್ತೀರಲ್ಲ. ಅವಳು ಹುಟ್ಟಾ ನಟಿ! ನಾನಂತು ನೋಡಿ ದಿಗ್ಭ್ರಾಂತನಾಗಿ ಬಿಟ್ಟೆ. ನಾನು ಎಲ್ಲಿ ಯಾವ ಕಾಲದಲ್ಲಿ ಇದ್ದೀನಿ ಅನ್ನೋದೇ ಮರೆತು ಬಿಟ್ಟೆ. ನಾಟಕ ಮುಗಿದ ಮೇಲೆ ಪರದೆ ಹಿಂದೆ ಅವಳನ್ನು ಭೇಟಿಯಾದೆ. ಪರಸ್ಪರ ಒಬ್ಬರನ್ನು ಒಬ್ಬರು ನೋಡುತ್ತಲೇ ಇದ್ದೆವು. ಇದ್ದಕ್ಕಿದ್ದಂತೆ ಅವಳ ಕಣ್ಣಲ್ಲಿ ನಾನೆಂದೂ ಕಾಣದ ಮಿಂಚೊಂದು ಕಾಣಿಸಿತು. ನನ್ನ ತುಟಿಗಳು ಅವಳನ್ನು ಸಮೀಪಿಸಿದವು. ಪರಸ್ಪರ ಚುಂಬನಗಳಾದವು. ಅವಳು ಕಂಪಿಸಿಸದಳು ಇದೆಲ್ಲ ನಿಮಗೆ ಹೇಳಬಾರದೆಂದೇ ಇದ್ದೆ. ಆದರೆ ಹೇಳದೆ ಇರಲೂ ಸಾಧ್ಯವಿರಲಿಲ್ಲ. ನಮ್ಮ ಎಂಗೇಜ್‌ಮೆಂಟ್ ಬಹಳ ರಹಸ್ಯದ್ದು. ಅವಳ ಅಮ್ಮನಿಗೂ ಗೊತ್ತಿಲ್ಲ. ನನ್ನ ಪೋಷಕರು ಏನು ಹೇಳ್ತಾರೋ ನನಗೆ ಗೊತ್ತಿಲ್ಲ. ಅವರು ಸಿಟ್ಟು ಮಾಡಿಕೊಂಡರೂ ಆಶ್ಚರ್ಯವಿಲ್ಲ. ಆದರೆ ನನಗೆ ಅದರ ಭಯವಿಲ್ಲ. ಇನ್ನು ಒಂದು ವರ್ಷದೊಳಗಾಗಿ ನಾನು ವಯಸ್ಸಿಗೆ ಬರ್ತೀನಿ. ಆಗ ನನಗೆ ಬೇಕಾದ್ದನ್ನು ನಾನು ಮಾಡಬಲ್ಲೆ. ಕಾವ್ಯದಲ್ಲಿ ಕಂಡುಕೊಳ್ಳುವುದಕ್ಕಿಂತ ನನ್ನ ಹೆಂಡತಿಯನ್ನು ಶೇಕ್ಸ್‌ಪಿಯರ್ ನಾಟಕಗಳಲ್ಲಿ ಹುಡುಕಿಕೊಂಡದ್ದು ಒಳ್ಳೆಯದಾಯ್ತಲ್ಲ ಬೇಸಿಲ್, ಅವನ ಜಗತ್ತಿನ ರೋಸಾಲಿಂಡ್ ಜೂಲಿಯಟ್‌ಗಳು ನನಗೆ ಸಿಕ್ಕರು. ಅವರ ತುಟಿಗಳ ಸ್ಪರ್ಶ ನನಗೆ ಲಭ್ಯವಾಯಿತು."

"ಹೌದು ಡೋರಿಯನ್ ನೀನು ಹೇಳಿದ್ದು ಸರಿ" ಎಂದು ಹಾಲ್ ವಾರ್ಡ್ ಬೇಸಿಲ್ ಮೆಲ್ಲಗೆ ಹೇಳಿದ.

"ಇವತ್ತೇನಾದರೂ ಅವಳನ್ನು ನೋಡಿದ್ದೆಯೇನು?" ಹೆನ್ರಿ ಪ್ರಶ್ನಿಸಿದ. ಲಾರ್ಡ್ ಹೆನ್ರಿ ಷಾಂಪೇನ್ ಹೀರುತ್ತಾ ಏನನ್ನೋ ಆಲೋಚಿಸುತ್ತಾ ಕೇಳಿದ: "ಯಾವ ಸಂದರ್ಭದಲ್ಲಿ 'ಮದುವೆ' ಅನ್ನೋದನ್ನು ಪ್ರಸ್ತಾಪ ಮಾಡಿದೆ. ಅವಳು ಅದಕ್ಕೆ ಹೇಗೆ ಪ್ರತಿಕ್ರಿಯಿಸಿದಳು. ಬಹುಶಃ ಅದೆಲ್ಲ ಮರೆತು ಹೋಗಿರಬೇಕಲ್ಲ?

"ಹ್ಯಾರಿ ನಾನು ಇದನ್ನೆಲ್ಲ ವ್ಯಾಪಾರ ವ್ಯವಹಾರ ಅಂತ ಭಾವಿಸಲಿಲ್ಲ. ನಾನು ಯಾವ ಮದುವೆ ಪ್ರಸ್ತಾಪವನ್ನೂ ಮಾಡಲಿಲ್ಲ. ಅವಳನ್ನು ಪ್ರೀತಿಸುತ್ತಿರುವ ವಿಚಾರ ಹೇಳಿದೆ. ಅವಳು

ಅದಕ್ಕಾಗಿ ತಾನು ಯೋಗ್ಯಳಲ್ಲ ಅಂದಳು. ಯೋಗ್ಯಳಲ್ಲ! ಹೇಗೆ? ಅವಳಿಗೆ ಹೋಲಿಸಿದಲ್ಲಿ ಇಡೀ ಪ್ರಪಂಚ ನನಗೇನೂ ಅಲ್ಲ."

"ಹೆಂಗಸರು ಬಹಳ ಪ್ರಾಕ್ಟಿಕಲ್" ಹೆನ್ರಿ ಗೊಣಗುಟ್ಟಿದ. ಅಷ್ಟೇ ಅಲ್ಲ ಗಂಡಸರಿಗಿಂತ ಈ ನಿಟ್ಟಿನಲ್ಲಿ ಬಹಳ ಮುಂದಿದ್ದಾರೆ. ಅಂಥ ಸಂದರ್ಭದಲ್ಲಿ ಮದುವೆ ವಿಚಾರವಾಗಿ ಏನಾದರೂ ಹೇಳುವುದನ್ನೇ ಮರೆತಿರ್ತೀವಿ. ಆದರೆ ಅವರು ಅದನ್ನು ನೆನಪಿಸುತ್ತಾರೆ." ಹಾಲ್‌ವಾರ್ಡ್ ಹೆನ್ರಿಯ ಭುಜಗಳ ಮೇಲೆ ಕೈಯಿರಿಸಿ, "ಸಾಕು ಹ್ಯಾರಿ, ಡೋರಿಯನ್‌ನನ್ನು ಸಾಕಷ್ಟು ಬೇಜಾರು ಮಾಡಿದ್ದೀಯ, ಡೋರಿಯನ್ ಬೇರೆ ಎಲ್ಲ ಗಂಡಸರಂತೆ ಅಲ್ಲ. ಅವನಿಂದ ಯಾರಿಗೂ ತೊಂದರೆ ಆಗೋಲ್ಲ. ಅವನ ಸ್ವಭಾವ ಬಹಳ ಒಳ್ಳೇದು"

"ಡೋರಿಯನ್ ಯಾವತ್ತೂ ನನ್ನಿಂದ ಬೇಜಾರಾಯ್ತು ಅಂತ ಹೇಳೊಲ್ಲ. ನಾನು ಪ್ರಶ್ನೆ ಕೇಳಿದ್ದು ಕೇವಲ ಕುತೂಹಲಕ್ಕೆ ಅಷ್ಟೆ, ನನ್ನ ಸಿದ್ಧಾಂತದ ಪ್ರಕಾರ, ಹೆಂಗಸರೇ ಮದುವೆ ಪ್ರಸ್ತಾಪ ಮುಂದಿಡ್ತಾರೆ ಹೊರತು ಗಂಡಸರು ಅಲ್ಲ. ಅಕಸ್ಮಾತ್ ಗಂಡಸರೇ ಪ್ರಸ್ತಾಪ ಮುಂದಿಟ್ಟರೆ ಅವರು ಮಧ್ಯಮ ವರ್ಗದವರಾಗಿರುತ್ತಾರೆ. ಈ ಮಧ್ಯಮ ವರ್ಗದವರು ಮಾತ್ರ ಮಾರ್ಡನ್ ಆಗಿರೊಲ್ಲ".

"ನೀನು ಒಂದು ಥರ ವಿಚಿತ್ರ ಹ್ಯಾರಿ" ಎಂದು ನಕ್ಕ, ಆದರೂ ನನಗೇನೂ ಅಭ್ಯಂತರ ಇಲ್ಲ ನಿನ್ನ ಮೇಲೆ ಸಿಟ್ಟು ಮಾಡ್ಕೊಳ್ಳೋಕೆ ಸಾಧ್ಯಾನೇ ಇಲ್ಲ ಸಿಬಿಲ್‌ನ ನೋಡಿದ ಮೇಲೆ, ಯಾವ ಗಂಡಸಾದರೂ ಅವಳ ವಿಚಾರದಲ್ಲಿ ತಪ್ಪಾಗಿ ನಡೆದುಕೊಂಡರೆ, ಅವನು ಪಶುವೇ ಸರಿ, ಆದೂ ಹೃದಯವಿಲ್ಲದ ಪಶುವೇ ಆಗಿರ್ತಾನೆ. ತಾನು ಪ್ರೀಸುವ ವಸ್ತುವನ್ನು ಯಾರಾದರೂ ಹಾಳು ಮಾಡಲು ಬಯಸುವುದನ್ನು ಊಹಿಸಲೂ ಸಾಧ್ಯವಿಲ್ಲ. ಸಿಬಿಲ್‌ವೇನ್‌ಳನ್ನು ಪ್ರೀತಿಸುತ್ತೇನೆ. ಚಿನ್ನದ ವೇದಿಕೆಯ ಮೇಲೆ ಇರಿಸಿ, ಜನ ಅವಳನ್ನು ಆರಾಧಿಸುವುದನ್ನು ನೋಡಬೇಕೆಂದಿದ್ದೇನೆ. ಮದುವೆ ಅನ್ನೋದೇನೆ ಮುರಿಯಲಾಗದ ಪ್ರತಿಜ್ಞೆ, ಅಂಥದ್ದರ ಬಗ್ಗೆ ತಮಾಶೆ ಮಾಡ್ತೀಯ... ಹಾಗೆ ಮಾಡಬೇಡ ಹ್ಯಾರಿ! ನನ್ನ ಮೇಲೆ ಇರಿಸಿದ ನಂಬಿಕೆ, ನನ್ನಲ್ಲಿಟ್ಟ ಪ್ರಾಮಾಣಿಕತೆಗಳು, ನನ್ನನ್ನು ಒಳ್ಳೆಯವನನ್ನಾಗಿ ಮಾಡುತ್ತವೆ. ಅವಳ ಜೊತೆ ಇದ್ದಾಗ, ನೀನು ಹೇಳಿದ್ದೆಲ್ಲ ಮರೆತು ಹೋಗುತ್ತೇನೆ. ನಾನು, ನೀನು ನನ್ನನ್ನು ತಿಳಿದಿರುವುದಕ್ಕಿಂತ ಬೇರೆಯಾಗಿ ಬಿಡ್ತೇನೆ. ಒಮ್ಮೆ ಅವಳ ಸ್ಪರ್ಶವಾದರೆ ಸಾಕು ನಿನ್ನ ತಪ್ಪುಗಳು, ವಿಷಪೂರಿತ ಮಾತುಗಳು, ತಮಾಶೆಯ ಜೋಕುಗಳು, ಎಲ್ಲ ಸಿದ್ಧಾಂತಗಳು ಎಲ್ಲ ಮರೆತುಹೋಗುತ್ತೆ.

"ಜೀವನದ ಬಗ್ಗೆ, ಪ್ರೀತಿಯ ಬಗ್ಗೆ, ಸಂತೋಷದ ಬಗ್ಗೆ, ನಿನ್ನ ಸಿದ್ಧಾಂತಗಳು, ಹಾಗೆ ನೋಡಿದರೆ.... "ಸಂತೋಷ ಅನ್ನುವುದೊಂದೇ ಸಿದ್ಧಾಂತವೆನಿಸಿಕೊಳ್ಳಲು ಯೋಗ್ಯವಾದದ್ದು. ಆದರೆ ಯಾವ ಸಿದ್ಧಾಂತವೂ ನನ್ನದೆಂದು ಹೇಳಿಕೊಳ್ಳುವ ಧೈರ್ಯವಿಲ್ಲ.... ನಾವು ಯಾವಾಗ ಸಂತೋಷವಾಗಿ ಇರ್ತೇವೆಯೋ ಒಳ್ಳೆಯವರಾಗಿರ್ತೇವೆ. ಆದರೆ ಒಳ್ಳೆಯವರಾಗಿದ್ದಾಗ ಯಾವಾಗಲೂ ಸಂತೋಷವಾಗಿರೊಲ್ಲ. ಒಳ್ಳೆಯವರಾಗಿರೋದು ಅಂದರೆ ತನ್ನ ಜೊತೆಗೆ ಸಾಮರಸ್ಯ ಹೊಂದಿರೋದು."

"ಹ್ಯಾರಿ ಒಂದನ್ನು ನೀನು ಒಪ್ಪಿಕೊಳ್ಳಲೇಬೇಕು. ಹೆಂಗಸರು, ಗಂಡಸರಿಗೆ ತಮ್ಮ ಬದುಕಿನಲ್ಲಿ ಅಮೂಲ್ಯವಾದದ್ದೆಲ್ಲವನ್ನೂ ಧಾರೆಯೆರೆದು ಬಿಡುತ್ತಾರೆ.

"ಕೊಡ್ತಾರೆ, ಅದಕ್ಕೆ ಪ್ರತಿಯಾಗಿ ಸಣ್ಣ ಸಣ್ಣ ಕಂತುಗಳಲ್ಲಿ ಕೊಟ್ಟದ್ದನ್ನೆಲ್ಲ ವಾಪಸ್ ಪಡೀತಾರೆ."

"ಹ್ಯಾರಿ.... ನೀನು ಬಹಳ ದುಷ್ಟನೇ ಸರಿ" ಆದರೂ ಅದ್ಯಾಕೊ ನಿನ್ನನ್ನು ಕಂಡರೆ ನನಗೆ ಅಷ್ಟೊಂದು ಇಷ್ಟ ಅಂತ ಗೊತ್ತಾಗ್ತಿಲ್ಲ.

"ನೀನು ಯಾವಾಗಲೂ ನನ್ನನ್ನು ಇಷ್ಟ ಪಟ್ಟೇ ಪಡ್ತೀಯ" "ನೀನು ಮಾಡಲು ಹೆದರುವ ನಿನ್ನೆಲ್ಲ ತಪ್ಪುಗಳನ್ನು ನಾನು ಪ್ರತಿನಿಧಿಸುತ್ತೇನೆ."

"ಏನು ಹುಚ್ಚು ಮಾತಾಡ್ತೀಯ? ನಡಿ ಥಿಯೇಟರ್‌ಗೆ ಹೋಗೋಣ. ಸಿಬಿಲ್ ಸ್ಟೇಜ್ ಮೇಲೆ ಬಂದಾಗ ನೋಡಿದ ಕೂಡಲೇ ನಿನ್ನ ಜೀವನ ಧೃಷ್ಟಿಯೇ ಬದಲಾಗುತ್ತೆ. ನಿನಗೆ ಇಲ್ಲೀವರೆಗೆ ತಿಳಿದುಕೊಳ್ಳಲಾಗದ ಏನೋ ಒಂದನ್ನು ಪ್ರತಿನಿಧಿಸುತ್ತಾಳೆ."

"ನನಗೆ ಎಲ್ಲಾ ಗೊತ್ತಿದೆ. ಆದರೂ ಹೊಸ ಅನುಭವಕ್ಕೂ ಯಾವಾಗಲೂ ಸಿದ್ಧವಾಗಿರುತ್ತೇನೆ." ಆದರೆ ನನಗೆ ಗೊತ್ತಿಲ್ಲದೆ ಯಾವ ಅನುಭವವೂ ಇರಲಾರದೆಂದೇ ನನ್ನ ಭಾವನೆ. ಆದರೂ ನಿನ್ನ ಹುಡುಗಿ ನನ್ನಲ್ಲಿ ಅಚ್ಚರಿ, ರೋಮಾಂಚನಗಳನ್ನು ಹುಟ್ಟುಹಾಕಬಹುದು. ಆ್ಯಕ್ಟಿಂಗ್ ನನಗೂ ತುಂಬಾ ಇಷ್ಟ. ನಿಜವಾದ ಜೀವನಕ್ಕಿಂತ, ಹೆಚ್ಚಿನದಾಗಿರುತ್ತದೆ" ಹೊರಡೋಣ ನಡಿ ಡೋರಿಯನ್, ನೀನು ನನ್ನ ಜೊತೆ ಬರ್ತೀಯ. ಸಾರಿ ಬೇಸಿಲ್ ಗಾಡಿಯಲ್ಲಿ ಇಬ್ಬರಿಗೆ ಮಾತ್ರವೇ ಜಾಗ ಆಗುತ್ತೆ. ನೀನು ಬೇರೆ ಗಾಡಿ ಹಿಡಿದು ನಮ್ಮನ್ನು ಫಾಲೋ ಮಾಡು." ಮೂವರೂ ಎದ್ದು ತಮ್ಮ ತಮ್ಮ ಕೋಟುಗಳನ್ನು ಹಾಕಿಕೊಂಡರು. ಬೇಸಿಲ್ ಯಾಕೋ ಮೌನವಾಗಿದ್ದ. ಬೇಸರಗೊಂಡಿದ್ದಂತೆ ಕಾಣಿಸಿದ. ಯಾಕೋ ಅವನಿಗೆ ಡೋರಿಯನ್‌ನ ಮದುವೆ ವಿಷಯ ಜೀರ್ಣಿಸಿಕೊಳ್ಳೋಕೆ ಆಗಲಿಲ್ಲ. ಆದರೂ ಬೇರೆ ಎಲ್ಲದಕ್ಕಿಂತ ಸ್ವಲ್ಪವಾಸಿ ಅಂತ ಅನ್ನಿಸಿತು. ಕೆಳಗಿಳಿದು ಬಂದ ಮೇಲೆ ಬೇಸಿಲ್ ಗಾಡಿ ಹತ್ತಿದ. ತಾನೊಬ್ಬನೇ ಅದರಲ್ಲಿ ಪ್ರಯಾಣಿಸಿದ. ವಾಹನಗಳ ಫ್ಲಾಶ್ ಬೆಳಕು ಕಣ್ಣಿಗೆ ಬೀಳುತ್ತಿತ್ತು. ಡೋರಿಯನ್ ಗ್ರೇ ಇನ್ನು ಮುಂದೆ ತನ್ನ ಜೊತೆ ಮೊದಲಿದ್ದ ಹಾಗೆ ಇರೋದಿಲ್ಲ ಎನಿಸಿತು. ಅವರಿಬ್ಬರ ನಡುವೆ ಈಗ ಬದುಕು ಪ್ರವೇಶ ಮಾಡಿತ್ತು. ಅವನು ಕುಳಿತಿದ್ದ ಗಾಡಿ ಥಿಯೇಟರ್ ಮುಂದೆ ನಿಂತಾಗ, ಯಾಕೋ ಆ ಕಲಾವಿದನಿಗೆ ತಾನು ಮೊದಲಿಗಿಂತ ಎಷ್ಟೋ ವರ್ಷ ದೊಡ್ಡವನಾಗಿಬಿಟ್ಟಿದ್ದೇನೆ ಎನಿಸಿತು.

❖

# ಅಧ್ಯಾಯ –7

ಆ ದಿನ ಎಂದಿಗಿಂತ ಹೆಚ್ಚಾಗಿ ಥಿಯೇಟರ್ ತುಂಬಿಹೋಗಿತ್ತು. ಟೊಣಪನಂತಿದ್ದ ಮ್ಯಾನೇಜರ್ ಕೈ ತುಂಬ ಒಡವೆಗಳನ್ನು ಧರಿಸಿ ದೊಡ್ಡದಾಗಿ ನಗುತ್ತ, ಜೋರಾಗಿ ಮಾತನಾಡುತ್ತಾ, ಇವರು ಮೂವರಿಗೆ ವಿಶೇಷವಾದ ಗೌರವ ತೋರಿಸಿ, ಅವರಿಗೆ ಮೀಸಲಿದ್ದ ಬಾಕ್ಸ್‌ನಲ್ಲಿ ಕೂರಿಸಿದ. ಗ್ರೇ ಗಂತೂ ಅವನನ್ನು ಕಂಡರೆ ಅಸಹ್ಯ. ಮಿರಾಂಡಾಳನ್ನು ನೋಡ ಬಂದವರಿಗೆ ಕ್ಯಾಲಿಬಾನ್‌ನನ್ನು ನೋಡಿದಂತಾಯಿತು. ಮೂವರೂ ಮಾತಾಡುತ್ತಾ ತಾವು ತಂದಿದ್ದ ಕಿತ್ತಲೆ ಹಣ್ಣುಗಳನ್ನು ಸುಲಿದು ತಿನ್ನುತ್ತಿದ್ದರು. ಕೆಳಗಿನ ಸಾಲಿನಲ್ಲಿ ಕುಳಿತಿದ್ದವರು ಬಾಟಲಿಗಳ ಮುಚ್ಚಳ ತೆಗೆಯುತ್ತಿದ್ದ ಸದ್ದು ಕೇಳಿಸುತ್ತಿತ್ತು.

"ಅಬ್ಬ, ದೇವತೆಯನ್ನು ಹುಡುಕುವುದಕ್ಕೆ ಇದೆಂಥ ಜಾಗ!" ಹೆನ್ರಿ ಹೇಳಿದ.

"ಹೌದು. ಇಂಥ ಜಾಗದಲ್ಲೇ ಅವಳನ್ನು ಹುಡುಕಿದ್ದು. ಅವಳು ಎಲ್ಲ ವಸ್ತುಗಳಿಗಿಂತಲೂ ಮೀರಿದ ದೈವೀ ಸ್ವರೂಪ. ಅವಳು ಆ್ಯಕ್ಟ್ ಮಾಡುವುದನ್ನು ನೋಡಿದರೆ ಎಲ್ಲವೂ ಮರೆತುಹೋಗುತ್ತೆ. ಕೆಳಗೆ ಕೂತು ಗಲಾಟೆ ಮಾಡುತ್ತಾ ಸಿಳ್ಳು ಹೊಡೆಯುತ್ತಾ, ಕೆಟ್ಟ ಕೆಟ್ಟದಾಗಿ ಮಾತಾಡುತ್ತಾ ಇರುವ ಈ ಸಾಮಾನ್ಯ ಪ್ರೇಕ್ಷಕರು ಸ್ಟೇಜ್ ಮೇಲೆ ಅವಳು ಕಾಣಿಸಿಕೊಳ್ಳುತ್ತಿದ್ದಂತೆ ಗಪ್‌ಚಿಪ್ ಆಗಿ ಬಿಡುತ್ತಾರೆ. ಅವಳ ಅಭಿನಯ ನೋಡುವಲ್ಲಿ ಮೈ ಮರೆತು ಬಿಡುತ್ತಾರೆ. ತನ್ನ ನಟನೆಯಿಂದ ಅವರನ್ನೆಲ್ಲ ಅಳುವ ಹಾಗೆ, ನಗುವ ಹಾಗೆ, ಮಾಡುತ್ತಾಳೆ. ಅವರಲ್ಲಿ ಆಧ್ಯಾತ್ಮಿಕ ಭಾವನೆ ಮೂಡಿಸುತ್ತಾಳೆ. ಅವರೆಲ್ಲರೂ ತಮ್ಮದೇ ರಕ್ತ ಮಾಂಸಗಳಿಂದ ಆದವರೆಂಬ ಭಾವನೆ ಮೂಡಿಸುತ್ತಾಳೆ.

"ಒಂದೇ ರಕ್ತ ಮಾಂಸ" ಓ! ನನಗೆ ನಂಬೋಕೆ ಆಗೊಲ್ಲ" ಎಂದು ಹೆನ್ರಿ ದೊಡ್ಡದಾಗಿ ಉದ್ಗರಿಸಿದ.

"ಡೋರಿಯನ್ ಅವನ ಮಾತಿಗೆ ಕಿವಿಗೊಡಬೇಡ... ನೀನು ಹೇಳಿದ್ದೆಲ್ಲ ನನಗೆ ಅರ್ಥವಾಗಿದೆ. ನಾನೂ ಆ ಹುಡುಗಿ ಹೇಳಿದ್ದರಲ್ಲಿ ವಿಶ್ವಾಸವಿಡುತ್ತೇನೆ. ಯಾರನ್ನಾದರೂ ಪ್ರೀತಿಸಿದರೆ, ಪ್ರೀತಿಸಿಕೊಂಡವರು ಅದ್ಭುತವಾಗಿರಬೇಕು. ಯಾವುದೇ ಹುಡುಗಿ ನೀನು ಹೇಳಿದಷ್ಟು ಪ್ರಭಾವ ನಿನ್ನ ಮೇಲೆ ಬೀರಿದ್ದರೆ, ನಿಜವಾಗಿಯೂ ಅವಳು ಬಹಳ ಚೆನ್ನಾಗಿಯೇ ಇರಬೇಕು ಮತ್ತು ಒಳ್ಳೆಯವಳಾಗಿಯೇ ಇರಬೇಕು. ಈ ಹುಡುಗಿ ಏನಾದರೂ ಆತ್ಮವಿಲ್ಲದವರಲ್ಲಿ ಆತ್ಮವನ್ನು ಕೊಡುವಂತಿದ್ದರೆ ಸೌಂದರ್ಯ ಪ್ರಜ್ಞೆಯೇ ಇಲ್ಲದ ಶುಷ್ಕ ವಿಕೃತ ಮನಸ್ಸಿರುವವರಲ್ಲಿ ಸೌಂದರ್ಯ ಪ್ರಜ್ಞೆ ಮೂಡಿಸಲು ಸಮರ್ಥಳಿದ್ದರೆ, ಸ್ವಾರ್ಥವಿರುವವರಲ್ಲಿ, ಸ್ವಾರ್ಥವನ್ನು ದೂರಮಾಡಿ ತಮ್ಮದಲ್ಲದವರ ಬಗ್ಗೆಯೂ ಅವರ ಕಷ್ಟಗಳಿಗೆ ಕಂಬನಿ ಸುರಿಸುವಂತೆ ಮಾಡಬಲ್ಲವಳಾಗಿದ್ದಲ್ಲಿ ಖಂಡಿತವಾಗಿ ನಿನ್ನ ಅಪಾರ ಪ್ರೀತಿಗೆ, ಆರಾಧನೆಗೆ, ಇಡೀ ಪ್ರಪಂಚದಲ್ಲಿಯೇ ಅರ್ಹಳೆನಿಸಿಕೊಳ್ಳುತ್ತಾಳೆ. ನೀನು ಮದುವೆ ಯೋಚನೆ ಮಾಡಿದ್ದು ಸರಿಯಾಗಿಯೇ ಇದೆ. ಮೊದಲು ನನಗೆ ಹಾಗೆ ಅನಿಸಿದಿದ್ದರೂ ಈಗ ನನಗೆ ಒಪ್ಪಿಗೆಯಿದೆ. ನಿನಗೋಸ್ಕರವೇ ದೇವರು ಸಿಬಿಲ್‌ವೇನಳನ್ನು ಸೃಷ್ಟಿಸಿದ್ದಾನೆ. ಅವಳಿಲ್ಲದೆ ನೀನು ಪರಿಪೂರ್ಣನಾಗಲಾರೆ."

"ಧನ್ಯವಾದ ಬೇಸಿಲ್" ಅವನ ಕೈಯೊತ್ತಿ ಹೇಳಿದ. ನನಗೆ ಗೊತ್ತು ನೀನು ಅರ್ಥ ಮಾಡಿಕೊಳ್ಳುತ್ತೀ ಎಂದು. ಹ್ಯಾರಿ ಇದ್ದಾನಲ್ಲ ಒಂದು ಥರಾ ಸಿನಿಕ, ಅವನು ಮಾತಲ್ಲೇ ಹೆದರಿಕೆ ಹುಟ್ಟಿಸಿಬಿಡುತ್ತಾನೆ. ಇಗೋ ಆರ್ಕೆಸ್ಟ್ರಾ ಶುರುವಾಯ್ತು. ಇದೇನಿದ್ದರೂ ಒಂದು ಐದ್ಹತ್ತು ನಿಮಿಷ. ಆಮೇಲೆ ಪರದೆ ಸರಿಯುತ್ತೆ, ನನ್ನ ಜೀವನವೆಲ್ಲಾ ಧಾರೆಯೆರೆಯಬೇಕೆಂದಿರುವ ನನ್ನ ಹುಡುಗಿಯನ್ನು ನೀನು ನೋಡುತ್ತೀ. ನನ್ನಲ್ಲಿನ ಒಳ್ಳೆತನವನ್ನೆಲ್ಲ ಅವಳಿಗೆ ಕೊಟ್ಟುಬಿಟ್ಟಿದ್ದೀನಿ.

ಇದಾದ ಕಾಲುಗಂಟೆ ಮೇಲೆ, ಕಿವಿಗಡಚಿಕ್ಕುವ ಚಪ್ಪಾಳೆ ನಡುವೆ ಸಿಬಿಲ್‌ವೇನ್ ರಂಗಪ್ರವೇಶ ಮಾಡಿದಳು. ಹೌದು ಖಂಡಿತವಾಗಿಯೂ ಎಂದೂ ಕಾಣದಿದ್ದ ರೂಪವಂತೆ ಎಂದು ಹೆನ್ರಿ ತನ್ನಲ್ಲೇ ಹೇಳಿಕೊಂಡ. ಅವಳ ನಾಚಿಕೆಯ ನೋಟ ಬೆರಗು ತುಂಬಿದ ಕಣ್ಣುಗಳು! ಬೆಳ್ಳಿಯ ಕನ್ನಡಿಯಲ್ಲಿ ಬಿಂಬಿತವಾದ ಗುಲಾಬಿಯ ನೆರಳಿನಂತೆ ಕಾಣುತ್ತಿದ್ದ ಕೆಂಪೇರಿದ ಕೆನ್ನೆ. ಪ್ರೇಕ್ಷಕರಿಂದ ಕಿಕ್ಕಿರಿದಿದ್ದ ಪ್ರೇಕ್ಷಾಗೃಹ! ಒಂದೆರಡು ಹೆಜ್ಜೆ ಹಿಂದಕ್ಕೆ ನಡೆದುಹೋದಳು. ತುಟಿಗಳು ಕಂಪಿಸತೊಡಗಿದ್ದವು. ಬೇಸಿಲ್ ಹಾಲ್‌ವಾರ್ಡ್ ತನ್ನ ಭಾವೋದ್ರೇಕವನ್ನು ಹತ್ತಿಕ್ಕಿಕೊಳ್ಳಲಾಗದೆ ಕುಳಿತಿದ್ದವನು ಎದ್ದು ನಿಂತು ಜೋರಾಗಿ ಚಪ್ಪಾಳೆ ಹೊಡೆದ. ಡೋರಿಯನ್ ಯಾವುದೋ ಕನಸು ಕಾಣುತ್ತಿರುವಂತೆ ಕುಳಿತಿದ್ದ. ಲಾರ್ಡ್ ಹೆನ್ರಿ ತನ್ನ ಕನ್ನಡಕದ ಮೂಲಕ ಅವಳನ್ನು ಗಮನಿಸುತ್ತ "ಚಾರ್ಮಿಂಗ್! ಚಾರ್ಮಿಂಗ್!!" ಎಂದು ತನ್ನೊಳಗೇ ಗೊಣಗಿದ,

ಸಿಬಿಲ್‌ವೇನ್ ದಂತದ ಗೊಂಬೆಯಂತೆ, ದೇವಲೋಕದಿಂದಿಳಿದ ದೇವತೆಯಂತೆ ಕಾಣಿಸಿದಳು. ಅವಳ ವಯ್ಯಾರದ ನಡಿಗೆ, ಅದ್ಭುತವಾದ ಅಭಿನಯ ನೋಡುವವರನ್ನು ಮಂತ್ರ

ಮುಗ್ಧವಾಗಿಸಿತ್ತು. ಅವಳು ಮಾತ್ರ ಉತ್ಸಾಹವೇ ಇಲ್ಲದಂತೆ ಕಾಣಿಸಿದಳು. [ಮುಖದಲ್ಲಿ ಗೆಲುವೆಂಬುದೇ ಇರಲಿಲ್ಲ.]

ರೋಮಿಯೋ ಮೇಲೆ ಕಣ್ಣಿರಿಸಿದ್ದಳು. ಮುಖದಲ್ಲಿ ಸಂತೋಷವೆಂಬುದೇ ಇರಲಿಲ್ಲ. ನೋಡುತ್ತಾ ಹೇಳುತ್ತಿದ್ದ ಸಂಭಾಷಣೆಯ ಸಾಲುಗಳು ನಿರ್ಜೀವವಾಗಿದ್ದವು. ಕೃತಕವಾಗಿದ್ದವು. ಧ್ವನಿ ಇಂಪಾಗಿದ್ದರೂ ಮಾತುಗಳಲ್ಲಿ ಸತ್ತು ಹೋಗಿತ್ತು. ಭಾವಾಭಿವ್ಯಕ್ತಿ ಕೃತಕವೆನಿಸಿತ್ತು. ಇದನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸುತ್ತಿದ್ದ ಡೋರಿಯನ್ ಮುಖ ಬಿಳುಚಿಕೊಂಡಿತು. ಅವನಿಗೆ ದಿಕ್ಕು ತೋಚದಾಯಿತು. ಗೆಳೆಯರಲ್ಲಿ ಯಾರೊಬ್ಬರೂ ಏನೂ ಹೇಳಲಿಲ್ಲ. ಅವಳು ಅವರ ದೃಷ್ಟಿಯಲ್ಲಿ ಸಂಪೂರ್ಣವಾಗಿ ಸೋತಿದ್ದಳು. ಅವರಿಗೆ ತುಂಬಾ ನಿರಾಶೆಯಾಯಿತು. ಆದರೂ ಜೂಲಿಯಟ್‌ಳ ನಿಜವಾದ ಪರೀಕ್ಷೆಯಾಗುವುದು ಬಾಲ್ಕನಿ ದೃಶ್ಯದಲ್ಲಿ (ಎರಡನೆ ಅಂಕದ) ಅದಕ್ಕಾಗಿ ಎದುರು ನೋಡುತ್ತಿದ್ದರು. ಅಲ್ಲಿಯೂ ಅವಳು ಅಸಫಲಳಾದರೆ, ಅವಳಲ್ಲಿ ಏನೇನೂ ಪ್ರತಿಭೆ ಇರಲಾರದು ಎಂದುಕೊಂಡರು.

Thou knowest the mask of night on my face.
Else would a mailden blush be paint my cheek
For that which thou hast hueard me speak to night.

ಎನ್ನುವ ಸುಂದರವಾದ ಸಾಲುಗಳನ್ನು ಸರಿಯಾಗಿ ಗ್ರಹಿಸದೆ, ಅಗತ್ಯವಿಲ್ಲದ ಎಲ್ಲ ಕಡೆ ಒತ್ತು ಕೊಟ್ಟು ಕೊಟ್ಟು ಶಾಲೆಯ ಬಾಲಕಿಯೊಬ್ಬಳು ಸುಮ್ಮನೆ ಬಾಯಿ ಪಾಠ ಮಾಡಿ ಒಪ್ಪಿಸಿದಂತೆ ಇತ್ತು. ಸಂಪೂರ್ಣವಾಗಿ ಎಲ್ಲರ ನಿರೀಕ್ಷೆಯಲ್ಲಿ ಸೋತಳು.

ಕೆಳ ದರ್ಜೆಯಲ್ಲಿನ ಸಾಮಾನ್ಯ ಪ್ರೇಕ್ಷಕರು ನಿರಾಶೆಗೊಂಡರು. ಕುಳಿತುಕೊಳ್ಳಲು ಆಗಲಿಲ್ಲ. ಎದ್ದು ನಿಂತು ಸಿಳ್ಳುಗಳನ್ನು ಹಾಕಿದರು. ಪರದೆ ಹಿಂದಕ್ಕೆ ಓಡಿದ ಮ್ಯಾನೇಜರ್ ಸಿಟ್ಟಿನ ಉತ್ತುಂಗದಲ್ಲಿದ್ದ. ಎಲ್ಲರೂ ಹೆದರಿದ್ದರಾದರೂ ನಿರ್ಭಾವುಕತೆಯಿಂದ ನಿಂತಿದ್ದವಳೆಂದರೆ ಸಿಬಿಲ್ ಮಾತ್ರ. ಎರಡನೇ ಅಂಕ ಮುಗಿಯುತ್ತಿದ್ದಂತೆ ಗದ್ದಲ ಶುರುವಾಯಿತು. ಲಾರ್ಡ್ ಹೆನ್ರಿ ಎದ್ದು ನಿಂತು ಕೋಟು ಹಾಕಿಕೊಂಡ. " ತುಂಬ ರೂಪವತಿ" ಆದರೆ ಆ್ಯಕ್ಟ್ ಮಾಡೋಕೆ ಬರೋದಿಲ್ಲ, ಬನ್ನಿ ಹೋಗೋಣ."

"ನಾನು ನಾಟಕ ಪೂರ್ತಿ ನೋಡ್ಕೊಂಡು ಬರ್ತೀನಿ. ಸಾರಿ. ನಿಮ್ಮ ಸುಂದರ ಸಂಜೆಯನ್ನು ಹಾಳು ಮಾಡಿದೆ. ನಿಮ್ಮಿಬ್ಬರ ಕ್ಷಮೆ ಕೋರುತ್ತಿದ್ದೀನಿ "ಡೋರಿಯನ್ ಅವಳಿಗೆ ಹುಷಾರಿಲ್ಲದಿರಬಹುದು. ಇನ್ನೊಂದು ದಿನ ಬಂದರೆ ಆಯಿತು." ಬೇಸಿಲ್ ಹೇಳಿದ.

"ನೀನಂದುಕೊಂಡಂತೆ ಹುಷಾರಿಲ್ಲದಿದ್ದರೆ ಒಳ್ಳೇದೇ ಆಯಿತು. ಆದರೆ ಅದ್ಯಾಕೋ ಏನೋ ನಿರುತ್ಸಾಹದಿಂದ, ಬೇಜವಾಬ್ದಾರಿಯಿಂದ ಇದ್ದಂತೆ ಕಾಣಿಸುತ್ತಿತ್ತು. ನಿನ್ನೆ ಅದ್ಭುತವಾಗಿ ಆ್ಯಕ್ಟ್ ಮಾಡಿದವಳು ಇವತ್ತು ಹೀಗ್ಯಾಕೆ ಆದಳು ಅನ್ನೋದೇ ಗೊತ್ತಾಗ್ತಿಲ್ಲ. ಇವತ್ತು ಅವಳು ಆ್ಯಕ್ಟಿಂಗ್ ತೀರಾ ಸಾಮಾನ್ಯವಾಗಿ, ಕಳಪೆಯಾಗಿ ಇತ್ತು. ನೀನು ಪ್ರೀತಿಸುವವರ ಬಗ್ಗೆ ಹೀಗೆಲ್ಲ ಮಾತಾಡಬೇಡ. ಪ್ರೀತಿ ಅನ್ನೋದು ಕಲೆಗಿಂತ ಅದ್ಭುತವಾದ ವಿಚಾರ."

"ಅವೆರಡೂ ಅನುಕರಣೆಯ ಭಿನ್ನ ಭಿನ್ನ ಅಭಿವ್ಯಕ್ತಿ ರೂಪಗಳು" ಲಾರ್ಡ್ ಹೆನ್ರಿ ಅಭಿಪ್ರಾಯ ಹೇಳಿದ "ಬನ್ನಿ ಹೋಗೋಣ. ಡೋರಿಯನ್ ನೀನು ತುಂಬ ಹೊತ್ತು ಇಲ್ಲಿರೋದು ಬೇಡ. ಕೆಟ್ಟ ಅಭಿನಯವನ್ನು ನೋಡುವುದು ನೈತಿಕವಾಗಿ ಒಳ್ಳೆಯದಲ್ಲ. ಆದ್ದರಿಂದ ಜೂಲಿಯಟ್ ಪಾತ್ರವನ್ನು ಕೆಟ್ಟದಾಗಿ ನಿರ್ವಹಿಸಿದರೆ ಏನಾಯ್ತು. ಅಲ್ಲದೆ ನಿನ್ನ ಹೆಂಡತಿ ಆ್ಯಕ್ಟ್ ಮಾಡಬೇಕೂನ್ನೋದು ನಿನ್ನಾಸೆಯೂ ಅಲ್ಲ. ಅವಳು ತುಂಬಾ ಮುದ್ದಾಗಿದ್ದಾಳೆ ಬೇರೆ. ಜೀವನದ ಬಗ್ಗೆ, ಆ್ಯಕ್ಟಿಂಗ್ ಬಗ್ಗೆ ಸ್ವಲ್ಪವೇ ತಿಳಿದಿದ್ದರೂ ಅವಳ ವಿಚಾರದಲ್ಲಿ ನಿನಗೆ ಒಳ್ಳೆ ಅನುಭವ ಸಿಗುತ್ತೆ. ಎರಡು ವರ್ಗದ ಜನರನ್ನು ಸಾಮಾನ್ಯವಾಗಿ ನೋಡಬಹುದು. ಅಂಥಾದ್ದರಲ್ಲಿ ಒಂದು ವರ್ಗದ ಜನರಿಗೆ ಎಲ್ಲ ಗೊತ್ತಿರುತ್ತೆ, ಇನ್ನೊಂದು ವರ್ಗದ ಜನರಿಗೆ ಏನೇನೂ ಗೊತ್ತಿರೊಲ್ಲ. ಆದರೆ ಎರಡೂ ವರ್ಗದ ಜನರೂ ಇಷ್ಟವಾಗುತ್ತಾರೆ. ದೇವರೇ! ಇಷ್ಟೊಂದು ಮನಸ್ಸಿಗೆ ಹಚ್ಕೋಬೇಡ. ನಿರಂತರವಾಗಿ ಯುವಕನಂತೆ ಕಾಣುವುದರ ರಹಸ್ಯ ಬೇಡದಿರುವ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಳ್ಳದಿರುವುದೇ ಆಗಿದೆ. ಬೇಸಿಲ್ ಜೊತೆಗೆ ಕ್ಲಬ್ಬಿಗೆ ಬಾ. ನಾವು ಮೂವರು, ಸಿಬಿಲ್‌ಳ ಒಳಿತಿಗಾಗಿ ಒಂದಷ್ಟು ಕುಡಿಯೋಣ. ಅವಳು ತುಂಬಾ ಚೆನ್ನಾಗಿದ್ದಾಳೆ. ಅದಕ್ಕಿಂತ ನಿನಗೇನು ಬೇಕಾಗಿದೆ?"

"ಹೊರಟುಹೋಗು ಹ್ಯಾರಿ ನನಗೆ ಒಬ್ಬನೇ ಇರಲು ಬಿಡು. ಬೇಸಿಲ್ ನೀನೂ ಹೋಗಬೇಕು. ನನ್ನೆದೆ ಒಡೆದು ಹೋಗ್ತಿರೋದು ಕಾಣೋದಿಲ್ವೆ?" ಬಿಸಿಕಂಬನಿಗಳು ಉದುರಿದವು. ತುಟಿಗಳು ಕಂಪಿಸಿದವು. ಕುಳಿತಿದ್ದ ಜಾಗಕ್ಕೆ ಮತ್ತೆ ಹೋಗಿ ಗೋಡೆಗೆ ಒರಗಿಕೊಂಡು, ಮುಖ ಮುಚ್ಚಿಕೊಂಡು ಅಳತೊಡಗಿದ.

"ಬಾ ಹೋಗೋಣ ಬೇಸಿಲ್" ಎಂದು, ಎಂದೂ ಕಾಣದ ಮೃದುವಾದ ದನಿಯಲ್ಲಿ ಹೇಳಿದ. ಇಬ್ಬರೂ ಜೊತೆಯಾಗಿ ಹೊರಟರು. ಒಂದೆರಡು ನಿಮಿಷಗಳ ತರುವಾಯ ಫುಟ್ ಲೈಟ್ಸ್ ಹತ್ತಿಕೊಂಡವು. ಮೂರನೇ ಅಂಕ ಶುರುವಾಯಿತು. ನೀರಸವಾಗಿ, ಅನ್ಯಮನಸ್ಕನಾಗಿ ಕಾಣಿಸಿಕೊಂಡ ನಾಟಕ. ಎಳೀತಿತ್ತು. ಸುಮಾರು ಜನ ಎದ್ದು ಹೊರಟುಹೋದರು. ಸುಮಾರು ಅರ್ಧದಷ್ಟು ಜನ ಕಾಲುರುಘಾಢಿಸುತ್ತ ಜೋರಾಗಿ ನಗುತ್ತ ಹೊರಹೋಗುತ್ತಿದ್ದರು. ನೋಡಲು ಹಾಸ್ಯಾಸ್ಪದ ದೃಶ್ಯವಾಗಿ ಕಾಣಿಸಿತು. ಕೊನೇ ಅಂಕದ ಆಟ ನಡೆಯುವಾಗ ಥಿಯೇಟರ್ ಹೆಚ್ಚು ಕಡಿಮೆ ಖಾಲಿಯಾಗಿತ್ತು.

ನಾಟಕ ಮುಗೀತಿದ್ದಂತೆ,

ಡೋರಿಯನ್ ಗ್ರೀನ್ ರೂಮಿನತ್ತ ನಡೆದ. ಹುಡುಗಿ ಒಬ್ಬಳೇ ನಿಂತಿದ್ದಳು. ಅವಳ ಮುಖದಲ್ಲಿ ಗೆಲುವಿನ ಕಳೆಯಿತ್ತು. ಕಣ್ಣುಗಳಲ್ಲಿ ಆಸೆಯ ಬೆಂಕಿ ಹೊತ್ತಿ ಉರಿಯುತ್ತಿತ್ತು. ತುಟಿಗಳಲ್ಲಿ ಮುಗುಳ್ನಗೆಯ ಮಿಂಚು ಹೊಳೆದಿತ್ತು. ಅವನು ಒಳಹೊಕ್ಕಾಗ ಅವಳು ಅವನತ್ತ ನೋಡಿದಳು. ಅವಳ ಮುಖದಲ್ಲಿ ಎಂದೂ ಇಲ್ಲದ ಸಂತೋಷ ಕಾಣಿಸಿಕೊಂಡಿತು. "ಇವತ್ತು ನಾನು ಎಷ್ಟು ಕೆಟ್ಟದಾಗಿ ಆ್ಯಕ್ಟ್ ಮಾಡಿದೆ ಅಲ್ವಾ ಡೋರಿಯನ್ !" ಜೋರಾಗಿ ಹೇಳಿದಳು. "ಭಯಂಕರವಾಗಿತ್ತು!" ಉತ್ತರಿಸಿದ. ಆಶ್ಚರ್ಯದಿಂದ ಅವಳತ್ತ ನೋಡಿ "ಹೇಳೋಕೇ ಆಗದಿರುವಷ್ಟು ಭಯಂಕರವಾಗಿತ್ತು! ನಿನಗೇನು ಹುಷಾರಿಲ್ಲವೇ? ಹೇಗಿತ್ತು ಅನ್ನುವುದರ

ಕಲ್ಪನೆ ನಿನಗಿರಲಿಲ್ಲ. ಇದರಿಂದ ನನ್ನ ಮನಸ್ಸಿಗೆ ಎಷ್ಟು ಬೇಸರವಾಯಿತು ಅನ್ನೋದು ಗೊತ್ತಿದೆಯೇನು?" ಹುಡುಗಿ ನಕ್ಕು ಡೋರಿಯನ್ ಎಂದು ಆ ಹೆಸರಿನ ಸವಿಯನ್ನು ಅನುಭವಿಸುತ್ತಿರುವಂತೆ ತುಟಿಗಳ ಗುಲಾಬಿ ಪಕಳೆಗಳಿಂದ ಅತ್ಯಂತ ಸವಿಯಾದ ಜೇನೊಸರುವಂತೆ ಮಧುರವಾದ ಸ್ವರದಲ್ಲಿ ಹೇಳಿದಳು,

"ಡೋರಿಯನ್ ನೀನು ಅರ್ಥಮಾಡ್ಕೋಬೇಕಿತ್ತು. ಹೋಗಲಿ ಈಗಲಾದರೂ ಅರ್ಥಮಾಡಿಕೋ. ಮಾಡ್ಕೊಳ್ತೀ ಅಲ್ಲ?"

"ಏನರ್ಥ ಮಾಡಿಕೊಳ್ಳೋದು?" ಎಂದು ಸಿಟ್ಟಿನಿಂದ ಹೇಳಿದ. "ನಾನು ಯಾಕೆ ಇವತ್ತು ರಾತ್ರಿ ಕೆಟ್ಟದಾಗಿ ಆ್ಯಕ್ಟ್ ಮಾಡಿದೆ, ಯಾಕೆ ಇನ್ನೂ, ಮುಂದೆ ಹೀಗೆ ಕೆಟ್ಟದಾಗಿ ಮಾಡ್ತೀನಿ, ಇನ್ನೆಂದೂ ಚೆನ್ನಾಗಿ ಮಾಡೊಲ್ಲ... ಇತ್ಯಾದಿ ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳಬೇಕಿತ್ತು"

"ನಿನ್ನ ಆರೋಗ್ಯ ಏನಾದರೂ ಸರಿ ಇಲ್ಲವೇನು? ಹಾಗೇನಾದರೂ ಇದ್ದರೆ, ಸ್ಟೇಜ್ ಮೇಲೆ ಬರಲೇಬಾರದಿತ್ತು. ಎಲ್ಲರ ನಗೆಪಾಟಲಿಗೆ ಗುರಿಯಾದೆ. ನನ್ನ ಸ್ನೇಹಿತರ ಮತ್ತು ನನ್ನ ತಲೆ ಕೆಟ್ಟುಹೋಯಿತು. ಅವನ ಮಾತು ಅವಳ ಕಿವಿಗೆ ಹೋಗಲೇ ಇಲ್ಲ. ಸಂತೋಷದ ಪ್ರತಿಮೂರ್ತಿಯಾಗಿದ್ದಳು. ವಾಸ್ತವ ಲೋಕದಿಂದ ದೂರವಿದ್ದಳು.

"ಡೋರಿಯನ್, ಡೋರಿಯನ್, ನೀನು ಸಿಗುವವರೆಗೆ ಆ್ಯಕ್ಟಿಂಗ್ ಒಂದೇ ನನ್ನ ಬದುಕಿನ ವಾಸ್ತವ ಸತ್ಯವಾಗಿತ್ತು. ನಾನು ಬದುಕಿದ್ದೇ ಥಿಯೇಟರ್ ಜೊತೆಗೆ, ಅದೇ ಪರಮಸತ್ಯ ಅಂದುಕೊಂಡಿದ್ದೆ. ಒಂದು ರಾತ್ರಿ ರೋಸಾಲಿಂಡ್ ಮತ್ತೊಂದು ರಾತ್ರಿ ಪೋರ್ಷಿಯಾ, ಮಗದೊಂದು ರಾತ್ರಿ ಜೂಲಿಯೆಟ್. ಬೀಟ್ರೈಸ್‌ನ ಸಂತೋಷವೇ ನನ್ನ ಸಂತೋಷ. ಕಾರ್ಡಿಲಿಯಾಳ ದುಃಖವೆಲ್ಲಾ ನನ್ನ ದುಃಖವೇ ಆಗಿತ್ತು. ನನ್ನ ಜೊತೆ ಆ್ಯಕ್ಟ್ ಮಾಡುವ ಸಾಮಾನ್ಯ ಜನರು ನನಗೆ ದೇವರಿದ್ದಂತೆ. ಬಣ್ಣ ಬಣ್ಣದ ದೃಶ್ಯಗಳೇ ನನ್ನ ಜಗತ್ತು. ನೆರಳುಗಳಲ್ಲದೆ ಬೇರೇನೂ ಗೊತ್ತಿರಲಿಲ್ಲ. ಅವುಗಳನ್ನೇ ನೀವೆಂದು ನಂಬಿದ್ದೆ. ನೀನು ಬಂದೆ. ಓ! ನನ್ನ ಪರಮ ಪ್ರೀತಿಯೇ! ನನ್ನಾತ್ಮವನ್ನು ಬಂಧಮುಕ್ತ ಗೊಳಿಸಿದೆ. ನಿಜವಾದದ್ದು ಏನು ಎಂಬುದನ್ನು ನನಗೆ ಕಲಿಸಿದೆ. ಇವತ್ತು ಮೊಟ್ಟ ಮೊದಲ ಬಾರಿಗೆ, ನಾನೆಂಥ ಭ್ರಮೆ, ಕೃತಕತೆ, ಹುಸಿತನಗಳಲ್ಲಿ ಬದುಕುತ್ತಿದ್ದೇನೆ ಎಂಬ ಅರಿವಾಯಿತು. ಇವತ್ತು ರಾತ್ರಿ ಮೊದಲ ಬಾರಿಗೆ ರೋಮಿಯೋ ಎಷ್ಟು ಅಸಹ್ಯಕರ ಎಂಬುದು ಅನುಭವಕ್ಕೆ ಬಂತು. ಹಚ್ಚಿದ ಬಣ್ಣದ ಅಡಿಯಲ್ಲಿನ ಮುದಿತನ, ಉದ್ಯಾನದಲ್ಲಿನ ದೀಪಗಳ ಕೃತಕತೆ, ದೃಶ್ಯಗಳಲ್ಲಿನ ಗ್ರಾಮ್ಯತೆ, ಭ್ರಮೆಯ ಬೆಳ್ದಿಂಗಳು, ನಾನಾಡುವ ಮಾತುಗಳು ನನ್ನದಲ್ಲದ್ದು! ಇದೆಲ್ಲಕ್ಕಿಂತ ಉನ್ನತವಾದದ್ದೇನನ್ನೋ ನನಗಾಗಿ ತಂದೆ. ಅದರ ಮುಂದೆ ಎಲ್ಲ ಕಲೆಯೂ ಕೇವಲ ಪ್ರತಿಫಲನ. ಪ್ರೀತಿ ಎಂದರೆ ಏನೆನ್ನುವುದನ್ನು ನನಗೆ ತಿಳಿಸಿಕೊಟ್ಟ ನನ್ನ ಪ್ರಿಯತಮನೆ! ನನ್ನ ಪ್ರಿಯತಮನೆ! ಪ್ರಿನ್ಸ್ ಚಾರ್ಮಿಂಗ್ ನನ್ನ ಒಲವಿನ ರಾಜಕುಮಾರ! ನನ್ನ ಬದುಕಿನ ರಾಜಕುಮಾರ! ಈ ನೆರಳುಗಳಿಂದ ಸೋತುಹೋಗಿದ್ದೇನೆ, ನನಗೆ ನನ್ನ ನಾಟಕ, ನಟನೆ ಪಾತ್ರ, ರಂಗಭೂಮಿ ಎಲ್ಲಕ್ಕಿಂತ ನೀನೇ ದೊಡ್ಡದು. ನಾಟಕದ ಸೂತ್ರದ ಬೊಂಬೆಗಳಿಂದ ಇನ್ನೂ ನನಗೆ ಏನಾಗಬೇಕಿದ್ದೆ? ಈ ರಾತ್ರಿ ಅದೇನಾಯಿತೋ! ನನ್ನೊಳಗಿನ ಎಲ್ಲವೂ

ಸೋರಿಹೋಗಿತ್ತು. ಇವತ್ತು ಎಲ್ಲ ದಿನಗಳಿಗಿಂತ ಅದ್ಭುತವಾಗಿ ಪಾತ್ರ ನಿರ್ವಹಿಸುತ್ತೇನೆ ಎಂದುಕೊಂಡಿದ್ದೆ. ಆದರೆ ನನ್ನಿಂದ ಏನೂ ಸಾಧ್ಯವಾಗುತ್ತಿಲ್ಲ ಎನಿಸಿತು. ನಂತರ ಇದ್ದಕ್ಕಿದ್ದಂತೆ ಎಲ್ಲವೂ ಅರಿವಾಯಿತು. ನಮ್ಮ ಪ್ರೀತಿಯ ಬಗ್ಗೆ ಯಾರಿಗೇನು ಅರ್ಥವಾಗುತ್ತೆ? ಡೋರಿಯನ್ ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗು, ಎಲ್ಲಿಗಾದರೂ ಯಾವುದಾದರೂ ಏಕಾಂತ ಸ್ಥಳಕ್ಕೆ. ಸ್ಟೇಜ್ ಅಂದರೆ ಅಸಹ್ಯವಾಗಿದೆ. ನನ್ನದಲ್ಲದ ಭಾವನೆಗಳನ್ನು ಅನುಕರಿಸಿ ತೋರಬೇಕು, ಅದನ್ನು ನೆನಪಿಸಿಕೊಂಡಾಗ ನನ್ನೆದೆ ಉರಿಯುತ್ತದೆ. ಇದೆಲ್ಲದರ ಅರ್ಥ ಏನೂಂತ ನಿನಗೆ ಹೊಳೆದಿರಬೇಕು. ನಾನೇನಾದರೂ ಹಾಗೆ ಮಾಡಿದರೂ ಕೂಡಾ ಪ್ರೀತಿಸುತ್ತಿರುವುದು, ಪ್ರೀತಿಗೆ ನಾನು ಮಾಡಿದ ಅನ್ಯಾಯ ಎನಿಸುತ್ತದೆ. ಇದರ ಅರಿವಾದದ್ದು ನಿನ್ನಿಂದಲೇ"

ಸೋಫಾ ಮೇಲೆ ಕುಕ್ಕರಿಸಿ ಕುಳಿತುಕೊಂಡು ಮುಖ ಪಕ್ಕಕ್ಕೆ ತಿರುಗಿಸಿ "ನನ್ನ ಪ್ರೀತಿಯ ಕೊಲೆಮಾಡಿಬಿಟ್ಟೆ" ಎಂದು ಗೊಣಗಿದ. ಆಶ್ಚರ್ಯದಿಂದ ಅವನ ಕಡೆ ನೋಡಿ ನಕ್ಕಳು. ಅವನು ಏನೂ ಮಾತಾಡಲಿಲ್ಲ ಮೆಲ್ಲನೆ ಅವನ ಸಮೀಪಕ್ಕೆ ಬಂದು ಅವನ ತಲೆಗೂದಲಲ್ಲಿ ಬೆರಳಾಡಿಸಿದಳು. ಮೊಣಕಾಲೂರಿ ಅವನ ಮುಂದೆ ಕುಳಿತು, ಅವನ ಕೈ ತೆಗೆದುಕೊಂಡು ತುಟಿಗಳಿಗೆ ಒತ್ತಿ ಇರಿಸಿದಳು. ಸರ್ರನೆ ಕೈಯನ್ನು ಹಿಂದಕ್ಕೆ ಎಳೆದುಕೊಂಡು, ಕಂಪಿಸಿದ, ಡೋರಿಯನ್. ನಂತರ ಜಿಗಿದೆದ್ದು ಬಾಗಿಲ ಕಡೆ ಓಡಿದ. ಹೌದು.... ನನ್ನ ಪ್ರೀತಿಯನ್ನು ಕೊಂದುಬಿಟ್ಟೆ. ನನ್ನ ಕಲ್ಪನೆಯ ಗರಿಗೆದರುತ್ತಿದ್ದೆ. ಈಗ ನನ್ನಲ್ಲಿ ಒಂದಿಷ್ಟು ಕುತೂಹಲವನ್ನೂ ಹುಟ್ಟುಹಾಕಲಾರೆ. ನನ್ನ ಮೇಲೆ ಯಾವುದೇ ಪರಿಣಾಮವನ್ನು ಬೀರಲಾರೆ. ನಿನ್ನದು ಅದ್ಭುತ ಪ್ರತಿಭೆ, ಬುದ್ಧಿವಂತೆ, ಜೀನಿಯಸ್ ಎಂದೆಲ್ಲಾ ನಂಬಿ ಪ್ರೀತಿಸಿದೆ. ದೊಡ್ಡ ದೊಡ್ಡ ಕವಿ, ನಾಟಕಕಾರರ ಕನಸುಗಳನ್ನು ಸಾಕ್ಷಾತ್ಕಾರಗೊಳಿಸಿದೆ ಎಂದು ನಂಬಿದ್ದೆ. ಆದರೆ ಅದೆಲ್ಲ ಧೂಳಿಪಟವಾಯಿತು. ನೀನೊಬ್ಬಳು ಮೂರ್ಖಳು. ಒಳಗಿಂದ ಏನೇನೂ ಅಲ್ಲ. ದೇವರೆ! ನಿನ್ನಂಥವಳನ್ನು ಪ್ರೀತಿಸಿದೆನಲ್ಲ! ನಿಜವಾಗಿಯೂ ನಾನೊಬ್ಬ ಮೂರ್ಖ! ಈಗ ನೀನು ನನಗೆ ಏನೂ ಅಲ್ಲ! ಸಂಬಂಧವೂ ಇಲ್ಲ. ಮತ್ತೆಂದೂ ನಿನ್ನನ್ನು ನೋಡುವುದಿಲ್ಲ. ನಿನ್ನ ಬಗ್ಗೆ ಯೋಚಿಸುವುದೂ ಇಲ್ಲ. ನೀನು ನನಗೆ ಏನೆಲ್ಲ ಆಗಿದ್ದೆ, ಒಂದು ಕಾಲದಲ್ಲಿ, ಒಂದು ಕಾಲದಲ್ಲೇ ಅಲ್ಲ.... ಅಬ್ಬ! ಅದರ ಬಗ್ಗೆ ಯೋಚಿಸುವುದೇ ಬೇಡ! ನಿನ್ನ ಮೇಲೆ ಎಂದೂ ಕಣ್ಣುಹಾಕಬಾರದಿತ್ತು ಎನಿಸುತ್ತದೆ. ನನ್ನ ಬದುಕಿನ ರೊಮಾನ್ಸನ್ನೇ ಹಾಳು ಮಾಡಿಬಿಟ್ಟೆ! ನಿನ್ನ ಕಲೆಯನ್ನು ಹಾಳುಮಾಡುತ್ತೆ ಎಂದು ತಿಳಿದವಳಿಗೆ ಪ್ರೀತಿಯ ಅರ್ಥ ಏನೂಂತ ತಿಳಿಯೋದು ನಿನಗೆಲ್ಲಿ ಸಾಧ್ಯ? ನಿನ್ನ ಕಲೆಯಿಲ್ಲದೆ ನೀನು ಏನೇನೂ ಅಲ್ಲ. ನಿನ್ನ ಈ ಕಲಾ ಪ್ರತಿಭೆಯಿಂದ ನಿನ್ನನ್ನು ಎಲ್ಲಿಗೆ ಯಾವ ಎತ್ತರಕ್ಕೆ ಎಷ್ಟು ಪ್ರಸಿದ್ಧಿಗೆ ಕೊಂಡೊಯ್ಯುತ್ತಿದ್ದೆ! ಪ್ರಪಂಚವೇ ನಿನ್ನನ್ನು ಪೂಜಿಸುವಂತೆ ಆರಾಧಿಸುವಂತೆ ಮಾಡುತ್ತಿದ್ದೆ. ನಿನ್ನ ಹೆಸರಿನ ಜೊತೆಗೆ ನನ್ನ ಹೆಸರು ಹೊಂದಿಕೊಳ್ಳುತ್ತಿತ್ತು. ಆದರೆ ಈಗ ನಿನ್ನ ಸ್ಥಾನ ಏನು? ಮುದ್ದಾದ ಮುಖ ಹೊಂದಿದ, ಮೂರನೇ ದರ್ಜೆ ಕಲಾವಿದೆ ಅಷ್ಟೇ!"

ಹುಡುಗಿ ಬಿಳಿಚಿಕೊಂಡಳು. ಅಡಿಯಿಂದ ಮುಡಿವರೆಗೆ ಕಂಪಿಸಿದಳು. ಎರಡು ಕೈಗಳನ್ನು ಗಟ್ಟಿಯಾಗಿ ಹೆಣೆದುಕೊಂಡಳು. ಗಂಟಲು ಕಟ್ಟಿತು.

"ಡೋರಿಯನ್ ಇದನ್ನು ನೀನು ಸೀರಿಯಸ್ಸಾಗಿ ಹೇಳುತ್ತಿಲ್ಲ ತಾನೇ? ಇದು ನಿನ್ನ ನಟನೆ" ಎಂದು ಕೇಳಿ ಕೇಳಿಸದಂತೆ ಹೇಳಿದಳು.

"ನಟನೆ! ಅದೆಲ್ಲ ನಿನಗೆ ಬಿಟ್ಟಿದ್ದು. ನೀನು ಬಹಳ ಚೆನ್ನಾಗಿ ನಾಟಕ ಮಾಡ್ತೀ" ಎಂದು ಕಹಿದನಿಯಲ್ಲಿ ಹೇಳಿದ.

ಮೊಣಕಾಲೂರಿ ಕುಳಿತಿದ್ದವಳು ಎದ್ದು, ನೋವಿನ ಮುಖದೊಂದಿಗೆ, ಅವನ ಬಳಿಗೆ ಬಂದಳು, ಅವನ ತೋಳಿನ ಮೇಲೆ ಕೈಯಿರಿಸಿದಳು. ಅವನು ಅದನ್ನು ನಿಷ್ಠುರವಾಗಿ ತೆಗೆದು ತಳ್ಳಿದ. "ನನ್ನನ್ನು ಮುಟ್ಟಬೇಡ" ಅಬ್ಬರಿಸಿ ಹೇಳಿದ.

ಸಣ್ಣಗೆ ಅಳುವಿನ ದನಿ ಕೇಳಿಸಿತು. ಅವನ ಕಾಲಿಗೆ ಬಿದ್ದಳು. ಹೊಸಕಿ ಹಾಕಿದ ಹೂವಿನಂತೆ ಕಾಣಿಸಿದಳು. ಡೋರಿಯನ್ ಡೋರಿಯನ್! ಬಿಟ್ಟು ಹೋಗಬೇಡ ಕ್ಷಮಿಸಿಬಿಡು. ಇನ್ನು ಮುಂದೆ ಚೆನ್ನಾಗಿ ಅಭಿನಯಿಸುತ್ತೇನೆ. ಕೆಟ್ಟದ್ದಾಗಿ ಅಭಿನಯಿಸಲು ಕಾರಣ, ನಿನ್ನ ಬಗ್ಗೆಯೇ ಯೋಚಿಸುತ್ತಿದ್ದೆ. ಆದರೆ ಮುಂದೆ ಪ್ರಯತ್ನ ಮಾಡ್ತೀನಿ! ಪ್ರಯತ್ನ ಮಾಡ್ತೀನಿ.

ನಿನ್ನ ಬಗ್ಗೆ ಇದ್ದ ಅತಿಯಾದ ಪ್ರೀತಿ ಅಡ್ಡಬಂತು. ನೀನು ನನ್ನನ್ನು ಚುಂಬಿಸದಿದ್ದರೆ, ಪ್ರೀತಿಯ ಸ್ವರೂಪ ಗೊತ್ತಾಗುತ್ತಿರಲಿಲ್ಲ. ನಾವಿಬ್ಬರೂ ಪರಸ್ಪರ ಚುಂಬಿಸಿಕೊಂಡೆವು, ಡೋರಿಯನ್ ಈಗೊಂದು ಮುತ್ತು ಕೊಡಲಾರೆಯಾ? ನನ್ನ ಬಿಟ್ಟು ಹೋಗಬೇಡ. ನಿನ್ನ ಬಿಟ್ಟು ನನಗೆ ಇರಲು ಸಾಧ್ಯವಿಲ್ಲ ! ನನ್ನ ಬಿಟ್ಟು ಮಾತ್ರ ಹೋಗಬೇಡ ನನ್ನ ತಮ್ಮ... ಇಲ್ಲ; ಪರವಾಗಿಲ್ಲ. ಅವನು ನಿಜವಾಗಿ ಹಾಗೆ ಮಾಡಲಾರ ಸುಮ್ಮನೆ ತಮಾಶೆಗೆ!? ಆದರೆ ನೀನು! ಓ ನನ್ನನ್ನು ಕ್ಷಮಿಸಲಾರೆಯಾ ಈ ದಿನ ಆದದ್ದಕ್ಕೆ? ಕಷ್ಟಪಡ್ತೀನಿ ಇಂಥ ತಪ್ಪು ಮತ್ತೆ ಆಗದ ಹಾಗೆ ನೋಡ್ಕೊಳ್ತೀನಿ. ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸ್ತೀನಿ, ಅಲ್ಲದೆ ಇದೊಂದೇ ಬಾರಿ ನನಗೆ ನಿನ್ನನ್ನು ಖುಷಿಪಡಿಸಲು ಆಗದೆ ಹೋದದ್ದು. ಆದರೂ ನೀನು ಹೇಳಿದ್ದು ಸತ್ಯ. ನಾನು ಕಲಾವಿದೆ ಅನ್ನುವುದನ್ನು ತೋರಿಸಿಕೊಳ್ಳಬೇಕಿತ್ತು. ಆದರೆ ನಾನೊಬ್ಬಳು ಹುಚ್ಚಿ. ಏನೂ ಮಾಡೋಕೆ ಆಗಲಿಲ್ಲ. ನನ್ನ ಕೈ ಬಿಡಬೇಡ! ನನ್ನ ಕೈ ಬಿಡಬೇಡ ಡೋರಿಯನ್ ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಕೆಳಗೆ ಮುದುಡಿಕೊಂಡು ಬಿದ್ದಿದ್ದಳು. ಆದರೆ ಸುಂದರ ಕಣ್ಣುಗಳ ಡೋರಿಯನ್ ಗ್ರೇ ಅವಳನ್ನು ಆ ಸ್ಥಿತಿಯಲ್ಲಿ ನೋಡಿದ. ಅಸಹ್ಯದಿಂದ ಮುಖ ಕಿವುಚಿಕೊಂಡ. ಪ್ರೀತಿಸುವುದನ್ನು ಒಮ್ಮೆ ನಿಲ್ಲಿಸಿದರೆ ಸಾಕು, ಪ್ರೀತಿಸಿದ ವ್ಯಕ್ತಿ ಬಗ್ಗೆ ಎಂದಿಗೂ ಮೊದಲಿನ ಸ್ಥಿತಿಗೆ ತಿರುಗುವುದಿಲ್ಲ. ಸಿಬಿಲ್ ಈಗ ಅವನಿಗೆ ಪೂರ್ತಿಯಾಗಿ ಮೆಲೋಡ್ರಮಾಟಿಕ್ ಆಗಿ ಕಾಣಿಸಿಕೊಂಡಳು. ಅವಳ ಕಂಬನಿ ಅವನನ್ನು ಇನ್ನಷ್ಟು ಸಿಟ್ಟಿಗೆ ಗುರಿಮಾಡಿತು. "ನಾನು ಹೊರಟೆ" ಸಮಾಧಾನವಾಗಿ ಹೇಳಿದ. ನಾನು ನಿಷ್ಠುರಿಯಾಗೋಕೆ ಇಷ್ಟಪಡೋದಿಲ್ಲ ಆದರೆ ನಾನು ನಿನ್ನನ್ನು ಮತ್ತೆಂದೂ ನೋಡೋದಿಲ್ಲ. ನನ್ನನ್ನು ಬಹಳವಾಗಿ ನಿರಾಶೆಗೊಳಿಸಿಬಿಟ್ಟಿದ್ದೀಯ."

ಮೌನವಾಗಿ ಅತ್ತಳು. ಪ್ರತಿಯಾಗಿ ಉತ್ತರಿಸಲೇ ಇಲ್ಲ. ಆದರೆ ಅವನ ಬಳಿಗೆ ಬಂದಳು. ತನ್ನ ಪುಟ್ಟ ಕೈಗಳು ಅವನತ್ತ ಚಾಚಲು ಪ್ರಯತ್ನಿಸುತ್ತಿದ್ದಳು. ಅದರ ಕಡೆ ಗಮನವನ್ನು ಕೊಡಲೇ ಇಲ್ಲ. ನಿರ್ದಯನಾಗಿ ಅಲ್ಲಿಂದ ಹೊರಟೇ ಬಿಟ್ಟ. ಒಂದೆರಡು ನಿಮಿಷಗಳಲ್ಲಿ

ಥಿಯೇಟರಿಂದ ಹೊರಗೆ ಬಂದಿದ್ದ. ಎಲ್ಲಿ ಹೋಗುತ್ತಿದ್ದಾನೋ ಅವನಿಗೆ ಗೊತ್ತಾಗಲಿಲ್ಲ. ಅರೆಗತ್ತಲ ಬೀದಿಗಳಲ್ಲಿ ಪರಿಚಯವಿಲ್ಲದ ಗಲ್ಲಿಗಳಲ್ಲಿ ಕೆಟ್ಟದಾಗಿ ಕಾಣುತ್ತಿದ್ದ ಮನೆಗಳಿದ್ದ ಎಡೆಯಲ್ಲಿ – ಅಡ್ಡಾಡಿದ. ಕರ್ಕಶ ದನಿಗಳಲ್ಲಿ, ಕರ್ಕಶವಾದ ನಗುವಿನೊಂದಿಗೆ ಹಿಂಬಾಲಿಸುತ್ತಿದ್ದ ಕುಡುಕ ಹೆಂಗಸರು, ಗಂಡಸರು ಅವನನ್ನು ಹಿಂಬಾಲಿಸುತ್ತಿದ್ದರು. ತಮ್ಮ ನಗೆಗೆ, ಲೇವಡಿಗೆ ಅವನನ್ನೇ ಗುರಿ ಮಾಡಿದ್ದರು. ಮನೆ ಮುಂದೆ ಮಕ್ಕಳು ಕೂತಿದ್ದು ಜೋರಾಗಿ ಕಿರುಚುತ್ತಿದ್ದುದನ್ನು ಕೇಳಿಸಿಕೊಳ್ಳುತ್ತಿದ್ದ. ಬೆಳಗಾದಾಗ, ತಾನು ಕೊವೆಂಟ್ ಗಾರ್ಡನ್‌ನಲ್ಲಿದ್ದುದು ಅರಿವಿಗೆ ಬಂತು. ಹೂಗಳು ತುಂಬಿದ ಗಾಡಿಗಳು ಗಡಗಡ ಸಾಗುತ್ತಿದ್ದವು. ಗಾಳಿ ಹೂಗಳ ಸುವಾಸನೆಯಿಂದ ಸ್ನಿಗ್ಧವಾಗಿತ್ತು. ಹೂಗಳ ಅಂದವನ್ನು ನೋಡುತ್ತಿದ್ದಂತೆ ಅವನೆದೆಯಲ್ಲಿ ಸಣ್ಣಗೆ ನೋವು ಕಾಣಿಸಿತು. ಹಾಗೆಯೇ ನಡೆಯುತ್ತ ಮಾರ್ಕೆಟ್ ಇದ್ದೆಡೆಗೆ ಸಾಗಿದ. ಗಾಡಿಗಳಲ್ಲಿ ತುಂಬಿ ತಂದ ಹೂಗಳನ್ನು ರಾಶಿ ರಾಶಿಯಾಗಿ ಸುರಿಯುತ್ತಿದ್ದರು. ಒಬ್ಬ ಗಾಡಿಯವನು ಅವನಿಗೊಂದಷ್ಟು ಚೆರ್‍ರಿ ಹಣ್ಣುಗಳನ್ನು ನೀಡಿದ. ಅವನಿಗೆ ಧನ್ಯವಾದ ಹೇಳಿದ. ಹಣ ಕೊಟ್ಟರೆ ಸ್ವೀಕರಿಸಲಿಲ್ಲ. ಅವನಿಗೆ ಆಶ್ಚರ್ಯವಾಯಿತು. ಅವನೇಕೆ ಹಣ ತೆಗೆದುಕೊಳ್ಳಲಿಲ್ಲ ಎನ್ನುವುದಕ್ಕೆ ಕಾರಣವೇನು ಎಂದು ಯೋಚಿಸಿದ. ಮಾರ್ಕೆಟ್ ಜನರಿಂದ ತುಂಬಿತ್ತು. ವ್ಯಾಪಾರ ವಹಿವಾಟು ಭರ್ಜರಿಯಾಗಿ ಸಾಗುತ್ತಿತ್ತು.

ಸ್ವಲ್ಪ ಸಮಯದ ನಂತರ ಒಂದು ಗಾಡಿ ಹಿಡಿದು ಮನೆಯ ಕಡೆ ಹೊರಟ. ಕೆಲ ನಿಮಿಷಗಳವರೆಗೆ ಬಾಗಿಲ ಮೆಟ್ಟಿಲುಗಳ ಮೇಲೆ ಆ ಕಡೆ ಈ ಕಡೆ ಓಡಾಡಿದ. ಹೊರಗೆ ಸುತ್ತಲೂ ಕಣ್ಣಾಡಿಸಿದ. ನಿರ್ಮಲವಾದ ಆಕಾಶ ಕಾಣಿಸಿತು. ಹತ್ತಿರದ ಚೌಕ ಇನ್ನೂ ನಿರ್ಜನವಾಗಿತ್ತು. ಕಿಟಕಿ ಬಾಗಿಲುಗಳೂ ತೆರೆದಿರಲಿಲ್ಲ. ಮನೆಯ ಪ್ರವೇಶ ದ್ವಾರದಲ್ಲಿ ಇನ್ನೂ ದೀಪಗಳು ಉರಿಯುತ್ತಿದ್ದವು. ಅವುಗಳನ್ನು ಆರಿಸಿದ ಮತ್ತು ತನ್ನ ಹ್ಯಾಟ್ ಮತ್ತು ಮೇಲಂಗಿಯನ್ನು ಕಳಚಿ ಟೇಬಲ್ ಮೇಲೆ ಇರಿಸಿದ. ಲೈಬ್ರರಿಯ ಮೂಲಕವಾಗಿ ಹಾದು ತನ್ನ ಕೋಣೆಗೆ ಹೋದ. ಅಷ್ಟಾಕಾರದಲ್ಲಿದ್ದ ಆ ಕೋಣೆಯನ್ನು ವಿಲಾಸಿ ಜೀವನ ಪ್ರೀತಿಯ ದ್ಯೋತಕವಾಗಿ ಚೆನ್ನಾಗಿ ಅಲಂಕಾರ ಮಾಡಿಸಿದ್ದ. ಬಾಗಿಲ ಚಿಲಕ ತೆಗೆಯುತ್ತಿದ್ದಂತೆ ತಕ್ಷಣ ಅವನ ಕಣ್ಣಿಗೆ ಬೇಸಿಲ್‌ನ ಕಲಾಕೃತಿ ಕಣ್ಣಿಗೆ ಬಿತ್ತು. ತನ್ನದೇ ಭಾವಚಿತ್ರವನ್ನು ನೋಡಿ ಒಮ್ಮೆಲೇ ಏನೋ ಆದವನಂತೆ ಒಂದೆರಡು ಹೆಜ್ಜೆ ಹಿಂದೆ ಹೋದ. ಮತ್ತೆ ತನ್ನ ಕೋಣೆ ಪ್ರವೇಶಿಸಿದ. ದಿಕ್ಕುಗೆಟ್ಟವನಂತೆ ಚಡಪಡಿಸಿದ. ಬಟನ್ ಹೋಲ್‌ಗೆ ಸಿಕ್ಕಿಸಿದ್ದ ಗುಲಾಬಿಯನ್ನು ಸಂಕೋಚದಿಂದಲೇ ತೆಗೆದಿರಿಸಿದ. ಮತ್ತೆ ತನ್ನ ಭಾವಚಿತ್ರವಿದ್ದ ಜಾಗಕ್ಕೆ ಬಂದ. ಮಂದವಾದ ಬೆಳಕಿನಲ್ಲಿ ನೋಡಿದಾಗ ಯಾಕೋ ಅವನಿಗೆ ತನ್ನ ಮುಖ ಬದಲಾದಂತೆ ಕಾಣಿಸಿತು. ನೋಟವೂ ಕೂಡಾ ಬೇರೆಯಾಗಿದ್ದಂತೆ ಭಾಸವಾಯಿತು. ಯಾರಾದರೂ ನೋಡಿದರೆ, ಒಂದು ಚೂರು ಕ್ರೌರ್ಯವಿದ್ದಂತೆ ಕಾಣಿಸುತ್ತಿತ್ತು. ಬಹಳ ವಿಚಿತ್ರವೆನಿಸಿತು. ತಿರುಗಿ ಕಿಟಕಿ ಕಡೆ ಬಂದು ಪರದೆಯನ್ನು ಸರಿಸಿದ. ಬೆಳಕಿನ ಪ್ರವಾಹವೇ ಒಳಗೆ ನುಗ್ಗಿ ಬಂದಂತಾಯಿತು. ಆದರೆ ತನ್ನ ಭಾವಚಿತ್ರದಲ್ಲಿ ಅಭಿವ್ಯಕ್ತವಾದ ಭಾವ ಮಾತ್ರ ಬದಲಾಗಿರಲಿಲ್ಲ. ಹಾಗೆ ನೋಡಿದರೆ, ಹಿಂದೆ ನೋಡಿದ್ದಕ್ಕಿಂತ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಸೂರ್ಯನ ಬೆಳಕಿನಿಂದಾಗಿ, ಮುಖದ ಮೇಲಿನ

ಕ್ರೌರ್ಯದ ರೇಖೆಗಳು ಇನ್ನಷ್ಟು ತೀಕ್ಷ್ಣವಾಗಿ ಕಾಣುತ್ತಿತ್ತು. ಯಾವುದೋ ಅಪರಾಧ ಮಾಡಿದ ಮೇಲೆ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡರೆ ಹೇಗಿರುತ್ತೋ ಹಾಗೆ ಕಾಣಿಸುತ್ತಿತ್ತು.

ಕಣ್ಣುಜ್ಜಿಕೊಂಡು, ಭಾವಚಿತ್ರದ ಇನ್ನಷ್ಟು ಹತ್ತಿರಕ್ಕೆ ಬಂದ. ಟೇಬಲ್ ಮೇಲೆ ಹೆನ್ರಿ ಕೊಟ್ಟಿದ್ದ ಉಡುಗೊರೆಗಳಲ್ಲಿ ಮನ್ಮಥನ ದಂತದ ಮೂರ್ತಿಯಿತ್ತು. ಅದನ್ನು ಕೈಗೆತ್ತಿಕೊಂಡು ಸೂಕ್ಷ್ಮವಾಗಿ ಪರೀಕ್ಷಿಸಿದ. ಅದರ ತುಟಿಗಳ ಮೇಲೆ ಕ್ರೂರತೆಯನ್ನು ಬಿಂಬಿಸುವ. ರೇಖೆಗಳು ಇರಲಿಲ್ಲ. ಏನಿದರ ಅರ್ಥ? ಕಣ್ಣುಜ್ಜಿಕೊಂಡು ಮತ್ತೆ ತನ್ನ ಭಾವಚಿತ್ರದ ಜಾಗಕ್ಕೆ ಬಂದು, ಚಿತ್ರವನ್ನು ಗಂಭೀರವಾಗಿ ಪರೀಕ್ಷಿಸಿದ. ಆದರೆ ಅದರಲ್ಲಿ ಯಾವ ಬದಲಾವಣೆಯೂ ಇರಲಿಲ್ಲ. ಮೊದಲಿಂದ ಹೇಗಿತ್ತೋ ಹಾಗೇ ಇತ್ತು. ಆದರೆ ಅವನಿಗೆ ಬದಲಾವಣೆ ಆಗಿದೆ ಎಂತಲೇ ಅನಿಸುತ್ತಿತ್ತು. ಅದು ಭ್ರಮೆಯಲ್ಲ. ಗಮನಿಸಿದ ಬದಲಾವಣೆ ನಿಜವಾಗಿಯೂ ಆಗಿತ್ತು. ಕುರ್ಚಿಯಲ್ಲಿ ಕುಕ್ಕರಿಸಿದ. ಯೋಚನೆಗೆ ಜಾರಿದ. ಇದ್ದಕ್ಕಿದ್ದಂತೆ ಅವನಿಗೆ, ಬೇಸಿಲ್ ತನ್ನ ಭಾವಚಿತ್ರ ಪೂರ್ತಿ ಮಾಡಿ ಮುಗಿಸಿದ ದಿನ ಹೇಳಿದ ಮಾತುಗಳು ನೆನಪಾದವು. ಅವನಿಗೆ ಚೆನ್ನಾಗಿ ನೆನಪಿದೆ. ಅವನಿಗಿದ್ದ ಒಂದು ಹುಚ್ಚು ಆಸೆಯೆಂದರೆ, ತಾನು ಯಾವಾಗಲೂ ಯುವಕನಾಗಿರಬೇಕು. ಭಾವಚಿತ್ರ ಮುದಿಯಾಗಬೇಕು ಎಂಬುದಾಗಿತ್ತು. ಅಲ್ಲದೆ ತನ್ನ ಸೌಂದರ್ಯ ಮುಕ್ಕಾಗದೆ, ಭಿತ್ತಿಯಲ್ಲಿನ ಆಕೃತಿ ತನ್ನ ಪಾಪಗಳ ಭಾವೋದ್ರೇಕಗಳನ್ನು ಹೊರಬೇಕು ಎಂದು ಆಶಿಸಿದ್ದ. ಸಾಲದ್ದಕ್ಕೆ ಈ ಭಾವಚಿತ್ರದಲ್ಲಿನ ಆಕೃತಿಯಲ್ಲಿ ನೋವಿನ ವೇದನೆಯ ಗೆರೆಗಳಿಂದ ತುಂಬಿಹೋಗಿದ್ದಾಗ, ತಾನು ಮಾತ್ರ ಬಾಲ್ಯದ ಹುಡುಗುತನದ ತಾಜಾತನದಲ್ಲಿ ಮೋಹಕವಾಗಿ ಕಾಣಿಸಬೇಕು. ಅವನ ಆ ಆಸೆಗಳೆಲ್ಲ ನಿಜವಾಗಿ ಫಲಿಸಿವೆಯೇ?... ಅವೆಲ್ಲ.... ಅವೆಲ್ಲ ಸಾಧ್ಯವಿಲ್ಲ. ಅಂಥಾದ್ದೆಲ್ಲ ಯೋಚಿಸಲೂ ಭಯವಾಗುತ್ತೆ. ಆದರೂ ಆ ಚಿತ್ರದಲ್ಲಿ ತನ್ನ ಮುಂದಿರುವ ತನ್ನದೇ ಚಿತ್ರದಲ್ಲಿ ಕ್ರೌರ್ಯವು ಎದ್ದು ಕಾಣುತ್ತಿದೆ.

ಕ್ರೌರ್ಯ? ನಿಜವಾಗಿಯೂ ತಾನು ಕ್ರೂರಿಯೇ? ತಪ್ಪು ಆಗಿರುವುದು ಆ ಹುಡುಗಿಯಿಂದಲೇ ಹೊರತು ಅವನಿಂದಲ್ಲ. ತುಂಬ ಒಳ್ಳೆ ಕಲಾವಿದೆ ಎಂದು ಕನಸು ಕಂಡಿದ್ದ. ತನ್ನ ಪ್ರೀತಿಯೆಲ್ಲವನ್ನೂ ಧಾರೆ ಎರೆದಿದ್ದ. ಆದರೆ ಅವಳು ಅವನನ್ನು ತುಂಬಾ ನಿರಾಶೆಗೊಳಿಸಿದಳು. ಆಳವಾಗಲೀ ಅರ್ಹತೆಯಾಗಲೀ ಇರಲಿಲ್ಲ. ಆದರೂ ಅವನಲ್ಲಿ ಒಂದು ರೀತಿಯ ಅಪರಾಧಿ ಭಾವ ಮೂಡಿತು. ಅವನ ಕಾಲಡಿಯಲ್ಲಿ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳುತ್ತಾ ಕುಳಿತದ್ದು ನೆನಪಾಗಿ ಸಂಕಟವಾಯಿತು. ಆ ಸ್ಥಿತಿಯಲ್ಲಿದ್ದರೂ ತಾನೆಷ್ಟು ನಿರ್ದಯಿಯಾಗಿದ್ದೆ ಎಂದುಕೊಂಡ.

ತಾನೇಕೆ ಹಾಗೆ ವರ್ತಿಸಿದೆ. ತಾನೇಕೆ ಅಷ್ಟು ನಿರ್ದಾಕ್ಷಿಣ್ಯವಾಗಿ ನಡೆದುಕೊಂಡೆ. ತನ್ನಾತ್ಮವೇಕೆ ಅಷ್ಟು ಕಲ್ಲಾಗಿ ಹೋಗಿತ್ತು. ಎಂದೆಲ್ಲಾ ಹಳಿದುಕೊಂಡ. ಅವನೂ ಸಹ ನೋವನ್ನು ಅನುಭವಿಸದೆ ಇರಲಿಲ್ಲ. ನಾಟಕ ನೋಡುತ್ತಿದ್ದ ಮೂರು ಗಂಟೆಗಳ ಕಾಲ ಅನುಭವಿಸಿದ ನೋವು ನೂರಾರು ವರ್ಷಗಳಿಗಿಂತ ಹೆಚ್ಚಿನದಾಗಿತ್ತು. ಕ್ಷಣ ಕ್ಷಣವೂ ಅತಿಯಾದ ಹಿಂಸೆಯನ್ನು ಅನುಭವಿಸಿದ. ತನ್ನ ಬದುಕಿನಷ್ಟೇ ಅವಳ ಬದುಕೂ ಅಮೂಲ್ಯ. ಅವಳು ಅವನನ್ನು ನೋಯಿಸಿದ್ದು ಕ್ಷಣಗಳಷ್ಟೇ! ಆದರೆ ಅವಳು ಅವನಿಂದ ಯುಗಾಂತದವರೆಗೆ ನೋವುಂಡಳು. ಹೆಂಗಸರು ದುಃಖ ಅನುಭವಿಸುವುದರಲ್ಲಿ ಗಂಡಸರಿಗಿಂತ ಸಮರ್ಥರು. ತಮ್ಮ ಭಾವನೆಗಳಲ್ಲಿ

ಬದುಕುತ್ತಾರೆ. ಅವರಿಗೆ ಅವರ ಭಾವನೆಗಳೇ ಮುಖ್ಯ. ಹೆನ್ರಿ ಹೇಳಿದ್ದ. ಹೆಂಗಸರ ಬಗ್ಗೆ ಅವನಿಗೆ ಚೆನ್ನಾಗಿ ಗೊತ್ತಿದೆ. ಹಾಗಿರುವಾಗ ಸಿಬಿಲ್ ಬಗ್ಗೆ ಅವನೇಕೆ ಯೋಚಿಸಬೇಕು? ಈಗ ಅವಳು ಅವನ ದೃಷ್ಟಿಯಲ್ಲಿ ಏನೇನೂ ಅಲ್ಲ. ಆದರೆ ಚಿತ್ರ? ಅದರ ಬಗ್ಗೆ ಏನು ಹೇಳೋದು? ಅದು ತನ್ನ ಜೀವನದ ರಹಸ್ಯವನ್ನು ಅಡಗಿಸಿಕೊಂಡಿದೆ. ತನ್ನ ಕಥೆ ಹೇಳುತ್ತಾ. ತನ್ನ ಸೌಂದರ್ಯವನ್ನು ತಾನೇ ಪ್ರೀತಿಸುವಂತೆ ಕಲಿಸಿದೆ. ಅದು ತನ್ನ ಆತ್ಮವನ್ನು ದ್ವೇಷಿಸುವಂತೆ, ಅಸಹ್ಯ ಪಡುವಂತೆ, ಕಲಿಸುವುದೇನು? ಮತ್ತೊಮ್ಮೆ ಅದರ ಕಡೆ ನೋಡಲು ಸಾಧ್ಯವಾಗುವುದೇನು.

ಇಲ್ಲ, ಉದ್ರಿಕ್ತ ಭಾವನೆಗಳನ್ನು ಕವಿದಿರುವ ಕೇವಲ ಭ್ರಮೆ. ಕಳೆದ ಹಿಂದಿನ ಭಯಾನಕ ರಾತ್ರಿಯಲ್ಲಿ ಕಾಡಿದ ನೆನಪಿನ ಪ್ರೇತಗಳನ್ನು ಹಿಂದೆಯೇ ಉಳಿಸಿದ. ಇದ್ದಕ್ಕಿದ್ದಂತೆ, ಅವನ ಬುದ್ಧಿಗೆ ಒಂದು ಹೊಳಹು ಕಾಣಿಸಿತು. ಭಾವಚಿತ್ರ ಏನೇನೂ ಬದಲಾಗಿರಲಿಲ್ಲ. ಹಾಗೆ ಬದಲಾಗಿದೆ ಎಂದು ಭಾವಿಸಿದ್ದು ಅವನ ಮೂರ್ಖತನವಾಗಿತ್ತು; ಭ್ರಮೆಯಾಗಿತ್ತು. ಆದರೂ ಅದು ಅವನನ್ನು ನೋಡುತ್ತಲೇ ಇತ್ತು, ಅದೇ ವಿಕೃತ ಮುಖದಲ್ಲಿ ಕ್ರೂರನಗೆ ಚೆಲ್ಲುತ್ತಾ. ಅದರ ಹೊಳೆವ ಕೂದಲು ಬೆಳಗಿನ ಬೆಳಕಲ್ಲಿ ಇನ್ನಷ್ಟು ಕಾಂತಿಯುಕ್ತವಾಗಿತ್ತು. ಅದರ ನೀಲಿ ಕಣ್ಣುಗಳು ತನ್ನ ಕಣ್ಣುಗಳತ್ತಲೇ ನೋಡುತ್ತಿತ್ತು. ಅವನಿಗೆ, ತನ್ನ ಬಗೆಗಿಂತ ಭಾವಚಿತ್ರದ ಆಕೃತಿಯನ್ನು ನೋಡಿ ಅಯ್ಯೋ ಎನಿಸಿತು. ಅದು ಬದಲಾವಣೆ ಆಗಿತ್ತು, ಮುಂದೆಯೂ ಆಗುವುದು. ಅದರ ಹೊಂಬಣ್ಣ ಬೆಳ್ಳಗಾಗುವುದು. ಅದರ ಕೆಂಪು ಬಿಳಿ ಗುಲಾಬಿಗಳು ಸತ್ತು ಹೋಗುವುದು. ಪ್ರತಿಯೊಂದು ಪಾಪದ ಕಳಂಕ ಬಿಳುಪನ್ನು ಕಪ್ಪಾಗಿಸುವುದು. ಆದರೆ ಅವನು ಪಾಪ ಮಾಡುವುದಿಲ್ಲ. ಚಿತ್ರ ಬದಲಾಗಲಿ ಬದಲಾಗದಿರಲಿ, ಅದು ಅವನ ಅಂತಃಪ್ರಜ್ಞೆಯ ಸಂಕೇತವಾಗಿತ್ತು. ಯಾವುದೇ ಆಮಿಷಗಳಿಗೆ ಬಲಿಯಾಗುವುದಿಲ್ಲ. ಲಾರ್ಡ್ ಹೆನ್ರಿಯನ್ನು ಇನ್ನು ಮೇಲೆ ಭೇಟಿಯಾಗುವುದೂ ಇಲ್ಲ. ಅವನ ಆ ವಿಷ ಪೂರಿತ ಮಾತುಗಳನ್ನು ಸಿದ್ಧಾಂತಗಳನ್ನು ಕೇಳಿಸಿಕೊಳ್ಳುವುದೂ ಇಲ್ಲ. ಮತ್ತೆ ಸಿಬಿಲ್ ಬಳಿಗೆ ಹೋಗಿ ತಾನು ಮಾಡಿದ ತಪ್ಪುಗಳಿಗಾಗಿ ಕ್ಷಮೆ ಕೋರುತ್ತಾನೆ. ಮದುವೆಯಾಗುತ್ತಾನೆ. ಪ್ರೀತಿಸುತ್ತಾನೆ. ಹೌದು ಅದು ಅವನ ಕರ್ತವ್ಯ. ಅವನು ಅನುಭವಿಸಿದ್ದಕ್ಕಿಂತ ಹೆಚ್ಚಾಗಿ ಅವಳು ಅನುಭವಿಸಿರುತ್ತಾಳೆ. ಪಾಪದ ಹುಡುಗಿ? ಅವನು ಸ್ವಾರ್ಥಿ, ಅವಳ ಜೊತೆ ಕ್ರೂರವಾಗಿ ನಡೆದುಕೊಂಡಿದ್ದ. ಅವನ ಬಗ್ಗೆ ಅವಳು ತಳೆದಿದ್ದ ಪ್ರೀತಿ ಮತ್ತೆ ಮರುಕಳಿಸುತ್ತದೆ. ಅವರಿಬ್ಬರೂ ಸುಖ, ಸಂತೋಷಗಳಿಂದ ಇರುತ್ತಾರೆ. ಅವಳೊಂದಿಗೆ ಅವನ ಬದುಕು ಸ್ವರ್ಗವಾಗಿರುತ್ತದೆ.

ಕುರ್ಚಿಯಿಂದ ಎದ್ದು ಹೋಗಿ ಭಾವಚಿತ್ರದ ಮೇಲೆ ಪರದೆ ಎಳೆದ. ಆದರೆ ಏಳೆಯುವಾಗಲೂ ಕಂಪಿಸುತ್ತಿದ್ದ. "ಎಷ್ಟು ಭಯಂಕರವಾಗಿದೆ!" ತನ್ನೊಳಗೇ ಗುಣುಗುಣಿಸಿದ. ಮತ್ತು ಹೋಗಿ ಕಿಟಕಿಯ ಬಾಗಿಲು ತೆಗೆದ. ಹೊರಗೆ ಬಂದು ಹುಲ್ಲು ಹಾಸಿನ ಮೇಲೆ ಕಾಲಿರಿಸಿದ, ದೀರ್ಘ ಉಸಿರೆಳೆದುಕೊಂಡ. ಬೆಳಗಿನ ತಣ್ಣನೆಯ ತಾಜಾಗಾಳಿಯ ಸ್ಪರ್ಶ ಮನದಲ್ಲಿನ ಭಾವೋದ್ರೇಕವನ್ನು ತಣಿಸಿತ್ತು. ಸಿಬಿಲ್ ಬಗ್ಗೆಯೇ ಯೋಚಿಸುತ್ತಿದ್ದ. ತನ್ನ ಪ್ರೀತಿಯ ಪ್ರತಿಧ್ವನಿ ಅಸ್ಪಷ್ಟವಾಗಿ ಕೇಳಿಬಂತು. ಅವಳ ಹೆಸರನ್ನು ಪದೇ ಪದೇ ನೆನಪಿಸಿಕೊಂಡ. ಮಂಜಿನ ಹನಿಗಳಿಂದ ಸ್ನಿಗ್ಧವಾಗಿದ್ದ ಆ ಗಾರ್ಡನ್‌ನಲ್ಲಿ ಹಾಡುತ್ತಿದ್ದ ಹಕ್ಕಿಗಳು, ಅಲ್ಲಿನ ಹೂಗಳಿಗೆ ಸಿಬಿಲ್‌ಳ ಕತೆ ಹೇಳುತ್ತಿವೆಯೇನೋ ಎಂದು ಭಾಸವಾಯಿತು.

❖

# ಅಧ್ಯಾಯ - ೮

ಅವನು ಎದ್ದಾಗ ಮಧ್ಯಾಹ್ನವೂ ದಾಟಿಬಿಟ್ಟಿತ್ತು. ಅವನ ಸೇವಕ ಅಷ್ಟು ಹೊತ್ತಿಗೆ ಎಷ್ಟೋ ಬಾರಿ ಬಂದು ಎದ್ದಿದ್ದಾನೋ ಇಲ್ಲವೋ ಎಂದು ನೋಡಿಹೋಗಿದ್ದ. ಯಜಮಾನ ಇಷ್ಟು ಹೊತ್ತು ಮಲಗಿರುವುದಕ್ಕೆ ಕಾರಣ ಏನೆಂದು ಯೋಚಿಸಿದ್ದ. ಕಡೆಗೆ ಯಜಮಾನನ ಕರೆಗಂಟೆ ಕೇಳಿಸಿತು. ವಿಕ್ಟರ್ ಮೆಲ್ಲಗೆ ಹಜ್ಜೆ ಹಾಕುತ್ತಾ ಸಣ್ಣ ಟ್ರೇನಲ್ಲಿ ಟೀ ಕಪ್ಪು ಇರಿಸಿಕೊಂಡು ಪ್ರವೇಶಿಸಿದ. ಎತ್ತರದ ಕಿಟಕಿಗಳಿಂದ ಇಳಿಬಿಟ್ಟಿದ್ದ, ನೀಲಿ ಅಂಚಿನ ಸ್ಯಾಟಿನ್ ಪರದೆಗಳನ್ನು ಪಕ್ಕಕ್ಕೆ ಸರಿಸಿದ.

"ಯಜಮಾನ್ರೆ ಬೆಳಿಗ್ಗೆ ಚೆನ್ನಾಗಿ ನಿದ್ದೆ ಬಂತಾ?" ಎಂದು ಮುಗುಳ್ನಗುತ್ತಾ ಕೇಳಿದ.

"ಈಗ ಸಮಯ ಎಷ್ಟಾಗಿದೆ ವಿಕ್ಟರ್?"

"ಒಂದು ಗಂಟೆ ಹದಿನೈದು ನಿಮಿಷ."

"ಅರೆ ಎಷ್ಟು ಲೇಟಾಗಿದೆ!" ಎಂದು ಹೇಳಿಕೊಳ್ಳುತ್ತಾ, ಎದ್ದು ಕುಳಿತು ಟೀ ಕುಡಿದ. ನಂತರ ಟ್ರೇ ನಲ್ಲಿ ಇರಿಸಿದ್ದ ಪತ್ರಗಳ ರಾಶಿ ನೋಡಿದ; ಅವುಗಳಲ್ಲಿ ರಾತ್ರಿ ಭೋಜನದ ಆಹ್ವಾನ ಪತ್ರಿಕೆಗಳು, ಸಂಗೀತ ಸಭೆಗಳ ಆಹ್ವಾನ ಪತ್ರಿಕೆಗಳು ವಿಶೇಷ ಕಾರ್ಯಕ್ರಮಗಳಿಗಾಗಿ ಆಹ್ವಾನಿಸಿ ಇರಿಸಿದ್ದ ಟಿಕೇಟುಗಳು, ಸ್ನೇಹಿತರ ಪತ್ರಗಳು ಇತ್ಯಾದಿಗಳಿದ್ದವು. ಸಾಮಾನ್ಯವಾಗಿ ಆಗಿನ ದಿನಗಳಲ್ಲಿ ಫ್ಯಾಷನಬಲ್ ಆಗಿದ್ದ ಯುವಕರಿಗೆ ಇಂಥವೆಲ್ಲ ತಪ್ಪದೆ ಬರುತ್ತಿದ್ದವು.

ಒಂದು ಹತ್ತು ನಿಮಿಷ ಕಳೆದ ಮೇಲೆ ಎದ್ದು ಡ್ರೆಸ್ಸಿಂಗ್ ಗೌನನ್ನು ಹಿಡಿದು ಬಾತ್‌ರೂಂ ಪ್ರವೇಶಿಸಿದ. ತಣ್ಣನೆಯ ಸ್ನಾನ ಅವನ ಮಂಪರನ್ನೆಲ್ಲ ದೂರಮಾಡಿ ತಾಜಾ ಎನಿಸುವಂತೆ

ಮಾಡಿತ್ತು. ಅಲ್ಲಿವರೆಗೆ ನಡೆದದ್ದನ್ನೆಲ್ಲ ಮರೆತುಬಿಟ್ಟಿದ್ದ. ಒಂದೆರಡು ದುರಂತಗಳು ನಡೆದುಹೋದಂತೆ ನೆನಪುಗಳು ಅಸ್ಪಷ್ಟವಾಗಿ ಹಾದುಹೋದವು. ಆದರೆ ಅದು ಕನಸಿನ ಪರಿಣಾಮವಾಗಿತ್ತೇ ಹೊರತು ನಿಜವಾಗಿರಲಿಲ್ಲ.

ಡ್ರೆಸ್ ಮುಗಿಸಿಕೊಂಡು ಓದುವ ಕೊಠಡಿಗೆ ಹೋಗಿ, ದುಂಡು ಮೇಜಿನ ಮೇಲೆ ಇರಿಸಿದ್ದ ಲೈಟ್ ಫ್ರೆಂಚ್ ಬ್ರೇಕ್‌ಫಾಸ್ಟ್‌ಗಾಗಿ ಕುಳಿತ. ಆ ದಿನ ಅವನಿಗೆ ಹಿತವಾಗಿತ್ತು ಅವನ ಮನಸ್ಸು ಉಲ್ಲಸಿತವಾಗಿತ್ತು. ಒಮ್ಮೆಲೇ ಅವನ ಕಣ್ಣು ಭಾವಚಿತ್ರವನ್ನು ಮುಚ್ಚಿದ್ದ ಪರದೆ ಕಡೆ ಹೋಯಿತು. ಬೆಚ್ಚಿದ; ನಡುಗಿದ.

"ಯಜಮಾನರೇ ತುಂಬಾ ಚಳಿಯಾಗುತ್ತಿದೆಯೇ? ಕಿಟಕಿಗಳನ್ನು ಮುಚ್ಚಿಬಿಡಲೇ" ಎಂದು ಆಮ್ಲೆಟ್ಟನ್ನು ಬಡಿಸುತ್ತಾ ಕೇಳಿದ. ಡೋರಿಯನ್ ತಲೆಯಾಡಿಸಿ "ಚಳಿಗಿಳಿ ಏನು ಆಗ್ತಿಲ್ಲ" ಗೊಣಗಿದಂತೆ ಹೇಳಿದ. ಅದೆಲ್ಲಾ ನಿಜವೇ? ಭಾವಚಿತ್ರ ಬದಲಾಗಿದೆಯೇ ಇಲ್ಲ ಅದೆಲ್ಲಾ ತನ್ನ ಊಹೆಯ ಪರಿಣಾಮವಾಗಿ ಹಾಗೆ ಕಾಣಿಸುತ್ತಿದೆಯೇ? ತುಟಿಯ ಮೇಲಿನ ಕ್ರೌರ್ಯದ ಗೆರೆಗಳು, ಅದೂ ನನ್ನ ಸಂತೋಷ ಒಡೆದದ್ದು ಕಾಣುತ್ತಿದ್ದ ಜಾಗದಲ್ಲಿ, ಕಾಣಿಸುತ್ತಿರುವುದು ನನ್ನ ಕಲ್ಪನೆಯೇ? ಅದೆಲ್ಲ ಅಸಂಬದ್ಧ! ಬೇಸಿಲ್‌ಗೆ ಕತೆ ಹೇಳೋದಕ್ಕೆ ಉಪಯೋಗಕ್ಕೆ ಬರುತ್ತೆ, ಕೇಳಿ ಅವನು ನಗುವಂತಾಗುತ್ತದೆ.

ಅದರೂ ಅವನ ನೆನಪುಗಳು ಎಷ್ಟು ಸ್ಪಷ್ಟವಾಗಿದೆಯೆಂದರೆ, ಈಗಲೂ ಆ ಕ್ರೌರ್ಯದ ರೇಖೆಗಳು ಕಣ್ಣಮುಂದೆ ಕಾಣುತ್ತಿದ್ದಂತೆ ಇವೆ. ಸೇವಕ ಎಲ್ಲಿ ಕೋಣೆಯಿಂದ ಹೊರಟುಬಿಟ್ಟಿದ್ದಾನೋ ಎಂದು ಹೆದರಿದ. ಒಂಟಿಯಾಗಿದ್ದಾಗ ತಾನೊಬ್ಬನೇ ಭಾವಚಿತ್ರವನ್ನು ತಾನು ಕಂಡದ್ದನ್ನು ಖಚಿತಪಡಿಸಿಕೊಳ್ಳಲು, ಅವನು ಹೋದನೇನೋ ಎಂದು ನೋಡಿದ. ಆದರೆ ಒಳ ಮನಸ್ಸಿಗೆ ಹೋಗದಿರಲಿ ಎನಿಸಿತು. ಆದ್ದರಿಂದ ಅವನು ಕಾಫಿ, ಸಿಗರೇಟುಗಳನ್ನು ತಂದಿರಿಸಿ ಹೊರಡಲು ನಿಂತವನನ್ನು ಹೋಗಬೇಡವೆಂದು ಹೇಳಲು ಬಯಸಿದ. ಬಾಗಿಲು ತೆರೆದುಕೊಂಡು ಹೊರಡಲು ಹೆಜ್ಜೆಯಿರಿಸಿದ್ದೇ, ಡೋರಿಯನ್ ಅವನನ್ನು ಹಿಂದಕ್ಕೆ ಕರೆದ. ಯಜಮಾನನ ಆದೇಶಕ್ಕೆಂದು ಅಲ್ಲಿಯೇ ಸ್ವಲ್ಪ ಹೊತ್ತು ನಿಂತ. ಡೋರಿಯನ್ ಒಂದು ಕ್ಷಣ ಅವನನ್ನು ನೋಡಿದ "ಯಾರಿಗೂ ಇವತ್ತು ಸಿಗೊಲ್ಲ ಅಂತ ಹೇಳು" ಎಂದು ದೀರ್ಘವಾಗಿ ಉಸಿರೆಳೆದು ಹೇಳಿದ. ವಿಕ್ಟರ್ ತಲೆತಗ್ಗಿಸಿ ಗೌರವ ಸೂಚಿಸಿ ಹೊರಟುಹೋದ. ಟೇಬಲ್ ಮುಂದೆ ಕೂತಿದ್ದವನು ಎದ್ದು ಸಿಗರೇಟೊಂದನ್ನು ಹಚ್ಚಿ, ಪರದೆಗೆ ಎದುರಾಗಿದ್ದ ಸೋಫಾ ಮೇಲೆ ಕುಳಿತ. ಪರದೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದ. ಬಹಳ ಹಳೆಯದಾಗಿತ್ತು. ಅಲ್ಲದೆ, ಅದು ಎಂದಾದರೂ ಮನುಷ್ಯನ ಜೀವನ ರಹಸ್ಯಗಳನ್ನು ಮರೆಮಾಚಿರಬಹುದೇ ಎಂದು ಪ್ರಶ್ನಿಸಿಕೊಂಡ.

ಅದನ್ನು ಈಗ ಇರೋ ಜಾಗದಿಂದ ಸರಿಸಬೇಕೇ ಹೇಗೆ? ಎಂದೂ ಯೋಚಿಸಿದ. ಅದು ಇರುವ ಜಾಗದಲ್ಲಿಯೇ ಇದ್ದರೆ ಏನಂತೆ? ಅದನ್ನು ತಿಳಿದುಕೊಳ್ಳಬೇಕೆಂಬ ಹಠ ಯಾಕೆ? ಭಯಂಕರ! ಅತಿ ಭಯಂಕರ ಅನ್ನೋದು ಸತ್ಯ ಅಲ್ಲದಿದ್ದರೆ ಅನಗತ್ಯವಾಗಿ ಕೆದಕುವುದೇಕೆ? ಆದರೆ ಆಕಸ್ಮಾತ್ತಾಗಿ ಅಥವಾ ದುರಾದೃಷ್ಟದಿಂದ ತನ್ನ ಬೆನ್ನ ಹಿಂದೆ ಪತ್ತೇದಾರಿ ಕೆಲಸ

ಮಾಡುತ್ತಿರುವ ಕಣ್ಣುಗಳಿಗೆ ಬದಲಾಗಿರುವುದು ಕಾಣಿಸಿದರೆ? ಒಂದು ವೇಳೆ ಬೇಸಿಲ್, ತನ್ನ ಕಲಾಕೃತಿಯನ್ನು ತಾನು ಮತ್ತೊಮ್ಮೆ ನೋಡಬೇಕೆಂದು ಬಯಸಿದರೆ? ಬೇಸಿಲ್ ಹಾಗೆ ಮಾಡಬೇಕೆಂದುಕೊಂಡರೆ? ಮಾಡಿಯೇ ಮಾಡುತ್ತಾನೆ. ಅದಕ್ಕೇ ಏನಾದರೂ ಆಗಲಿ ಅವನು ನೋಡೋಕೆ ಮೊದಲು ನಾನೇ ಮತ್ತೊಮ್ಮೆ ನೋಡಿಬಿಟ್ಟರೆ ಒಳ್ಳೆಯದು, ಅನುಮಾನ ದೂರವಾಗುತ್ತೆ.

ಅವನು ಎದ್ದು ಎರಡು ಬಾಗಿಲುಗಳನ್ನು ಮುಚ್ಚಿ ಬೀಗ ಹಾಕಿದ. ಇದರಿಂದ ತನ್ನ ನಾಚಿಕೆಗೇಡಿನ ಮುಖವಾಡ ತನ್ನೊಬ್ಬನಿಗೇ ನೋಡಲು ಸಾಧ್ಯವಾದೀತು! ಎಂದು ಲೆಕ್ಕಾಚಾರ ಹಾಕಿದ ನಂತರ ಭಾವಚಿತ್ರದ ಮೇಲಿದ್ದ ಪರದೆಯನ್ನು ಸರಿಸಿ ತೀಕ್ಷ್ಣವಾಗಿ ಗಮನಿಸಿದ. ನಿಜ! ಭಾವಚಿತ್ರ ಬದಲಾಗಿತ್ತು.

ಅವನಿಗೆ ನಂಬುವುದಕ್ಕೇ ಆಗುತ್ತಿರಲಿಲ್ಲ. ಮೊದ ಮೊದಲು ವೈಜ್ಞಾನಿಕ ಜಿಜ್ಞಾಸೆಯಿಂದ ನೋಡುತ್ತಿದ್ದನಾದರೂ ಈಗ ಆ ಬದಲಾವಣೆಯಾಗಿರುವುದು ನಂಬಲಸಾಧ್ಯವೆನಿಸಿತು. ಆದರೂ ಸತ್ಯ ಸಂಗತಿಯೇ ಅದಾಗಿತ್ತು. ಈ ಬದಲಾವಣೆ ಬಹುಶಃ ಬಣ್ಣಗಳ ರಾಸಾಯನಿಕ ಕ್ರಿಯೆಯಿಂದ ಆಗಿರಬಹುದೇ ಎಂದು ಯೋಚಿಸಿದ. ಇಲ್ಲವೇ ಅದು ಆತ್ಮದ ಬಯಕೆಯಾಗಿತ್ತೇ? ಇಲ್ಲವೆ ಅದು ಕಂಡ ಕನಸನ್ನು ಸತ್ಯಮಾಡಿದೆಯೇ? ಇಲ್ಲವೆ ಇದೆಲ್ಲಕ್ಕಿಂತ ಭಯಂಕರವಾದ ಕಾರಣವಿದೆಯೇ?.... ಅವನು ಕಂಪಿಸಲು ತೊಡಗಿದ. ಸೋಫಾದೆಡೆಗೆ ಹೋಗಿ ಮೈ ಚಾಚಿ ಆ ಭಾವಚಿತ್ರವನ್ನೇ ಅಸ್ವಸ್ಥ, ಭೀತ ಮನಃಸ್ಥಿತಿಯಲ್ಲಿ ದೃಷ್ಟಿಸತೊಡಗಿದ.

ಒಂದಂತು ಅವನ ಮನಸ್ಸಿಗೆ ಬಂದಿತ್ತು, ತಾನು ಸಿಬಿಲ್‌ವೇನ್‌ಳ ವಿಚಾರದಲ್ಲಿ ಬಹಳ ಅನ್ಯಾಯ ಮಾಡಿದೆ, ಕ್ರೂರವಾಗಿ ನಡೆದುಕೊಂಡೆ ಎನ್ನುವ ಸತ್ಯ! ನಡೆದು ಹೋದ ತಪ್ಪನ್ನು ಸರಿಪಡಿಸಲು ಈಗಲೂ ಕಾಲ ಮಿಂಚಿಹೋಗಿಲ್ಲ. ಈಗಲೂ ಅವಳು ತನಗೆ ಹೆಂಡತಿಯಾಗಿ ಬರಬಹುದು. ತನ್ನ ಸ್ವಾರ್ಥ ಮತ್ತು ತೋರಿಕೆಯ ಪ್ರೀತಿಯೂ ಉದಾತ್ತವಾಗಿ ರೂಪಾಂತರಗೊಳ್ಳಬಹುದು. ಬೇಸಿಲ್ ಸೃಷ್ಟಿಸಿದ ಈ ನನ್ನ ಕಲಾಕೃತಿ ನನ್ನ ಬದುಕಿನುದ್ದಕ್ಕೂ ನನಗೆ ಮಾರ್ಗದರ್ಶಿಯಾಗಿಯೂ, ಬೇರೆ ಬೇರೆಯವರಿಗೆ ಮಹಾನತೆ, ಆತ್ಮಪ್ರಜ್ಞೆಗಳನ್ನು ದೈವ ಭೀತಿಯನ್ನು ಎತ್ತಿ ತೋರಿಸುವಂತೆ ನನಗೂ ಸಹಾಯ ಮಾಡಬಹುದು. ಮಾಡಿದ ಪಾಪ ಅಪರಾಧಗಳನ್ನು ಪರಿಹರಿಸಿಕೊಳ್ಳಲು ಪಶ್ಚಾತ್ತಾಪ ರೂಪವಾಗಿ, ಕೆಲವು ಔಷಧಿಗಳಾದರೂ ಇವೆ. ಆದರೆ ಇಲ್ಲಿ ನೋಡಿದರೆ ಪಾಪಕೂಪದ ಪರಾಕಾಷ್ಠೆ ಎದ್ದುತೋರುತ್ತಿದೆ. ಮನುಷ್ಯರ ಆತ್ಮಪತನ ಅಥವಾ ವಿನಾಶದ ಗುರುತು ಢಾಳಾಗಿ ಕಾಣುತ್ತಿದೆ.

ಮೂರು ಗಂಟೆಯಾಯಿತು; ನಾಲ್ಕಾಯಿತು; ನಾಲ್ಕೂವರೆಯಾಯಿತು. ಡೋರಿಯನ್ ಕದಲಲಿಲ್ಲ. ತನ್ನ ಬದುಕಿನ ಕಳೆದ ದಿನಗಳ ನೆನಪಿನ ಸೂತ್ರಗಳನ್ನು ಹೆಣೆಯುತ್ತಿದ್ದ. ಏನುಮಾಡಬೇಕು, ಏನು ಯೋಚಿಸಬೇಕು ಎಂಬುದೇ ತಿಳಿಯುತ್ತಿರಲಿಲ್ಲ. ಕಡಗೆ ಎದ್ದು ಹೋಗಿ ಸಿಬಿಲ್‌ಗೆ ಒಂದು ಭಾವ ಪೂರಿತವಾದ ಪತ್ರ ಬರೆದ. ತನ್ನ ಕ್ರೂರ ವರ್ತನೆಗೆ, ಮಾತುಗಳಿಗೆ ಕ್ಷಮೆ ಕೋರಿದ. ಆತ್ಮನಿಂದೆ ಮಾಡಿಕೊಂಡರೆ ಎಲ್ಲವೂ ಸರಿ ಹೋಯಿತೆಂದು ಭಾವಿಸುತ್ತೇವೆ. ಇದರಿಂದ ಬೇರೆಯವರಿಗೆ ಮಾಡಿದ ಅನ್ಯಾಯದ ಪಾಪಕ್ಕೆ ಪರಿಹಾರ

ಸಿಕ್ಕಿಬಿಟ್ಟಿತೆಂದು ಭಾವಿಸುತ್ತೇವೆ, ಅಪರಾಧ ಸ್ವೀಕಾರದಿಂದ ಪವಿತ್ರರಾಗುತ್ತೇವೆಂದು ನಂಬುತ್ತೇವೆ, ಡೋರಿಯನ್ ಪತ್ರ ಮುಗಿಸಿದ ಕೂಡಲೇ ನಿರಾಳವಾಗಿ ಉಸಿರಾಡಿದ ಮತ್ತು ತನ್ನನ್ನು ಕ್ಷಮಿಸಲಾಗಿದೆ ಎಂದುಕೊಂಡು ಬಿಟ್ಟ.

ಬಾಗಿಲು ಬಡಿದ ಸದ್ದು ಕೇಳಿಸಿತು. ಹೊರಗಡೆಯಿಂದ ಹೆನ್ರಿಯ ಧ್ವನಿ ಕೇಳಿಸಿತು. ಡೋರಿಯನ್ ಬಾಗಿಲು ತೆಗೆ, ನಿನ್ನನ್ನು ನೋಡಲೇ ಬೇಕಿದೆ. ಹೀಗೆ ಬಾಗಿಲು ಹಾಕಿಕೊಂಡು ನೀನು ಕುಳಿತಿರುವುದನ್ನು ನನ್ನಿಂದ ನೋಡಲಾಗುವುದಿಲ್ಲ.

ಒಂದೆರಡು ಕ್ಷಣಗಳು ಅವನು ಉತ್ತರವನ್ನೇ ಕೊಡಲಿಲ್ಲ. ಮೌನವಾಗಿಯೇ ಕುಳಿತಿದ್ದ. ಬಾಗಿಲು ತಟ್ಟುವ ಶಬ್ದ ಮುಂದುವರೆಯಿತು. ಮತ್ತೂ ಜೋರಾಯಿತು. ಸರಿ ಎದ್ದು ಹೋಗಿ ಬಾಗಿಲು ತೆರೆಯುವುದೇ ಒಳ್ಳೆಯದು. ನನ್ನ ಹೊಸ ಬದುಕಿನ ಬಗ್ಗೆ ತಿಳಿಸುತ್ತೇನೆ. ಒಂದು ವೇಳೆ ಜಗಳ ಮಾಡಬೇಕಾದರೂ ಮಾಡುತ್ತೇನೆ. ಅದೂ ಅಲ್ಲದೆ, ಅವನ ಸಹವಾಸವೇ ಬೇಡ ಅನಿಸಿದರೆ, ಪೂರ್ತಿಯಾಗಿ ಗುಡ್ ಬೈ ಹೇಳಿಬಿಡುತ್ತೇನೆ ಎಂದುಕೊಂಡು ದಿಢೀರನೆ ಎದ್ದು ಹೋಗಿ ಭಾವಚಿತ್ರದ ಮೇಲೆ ಪರದೆ ಎಳೆದ, ಮತ್ತು ಬಂದು ಬಾಗಿಲು ತೆಗೆದ.

"ಆದದ್ದಕ್ಕೆಲ್ಲಾ ವಿಷಾದಿಸುತ್ತೇನೆ ಡೋರಿಯನ್" ಎಂದು ಒಳಗೆ ಬರುತ್ತಾ ಹೇಳಿದ ಹೆನ್ರಿ "ಆದರೆ ನೀನು ಆದದ್ದನ್ನೆಲ್ಲ ನೆನೆಸಿಕೊಂಡು ಚಿಂತೆ ಮಾಡಬೇಡ."

"ಅಂದ್ರೆ ಸಿಬಿಲ್ ವೇನ್ ವಿಷಯದಲ್ಲೇನು?" ಎಂದು ಕೇಳಿದ ಡೋರಿಯನ್.

"ಹೌದು ಅವಳ ಬಗ್ಗೇನೇ" ಎಂದು ಹೇಳುತ್ತಾ ಸೋಫಾದಲ್ಲಿ ಕುಳಿತು, ಕೈಗಳ ಗ್ಲೌಸುಗಳನ್ನು ತೆಗೆದು ಇರಿಸಿದ. ಒಂದು ರೀತಿಯಿಂದ ಹಾಗಾಗಬಾರದಿತ್ತು. ಎನಿಸಿದರೂ. ಆದದ್ದರಲ್ಲಿ ನಿನ್ನ ತಪ್ಪೇನೂ ಇಲ್ಲ. ನಾಟಕ ಮುಗಿದ ಮೇಲೆ ಅವಳನ್ನು ಹೋಗಿ ಮಾತಾಡಿಸಿದೆಯೇನು?"

"ಹೂಂ"

"ನನಗೆ ಗೊತ್ತು ನೀನು ಹೋಗಿ ಭೇಟಿಯಾಗಿರ್ತೀಯಾಂತ. ಹೋಗಿ ಅವಳ ಮೇಲೆ ರೇಗಾಡಿದೆಯೇನು?"

"ಹೌದು ಹ್ಯಾರಿ. ನಾನು ಬಹಳ ನಿಷ್ಠುರವಾಗಿ ನಡೆದುಕೊಂಡೆ. ನಿಜವಾಗಿಯೂ ನಿಷ್ಠುರನಾಗಿದ್ದೆ, ಆದರೆ ಈಗ ಎಲ್ಲ ಸರಿಹೋಗಿದೆ. ಆದದ್ದರ ಬಗ್ಗೆ ಈಗ ನಾನೇನೂ ಯೋಚಿಸ್ತಿಲ್ಲ. ಒಳ್ಳೇ ಮನುಷ್ಯನಾಗಿ ನಾನು ಹೇಗಿರಬೇಕು ಎನ್ನುವ ಪಾಠ ಕಲಿಸಿದೆ.

"ಒಳ್ಳೇದು ಡೋರಿಯನ್. ಈ ಸ್ಪಿರಿಟ್ಟಿನಲ್ಲಿ ಯೋಚಿಸುತ್ತಿರೋದನ್ನು ನೋಡಿ ನನಗೆ ತುಂಬಾ ಸಂತೋಷ ಆಗಿದೆ. ನೀನೆಲ್ಲಿ ದುಃಖ ಸಾಗರದಲ್ಲಿ ಮುಳುಗಿ ಬಿಟ್ಟಿರುತ್ತೀಯೋ ಎಂದು ಹೆದರಿದ್ದೆ."

ಅದೆಲ್ಲ ಅನುಭವಿಸಿದ್ದಾಗ್ಹೋಯ್ತು" ಎಂದು ತಲೆಯಾಡಿಸುತ್ತ ಗೆಲುವಿನಿಂದ ಹೇಳಿದ. ಈಗ ನಾನು ಪೂರ್ತಿಯಾಗಿ ಸಂತೋಷವಾಗಿದ್ದೀನಿ. ಆತ್ಮ ಪ್ರಜ್ಞೆ ಏನು ಅಂತ ನೀನು ವಿವರಿಸಿದ್ದನ್ನು ಈಗ ಅರ್ಥ ಮಾಡಿಕೊಂಡಿದ್ದೇನೆ. ಅದೊಂದು ನಮ್ಮಲ್ಲಿನ ದೈವೀಕ ಸ್ಥಿತಿಯಾಗಿದೆ. ಅದರ

ಬಗ್ಗೆ ತಮಾಶೆ ಮಾಡಬೇಡ, ಅದರಲ್ಲೂ ನನ್ಮುಂದೆ ನಾನು ಒಳ್ಳೆಯವನಾಗಿರಬೇಕು. ನನ್ನಾತ್ಮ ದುಷ್ಟಶಕ್ತಿಯಾಗುವುದರ ಕಲ್ಪನೆಯೂ ನನಗೆ ಅಸಹನೀಯ"

"ಆಹಾ ನೈತಿಕತೆಯ ಬಗ್ಗೆ ಬಹಳ ಆಕರ್ಷಕವಾದ ಸಿದ್ಧಾಂತ ! ನಿನ್ನನ್ನು ಇದಕ್ಕಾಗಿ ಅಭಿನಂದಿಸುತ್ತೇನೆ. ನಿನ್ನ ಈ ಹೊಸ ನಿಲುವನ್ನು ಹೇಗೆ ಪ್ರಾರಂಭಿಸುತ್ತೀಯ?"

"ಅವಳನ್ನು ಮದುವೆಯಾಗುವುದರ ಮೂಲಕ"

"ಸಿಬಿಲ್ ವೇನ್‌ಳನ್ನು ಮದುವೆಯಾಗ್ತೀಯಾ ಎಂದು ಅಚ್ಚರಿಯಿಂದ ಕೇಳಿದ. "ಆದರೆ ಪ್ರಿಯ ಗೆಳೆಯ ಡೋರಿಯನ್---------"

"ಹೌದು ಹ್ಯಾರಿ! ನನಗೆ ಗೊತ್ತು ನೀನು ಏನು ಹೇಳ್ತೀಯಾಂತ, ಮದುವೆ ಬಗ್ಗೆ ಏನೇನೋ ಹೇಳಿ ಹೆದರಿಸ್ತೀಯ. ಏನೂ ಹೇಳಬೇಡ. ಅಂಥ ಮಾತುಗಳನ್ನು ನನ್ನ ಮುಂದೆ ಎಂದೂ ಪ್ರಸ್ತಾಪಿಸಬೇಡ ಎರಡು ದಿನಗಳ ಹಿಂದೆ ಸಿಬಿಲ್‌ಳನ್ನು ನನ್ನ ಮದುವೆ ಆಗುವಂತೆ ಹೇಳಿದ್ದೆ, ಕೊಟ್ಟ ಮಾತನ್ನು ಮೀರುವುದಿಲ್ಲ. ಅವಳು ನನಗೆ ಹೆಂಡತಿಯಾಗ್ತಾಳೆ.

"ನಿನ್ನ ಹೆಂಡತಿ! ಡೋರಿಯನ್! ನನ್ನ ಪತ್ರ ನಿನಗೆ ತಲುಪಲಿಲ್ಲವೇ? ಈ ದಿನ ಬೆಳಿಗ್ಗೆಯೇ ಬರೆದು ನನ್ನ ಕಡೆಯ ಒಬ್ಬ ವ್ಯಕ್ತಿಯ ಮೂಲಕ ಕಳಿಸಿಕೊಟ್ಟಿದ್ದೆ.

"ನಿನ್ನ ಪತ್ರವೇ ಇನ್ನೂ ನಾನು ಓದಿಲ್ಲ ಹ್ಯಾರಿ. ಅದರಲ್ಲಿ ನನಗೆ ಭಯ ಹುಟ್ಟಿಸುವಂತಹ ವಿಷಯವೇನಾದರೂ ಇದ್ದೀತೆಂದು ಹೆದರಿದೆ. ನಿನ್ನ ಮಾತುಗಳಿಂದ, ಹೋಲಿಕೆಗಳಿಂದ ಬದುಕನ್ನು ಸೀಳು ಸೀಳಾಗಿ ಹರಿದುಬಿಡುತ್ತೀ."

"ಅಂದ್ರೆ ನಿನಗೆ ವಿಷಯ ಏನೂಂತ ಗೊತ್ತೇಯಿಲ್ಲ."

"ಹಾಗಂದ್ರೆ ಏನರ್ಥ?"

ಲಾರ್ಡ್ ಹೆನ್ರಿ ಕುಳಿತ ಜಾಗದಿಂದ ಎದ್ದು ಹೋಗಿ ಡೋರಿಯನ್ ಪಕ್ಕದಲ್ಲಿ ಕುಳಿತ. ಅವನು ಎರಡೂ ಕೈಗಳನ್ನು ತನ್ನ ಕೈಗಳಲ್ಲಿರಿಸಿಕೊಂಡ. ಬಿಗಿಯಾಗಿ ಒತ್ತಿದ "ಡೋರಿಯನ್! ನನ್ನ ಪತ್ರ.... ಹೆದರಬೇಡ.... ಸಿಬಿಲ್ ವೇನ್ ಸಾವನ್ನಪ್ಪಿದ್ದಾಳೆ ! ಎಂದು ತಿಳಿಸುವುದಾಗಿತ್ತು."

ನೋವಿನ ತೀಕ್ಷ್ಣ ಉದ್ಗಾರದೊಂದಿಗೆ ಒಮ್ಮೆಲೇ ಎದ್ದು ನಿಂತು ಹೆನ್ರಿಯ ಕೈಗಳಿಂದ ತನ್ನ ಕೈಗಳನ್ನು ಎಳೆದುಕೊಂಡು "ಸಾವನ್ನಪ್ಪಿದಳೇ? ಸಿಬಿಲ್ ಸತ್ತುಹೋದಳೇ" ಇಲ್ಲ.... ಇದು ನಿಜವಾಗಿರಲಾರದು; ಭಯಂಕರ ಸುಳ್ಳು ! ಇಂಥ ಸುದ್ದಿ ಹೇಳೋಕೆ ನಿನಗೆಷ್ಟು ಧೈರ್ಯ!

"ಇಲ್ಲ ಡೋರಿಯನ್ ನಾನು ಹೇಳ್ತಿರೋದು ಸತ್ಯ" ಎಂದು ಹೆನ್ರಿ ಗಂಭೀರವಾಗಿ ಹೇಳಿದ. ಇವತ್ತಿನ ಬೆಳಗಿನ ಪತ್ರಿಕೆಗಳಲ್ಲೆಲ್ಲ ಬಂದಿದೆ. ನಾನು ಬರೋವರೆಗೆ ನೀನು ಯಾವುದೇ ಪತ್ರಿಕೆಯನ್ನು ನೋಡೋಕೆ ಹೋಗಬೇಡ ಎಂದು ಪತ್ರದಲ್ಲಿ ತಿಳಿಸಿದ್ದೆ.... ಇದರ ಬಗ್ಗೆ ವಿಚಾರಣೆ ಇರುತ್ತೆ. ಇದರಲ್ಲಿ ನೀನು ಸೇರುವುದು ಬೇಡ. ಲಂಡನ್‌ನಲ್ಲಿನ ಜನ ಪೂರ್ವಗ್ರಹ ಪೀಡಿತರು. ಇಂಥ ಹಗರಣಗಳಲ್ಲಿ ನೀನು ಸಿಲುಕಿಕೊಳ್ಳಬಾರದು. ಬಹುಶಃ ಜನಕ್ಕೆ

ಥಿಯೇಟರ್‌ನಲ್ಲಿದ್ದ ನಿನ್ನ ಹೆಸರು ಗೊತ್ತಿಲ್ಲ ಅಂತ ಅನಿಸುತ್ತೆ. ಹಾಗಾಗಿದ್ದರೆ ಒಳ್ಳೆಯದೇ, ಯಾರಾದರೂ ನೀನು ಅವಳಿದ್ದ ಜಾಗಕ್ಕೆ ಹೋಗಿದ್ದನ್ನು ನೋಡಿದ್ದಾರೇನು? ಅದು ಬಹಳ ಗಂಭೀರವಾದ ವಿಷಯವಾದೀತು."

ಡೋರಿಯನ್ ಒಂದೆರಡು ನಿಮಿಷ ಮಾತಾಡಲೇ ಇಲ್ಲ. ತೀರಾ ಭಯಭೀತನಾಗಿದ್ದ. ಹ್ಯಾರಿ! ವಿಚಾರಣೆ ಇರುತ್ತೆ ಅಂತ ಹೇಳಿದೆಯಾ? ಹಾಗಾದರೆ ಏನು ಮಾಡ್ತಾರೆ? ಸಿಬಿಲ್ ಏನಾದರೂ.....? ಓಹ್ ಹ್ಯಾರಿ, ನನಗೆ ಭಯ ಆಗ್ತಿದೆ. ಸಹಿಸಿಕೊಳ್ಳೋಕೆ ಆಗ್ತಿಲ್ಲ. ಹೇಳು ಬೇಗ ಹೇಳು ನಿನಗೆ ಗೊತ್ತಿರೋದನ್ನೆಲ್ಲ ಹೇಳಿಬಿಡು."

"ಇದು ಆಕಸ್ಮಿಕ ಅಂತೂ ಅಲ್ಲ. ಜನ ಹಾಗೆ ಬೇಕಾದರೆ ಭಾವಿಸಿಕೊಳ್ಳಬಹುದು, ಅವಳು ಥಿಯೇಟರಿಂದ ಅವಳ ಅಮ್ಮನ ಜೊತೆಗೆ ಹೋಗ್ತಾ ಇದ್ದಾಗ ಏನೋ ಮರೆತಿದ್ದೇನೆ ಎಂದು ಹೇಳಿ ಮತ್ತೆ, ವಾಪಸ್ಸು ಹೋದಳಂತೆ. ಅವರೆಲ್ಲ ಸ್ವಲ್ಪ ಹೊತ್ತು ಕಾದರೂ ಅವಳು ಕೆಳಗೇ ಬರಲಿಲ್ಲವಾದ್ದರಿಂದ ಅವರೆಲ್ಲಾ ಮೇಲೆ ಹತ್ತಿ ಹೋದರೆ, ಗ್ರೀನ್ ರೂಮಿನ ನೆಲದ ಮೇಲೆ ಅವಳ ಶವ ಬಿದ್ದಿತ್ತಂತೆ. ವಿಷಪೂರಿತವಾದುದೇನನ್ನೋ ನುಂಗಿದ್ದಳಂತೆ. ಆದರೆ ಅದೇನೂಂತ ನನಗೂ ಗೊತ್ತಿಲ್ಲ. ತತ್ಕ್ಷಣ ಸತ್ತಿದ್ದರಿಂದ ಅದು ಸಯನೈಡ್ ಮಾದರಿಯ ವಿಷವೇ ಇದ್ದಿರಬೇಕು.

"ಹ್ಯಾರಿ! ಹ್ಯಾರಿ! ಇದೆಂಥ ಭಯಂಕರ ದುರಂತ" ಅವನು ಕಿರುಚಿ ಹೇಳಿದ.

"ದುರಂತ ಅನ್ನೋದು ನಿಜವೆ. ಆದರೆ ನೀನು ಇದರಿಂದ ದೂರವಿರು ನನ್ನ ಲೆಕ್ಕಾಚಾರದ ಪ್ರಕಾರ ಅವಳ ವಯಸ್ಸು ಹದಿನೇಳೋ ಅಥವಾ ಅದಕ್ಕಿಂತ ಕಡಿಮೆಯೋ ಇರಬಹುದು. ನೋಡಿದರೆ ಇನ್ನೂ ಮಗೂಂತಲೇ ಕಾಣಿಸುತ್ತಿತ್ತು. ಅಭಿನಯದ ಬಗ್ಗೆ ಅಷ್ಟಾಗಿ ತಿಳಿದುಕೊಂಡಿರಲಿಲ್ಲ. ಡೋರಿಯನ್ ಇದನ್ನು ತಲೆಗೆ ಹಚ್ಚಿಕೊಳ್ಳಬೇಡ. ಸುಮ್ಮನೆ ನನ್ನ ಜೊತೆ ಊಟಕ್ಕೆ ಬಾ. ಊಟ ಮಾಡಿಕೊಂಡು ಅಪೆರಾಗೆ ಹೋಗೋಣ. ನನ್ನ ಸಿಸ್ಟರ್ ಬಾಕ್ಸ್ ರಿಸರ್ವ್ ಮಾಡಿಸಿದ್ದಾಳೆ. ಅವಳ ಜೊತೆ ಬಹಳ ಇಂಟರೆಸ್ಟಿಂಗ್ ಆದ ಹೆಂಗಸರು ಇರ್ತಾರೆ."

"ಅಂದರೆ ನಾನೇ ಸಿಬಿಲ್‌ಳನ್ನು ಕೊಲೆ ಮಾಡಿದ್ದೇನೆ, ತನ್ನಲ್ಲೇ ಹೇಳಿಕೊಂಡ. ನಿಜವಾಗಿಯೂ ಅವಳ ಕತ್ತು ಕೊಯ್ದು ಕೊಂದಂತೆ! ಇಷ್ಟಾದರೂ ಪ್ರಕೃತಿಯಲ್ಲಿ ಯಾವ ಬದಲಾವಣೆ ಇಲ್ಲ. ತೋಟದಲ್ಲಿನ ಗುಲಾಬಿಗಳು ನಿತ್ಯದಂತೆ ನಗುತ್ತಲೇ ಇವೆ. ಹಕ್ಕಿಗಳು ಎಂದಿನಂತೆ ಗೆಲುವಿನಿಂದ ಹಾಡುತ್ತಿವೆ. ನಾನು ನಿನ್ನ ಜೊತೆ ರಾತ್ರಿ ಊಟಕ್ಕೆ ಬಂದು ಆಮೇಲೆ ಅಪೆರಾಗೆ ಹೋಗಬೇಕು. ಬದುಕು ನಿಜವಾಗಿಯೂ ಎಷ್ಟು ನಾಟಕೀಯವಾಗಿದೆ! ಇದನ್ನೆಲ್ಲ ಒಂದು ಪುಸ್ತಕದಲ್ಲಿ ಓದಿದ್ದರೆ, ಬಹುಶಃ ಅತ್ತು ಬಿಡುತ್ತಿದ್ದೆ. ಆದರೆ ಈಗ ವಾಸ್ತವವಾಗಿ ನನ್ನ ಕಣ್ಣಮುಂದೆಯೇ ನಡೆದಿದ್ದರೂ ಅಳಬೇಕಂತ ಅನಿಸುತ್ತಲೇ ಇಲ್ಲ. ತಗೋ ನನ್ನ ಜೀವನದಲ್ಲಿ ಎಂದೂ ಬರೆಯದ ಇಂಥ ಭಾವೋದ್ರೇಕದೊಂದಿಗೆ ಬರೆದ ಪ್ರೇಮಪತ್ರ ಇಲ್ಲಿದೆ. ಸತ್ತು ಶವವಾಗಿರುವ ಸಿಬಿಲ್ ಹೆಸರಿಗೆ ಬರೆದಿದ್ದೇನೆ. ಎಂದಾದರೂ ಈ ರೀತಿ ದೀರ್ಘ ಮೌನದಲ್ಲಿ ಮಲಗಿರುವವರಿಗೆ ಕೇಳಿಸುವುದೇನು. ಅವರ ಅನುಭವಕ್ಕೆ ಬರುವುದೇನು? ನನ್ನ ಸಿಬಿಲ್

ಕೂಡಾ ಕೇಳಿಸಿಕೊಳ್ಳುತ್ತಾಳೆಯೇ? ನನ್ನನ್ನು ಅರ್ಥ ಮಾಡಿಕೊಳ್ಳುತ್ತಾಳೆಯೇ? ಓ ಹ್ಯಾರಿ ಅವಳನ್ನು ನಾನೆಷ್ಟು ಪ್ರೀತಿಸಿದ್ದೆ. ಈಗ ಯುಗಗಳ ಹಿಂದೆ ಇರಬೇಕೇನೋ ಎನಿಸುತ್ತಿದೆ. ಅವಳು ನನಗೆ ಸರ್ವಸ್ವವೂ ಆಗಿದ್ದಳು. ಆಮೇಲೆ ಈ ಭಯಾನಕ ರಾತ್ರಿ ಬಂತು. ಅದೇ ಕಡೆಯ ರಾತ್ರಿಯೂ ಆಯಿತು. ಅವಳ ಕೆಟ್ಟ ಅಭಿನಯ ನೋಡಿದ್ದೇ ನನ್ನ ಹೃದಯ ಒಡೆದುಹೋಯಿತು. ಅವಳ ಆ ಸೋಲಿಗೆ ಕಾರಣವನ್ನು ವಿವರಿಸಿ ತಿಳಿಸಿದಳು. ಆದರೂ ನಾನು ನಂಬುವುದಕ್ಕೆ ಸಿದ್ಧವಾಗಿರಲಿಲ್ಲ ? ಅಭಿನಯದ ಸೂಕ್ಷ್ಮತೆಗಳೇ ಗೊತ್ತಿಲ್ಲವೆನಿಸಿತು. ಒಮ್ಮೆಲೇ ಏನೋ ಭೀತಿ ನನ್ನನ್ನು ಆವರಿಸಿತು. ಆದರೆ ಅದೇನೆಂದು ತಿಳಿಯಲಿಲ್ಲ. ಅವಳ ಹತ್ತಿರಕ್ಕೆ ಮತ್ತೆ ಹೋಗೋಣ ಎಂದುಕೊಂಡೆ. ಅವಳ ಜೊತೆ ಅನ್ಯಾಯ ಮಾಡಿದೆ ಎಂದು ಅರ್ಥವಾಯಿತು. ಆದರೆ ಈಗ ಅವಳು ಸತ್ತಿದ್ದಾಳೆ. ದೇವರೇ! ದೇವರೇ! ಹ್ಯಾರಿ ಹೇಳು ಈಗ ನಾನೇನು ಮಾಡಲಿ? ನಾನು ಎಂಥ ಅಪಾಯದಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ ಅನ್ನೋದು ನಿನಗೆ ಗೊತ್ತಿಲ್ಲ. ನನ್ನನ್ನು ತಪ್ಪಿಲ್ಲದಂತೆ ಇರಿಸಿಕೊಳ್ಳೋಕೆ ನನಗೆ ಆಗಲಿಲ್ಲ. ಅವಳಿದ್ದಿದ್ದರೆ ನನ್ನನ್ನು ಸರಿ ಮಾಡುತ್ತಿದ್ದಳು. ತನ್ನನ್ನು ಕೊಂದುಕೊಳ್ಳಬೇಕಾದ ಅಗತ್ಯ ಇರಲಿಲ್ಲ. ಅದು ಅವಳ ಸ್ವಾರ್ಥ.

"ಪ್ರಿಯ ಡೋರಿಯನ್, ಸಿಗರೇಟು ತೆಗೆದುಕೊಳ್ಳುತ್ತಾ, ಅದಕ್ಕೆ ಬೆಂಕಿ ಹಚ್ಚುತ್ತಾ, "ಹೆಂಗಸು ಗಂಡಸನ್ನು ತಿದ್ದುವುದಕ್ಕೆ ಅವಳಿಗಿರುವ ಒಂದೇ ಒಂದು ದಾರಿಯೆಂದರೆ, ಜೀವನದಲ್ಲಿ ಆಸಕ್ತಿಯೇ ಕಳೆದುಕೊಳ್ಳುವಷ್ಟರ ಮಟ್ಟಿಗೆ ತಲೆತಿನ್ನೋದು" ಎಂದು ಹೇಳಿ ಮುಗಿಸಿದ. ಒಂದು ವೇಳೆ ಅವಳನ್ನು ಮದುವೆ ಆಗಿದ್ದರೆ, ಹಾಳಾಗಿ ಹೋಗುತ್ತಿದ್ದೆ. ಅವಳನ್ನು ನೀನು ಪ್ರೀತಿಯಿಂದೇನೋ ನೋಡಿಕೊಳ್ಳುತ್ತಿದ್ದೆ. ಯಾರ ಬಗ್ಗೆ ಅಷ್ಟಾಗಿ ಆಸಕ್ತಿ ಇರಿಸಿಕೊಂಡಿರುವುದಿಲ್ಲವೊ ಅವರನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತಾರೆ. ಆದರೆ ಅವಳಿಗೆ ಸ್ವಲ್ಪ ಸಮಯದಲ್ಲಿಯೇ ತನ್ನ ಬಗ್ಗೆ ನಿನ್ನ ಗಮನವೇ ಇರುವುದಿಲ್ಲವೆಂದು ಗ್ರಹಿಸಿಬಿಡುತ್ತಿದ್ದಳು. ಗಂಡನ ನಿರಾಸಕ್ತಿ ಮನವರಿಕೆಯಾಗುತ್ತಿದ್ದಂತೆ, ತುಂಬಾ ವಿಕಾರವಾಗಿ ನಡೆದುಕೊಳ್ಳುತ್ತಾಳೆ ಇಲ್ಲವೆ ಬೇರೆ ಗಂಡಸರನ್ನು ಆಕರ್ಷಿಸುವಷ್ಟರ ಮಟ್ಟಿಗೆ ಜಾಣರಾಗುತ್ತಾರೆ.... ಆದರೆ ಏನೇ ಆಗಲಿ, ನಿನ್ನ ವಿಷಯದಲ್ಲಿ ಮಾತ್ರ ಯಾವುದೂ ಸಾಧ್ಯವಾಗುತ್ತಿರಲಿಲ್ಲ."

"ಇರಬಹುದೇನೋ" ಆದರೂ ನನ್ನ ಕರ್ತವ್ಯ ಮಾಡಬೇಕಿತ್ತು ಅಂತ ನನಗೆ ಅನಿಸುತ್ತೆ. ಆದರೆ ಈ ದುರಂತ ಸಂಭವಿಸಿ, ಸರಿಯಾದ್ದನ್ನು ಮಾಡಬೇಕೆಂದು ಹೊರಟವನಿಗೆ ಅಡ್ಡಿಯಾಯಿತು. ಒಳ್ಳೆಯ ನಿರ್ಧಾರಗಳು ಯಾವಾಗಲೂ ಅಪಾಯವನ್ನು ಎದುರಿಸಬೇಕಾಗುತ್ತೆ ಅಂತ ಒಮ್ಮೆ ನೀನು ಹೇಳಿದ್ದೆ. ಆದರೆ ಅಂತ ಒಳ್ಳೆ ನಿರ್ಧಾರಗಳು, ಆಗುವುದೇ ಬಹಳ ತಡವಾಗಿ! ನನ್ನದು ಆದದ್ದೂ ಹಾಗೆ!"

"ಒಳ್ಳೆ ನಿರ್ಧಾರಗಳು, ವೈಜ್ಞಾನಿಕ ನಿಯಮಗಳ ಮುಂದೆ ವ್ಯರ್ಥ ಪ್ರಯತ್ನಗಳು. ಹೇಗೆಂದರೆ ಬ್ಯಾಂಕ್‌ನಲ್ಲಿ ಖಾತೆಯೇ ಇಲ್ಲದವರು ಚೆಕ್ ಕೊಟ್ಟು ಹಣ ಪಡೆಯುವಂತೆ." "ಹ್ಯಾರಿ" ಜೋರಾಗಿ ಹೆಸರು ಹಿಡಿದು ಕರೆಯುತ್ತಾ ಬಂದು ಅವನ ಪಕ್ಕದಲ್ಲಿ ಕುಳಿತ. "ಅದ್ಯಾಕೆ ಹ್ಯಾರಿ, ಈ ದುರಂತವನ್ನು ದುರಂತವೆಂದು ಫೀಲ್ ಮಾಡಬೇಕೆಂದರೂ ಆಗುತ್ತಿಲ್ಲವಲ್ಲ. ಹಾಗೆ ನೋಡಿದರೆ ನಾನು ಹೃದಯವಿಲ್ಲದವನಲ್ಲ. ನನಗೆ ಹಾಗೆ ಅನಿಸೋದಿಲ್ಲವೇ?.

"ಹಾಗೆ ನಿನ್ನ ಬಗ್ಗೆ ಅಂದ್ಕೊಳ್ಳೋಕೆ ಹೋದ ರಾತ್ರಿಯಿಂದ ನೀನು ಮಾಡುತ್ತಿದ್ದ ಹುಚ್ಚು ಕೆಲಸಗಳಿಂದ ನಿನಗೆ ಬಿಡುವೇ ಇರಲಿಲ್ಲ ಎಂದು ಮುಸಿ ಮುಸಿ ನಗುತ್ತಾ ಹ್ಯಾರಿ ಹೇಳಿದ.

"ಆ ಥರಾ ಉತ್ತರ ನಿನ್ನಿಂದ ಬರೋದು ನನಗೆ ಹಿಡಿಸೊಲ್ಲ. ಸದ್ಯ, ನೀನು ನನ್ನನ್ನು ಸದ್ಯಕ್ಕೆ ಹೃದಯವಿಲ್ಲದವನು ಎಂದು ಭಾವಿಸಿಲ್ಲವಲ್ಲ. ನನಗೂ ಆ ಸತ್ಯ ಗೊತ್ತು. ಆದರೂ ಒಂದಂತೂ ನಿಜ. ಈಗ ನಡೆದ ಘಟನೆ ನನ್ನನ್ನು ಎಷ್ಟು ಕಲಕಬೇಕಿತ್ತೋ ಅಷ್ಟಾಗಿ ಆಗಿಲ್ಲ. ನನಗೇನಿದ್ದರೂ ಅದ್ಭುತವಾದ ನಾಟಕವೊಂದಕ್ಕೆ ಅದ್ಭುತವಾದ ಅಂತ್ಯ ಸಿಕ್ಕಿತು ಎಂದಷ್ಟೇ ಅನಿಸುತ್ತೆ. ಗ್ರೀಕ್ ದುರಂತ ನಾಟಕದ ಎಲ್ಲ ಸೌಂದರ್ಯವಿದೆ. ಒಂದೇ ಒಂದಂಶವೆಂದರೆ ನಾನು ಅದರ ಭಾಗವಾಗಿಲ್ಲ. ಮತ್ತು ಅದರಿಂದ ಘಾಸಿಗೊಂಡಿಲ್ಲ."

"ತುಂಬಾ ಒಳ್ಳೆ ಪ್ರಶ್ನೆ" ಲಾರ್ಡ್ ಹೆನ್ರಿ ಹೇಳಿದ. ಡೋರಿಯನ್ ಗ್ರೇನಲ್ಲಿ ಅವನಿಗೆ ಅರಿವಿಲ್ಲದೆ ಅವನಲ್ಲಿದ್ದ ಸುಪ್ತವಾದ ಅಹಂ ಜೊತೆಗೆ ಆಟವಾಡುವ ಹುಕಿಯೊಂದಿಗೆ ಮತ್ತೊಮ್ಮೆ ಹೇಳಿದ "ತುಂಬ ತುಂಬಾನೇ ಒಳ್ಳೆ ಪ್ರಶ್ನೆ. ನಿಜವಾದ ವಿವರಣೆ ಎಂದರೆ ಇದೇ. ಎಷ್ಟೋ ಸಲ ಜೀವನದಲ್ಲಿ ನಿಜವಾದ ದುರಂತಗಳು ಹೇಗೆ ಆಗುತ್ತವೆ. ಎಂದರೆ ಅವು ಅವುಗಳ ಕ್ರೂರ ಹಿಂಸೆ ಅರ್ಥವಾಗದ ರೀತಿ ಅಸಂಬದ್ಧತೆಗಳು ನಮ್ಮನ್ನು ಬಹಳವಾಗಿ ನೋಯಿಸುತ್ತವೆ. ನಮ್ಮ ಮೇಲೆ ತುಂಬ ಪರಿಣಾಮ ಉಂಟುಮಾಡುತ್ತವೆ. ತೀರಾ ಅಮಾನುಷ ಕ್ರೌರ್ಯ ಎನ್ನುವ ಭಾವನೆ ಹುಟ್ಟುಹಾಕುತ್ತವೆ. ನಾವು ಅವುಗಳನ್ನು ಪ್ರತಿಭಟಿಸುತ್ತೇವೆ. ಕೆಲವೊಮ್ಮೆ ನಮ್ಮ ಜೀವನದಲ್ಲಿ ಕಾಣಿಸಿಕೊಳ್ಳುವ ದುರಂತದಲ್ಲಿ ಸೌಂದರ್ಯದ ಕಲಾತ್ಮಕ ಅಂಶಗಳಿದ್ದರೆ, ಮತ್ತು ಅವು ತಮ್ಮ ನಾಟಕೀಯ ಪರಿಣಾಮಗಳಿಂದ ನಮ್ಮನ್ನು ತಟ್ಟುತ್ತವೆ. ಇದ್ದಕ್ಕಿದ್ದಂತೆ, ನಮಗೆ ನಾಟಕ ನೋಡುವ ಪ್ರೇಕ್ಷಕರೆ ಹೊರತು ಕಲಾವಿದರಲ್ಲ ಎನ್ನುವ ಸತ್ಯ ಗಮನಕ್ಕೆ ಬರುತ್ತದೆ. ಇಲ್ಲವೆ ನಾಟಕದ ನಟರು ನಾವೇ ಆಗಿದ್ದೇವೆ ಎಂತಲೂ ಅನಿಸುತ್ತದೆ. ನಮ್ಮನ್ನು ನಾವೇ ನೋಡಿಕೊಳ್ಳುತ್ತೇವೆ, ನೋಡುವ ದೃಶ್ಯಗಳಿಂದ ನಾವೇ ಸಂಭ್ರಮಿಸುತ್ತೇವೆ. ಪ್ರಸ್ತುತ ಸನ್ನಿವೇಶದಲ್ಲಿ ನಿಜವಾಗಿ ನಡೆದದ್ದೇನು? ನಿನ್ನ ಪ್ರೀತಿಗಾಗಿ ಯಾರೊ ಒಬ್ಬರು ಆತ್ಮಹತ್ಯೆ ಮಾಡಿಕೊಂಡರು. ನನಗೆ ಅಂಥ ಅನುಭವವಾಗಿದ್ದರೆ ಚೆನ್ನಾಗಿತ್ತೇನೋ ಎಂದೆನಿಸುತ್ತದೆ. ಪ್ರೀತಿಗಾಗಿ ಪ್ರೀತಿಸುತ್ತಲೇ ಉಳಿದ ಬದುಕನ್ನು ಸವೆಸುತ್ತಿದ್ದೆ. ಕೆಲವರು ನನ್ನನ್ನು ಬಹಳವಾಗಿ ಪ್ರೀತಿಸಿದರು. ಆದರೆ ನಾನು ಅವರಿಂದ ದೂರವಿದ್ದು, ಅವರಿಗಾಗಿ ಗಮನ ಹರಿಸುವುದನ್ನು ಬಿಟ್ಟರೂ ಬದುಕುತ್ತಿದ್ದಾರೆ; ಇಲ್ಲವೇ ಇನ್ನೂ ನನ್ನನ್ನು ಪ್ರೀತಿಸುತ್ತಲೇ ಇದ್ದಾರೆ. ನಾನು ಅವರು ಭೇಟಿಯಾದರೂ ಕೂಡಾ ಹಳೆ ನೆನಪುಗಳನ್ನು ಮೆಲುಕು ಹಾಕುತ್ತೇವೆ ಅಷ್ಟೆ? ಹೆಣ್ಣಿನ ಘೋರವಾದ ನೆನಪು ಎಂಥ ಭಯಾನಕ! ಎಂಥ ಜಡಗಟ್ಟಿದ ಬೌದ್ಧಿಕತೆ! ಎಲ್ಲವನ್ನೂ ಅನಾವರಣಗೊಳಿಸುತ್ತೆ. ಬದುಕಿನ ಬಣ್ಣಗಳನ್ನು ಹೀರಿಕೊಳ್ಳಬೇಕೆ ಹೊರತು, ಅದರ ವಿವರಗಳನ್ನು ಮಾತ್ರ ಮರೆಯಲೇಬೇಕು ವಿವರಗಳಿಗೆ ಹೋದರೆ ನಮ್ಮಗತಿ....."

"ಹಾಗಾದರೆ ನನ್ನ ಗತಿ"

"ಏನೂ ಆಗೊಲ್ಲ ನಿಜ. ಆಗಾಗ ನೆನಪುಗಳು ಕಾಡುತ್ತಲೇ ಇರುತ್ತವೆ. ಮತ್ತು ಒಂದಲ್ಲ ಒಂದು ದಿನ ಅವು ಸಾಯುತ್ತವೆ ಕೂಡಾ, ನನ್ನ ಅನುಭವದಲ್ಲೇ ಹಾಗಾಗಿದೆ. ನಾನು

ಪ್ರೀತಿಸುವವರೊಬ್ಬರು ತೀರಿಕೊಂಡಾಗ ಒಂದು ಋತುಮಾನದುದ್ದಕ್ಕೂ ನೆನಪಿಸಿಕೊಳ್ಳುತ್ತಾ ಶೋಕತಪ್ತನಾಗಿದ್ದೆ. ಆಮೇಲೆ ಅದು ಹೇಗೋ ಏನೋ? ನೆನಪುಗಳೆಲ್ಲವೂ ಸತ್ತು ಹೋದವು, ಸಾಯುವತನಕ ಅವು ನಮ್ಮನ್ನು ಕಾಡುತ್ತವೆ ಎಂದು ಹೆದರಿಕೊಂಡು ಬದುಕುತ್ತೇವೆ. ಈ ಹೆಂಗಸರು ಇದ್ದಾರಲ್ಲ, ಮರೆತಿರುವುದನ್ನು ಅಗೆದು ತೆಗೆಯುತ್ತಾರೆ. ಮುಕ್ತಾಯವೆಂಬುದು ಅವರಿಗೆ ಇಷ್ಟವಾಗುವುದೇ ಇಲ್ಲ. ಪ್ರೀತಿಯ ನಾಟಕ ಮುಂದುವರೆಯುತ್ತಲೇ ಇರಬೇಕೆನ್ನುತ್ತಾರೆ. ಅವರೆಲ್ಲ ಬಹಳ ತೋರಿಕೆಯ ಆಕರ್ಷಣೆಯುಳ್ಳವರು. ಆ ವಿಚಾರದಲ್ಲಿ ನನಗಿಂತ ನೀನೇ ಅದೃಷ್ಟವಂತ, ನನ್ನ ಜೀವನದಲ್ಲಿ, ನಾನು ಹೇಳ್ತಿದ್ದೀನಿ, ಯಾವೊಬ್ಬ ಹೆಣ್ಣೂ ನನಗಾಗಿ ಸಿಬಿಲ್‌ವೇನ್‌ಳಂತೆ ಪ್ರಾಣ ಕೊಡೋಕೆ ಸಿದ್ಧವಿರಲಿಲ್ಲ. ಹೆಂಗಸರ ವಿಚಾರ ಅರ್ಥ ಮಾಡಿಕೊಳ್ಳೋಕೇ ಆಗೊಲ್ಲ. ಯಾವಾಗ ಯಾವ ಥರ ಅವರ ನಡವಳಿಕೆ ಇರುತ್ತೆ, ಯಾರ ಪ್ರೀತಿ, ಎಷ್ಟು ಗಾಢವಾದದ್ದು, ನಿಜವಾದದ್ದು ಎಂದು ತಿಳಿಯುವುದೇ ಇಲ್ಲ. ಹೆಂಗಸರಿಗೆ ಆಧುನಿಕ ಬದುಕಿನಲ್ಲಿ ಸಿಗುವ ತೃಪ್ತಿಗೆ ಕೊನೆಯೆಂಬುದೇ ಇಲ್ಲ. ಹಾಂ! ನಿನಗೊಂದು ಅತಿ ಮುಖ್ಯವಾದ ವಿಷಯ ಹೇಳಬೇಕಿತ್ತು."

"ಏನದು ಹ್ಯಾರಿ"

"ಏನಿಲ್ಲ ಶಿಷ್ಟ ಸಮಾಜದಲ್ಲಿ ಮುಖವಾಡವಿಲ್ಲದ ಹೆಂಗಸರೇ ಅಪರೂಪ. ಆದರೆ ಸಿಬಿಲ್ ವೇನ್ ಎಲ್ಲ ಹೆಣ್ಣುಗಳಿಗಿಂತ ಬಹಳ ಭಿನ್ನವಾಗಿದ್ದಳು. ಅವಳ ಸಾವಿನಲ್ಲೂ ಒಂದು ವಿಶೇಷತೆಯಿದೆ. ಇಂಥ ಅದ್ಭುತಗಳು ಈಗಲೂ ನಡೆಯುತ್ತಿರುವಾಗ, ನಾನು ಬದುಕಿರುವುದೇ ಒಂದು ಸಂತೋಷ ! ಹೀಗಾದಾಗ ನಮ್ಮ ಅನುಭವಕ್ಕೆ ಬರುವ ಪ್ರಣಯ, ಪ್ರೀತಿ, ಭಾವನೆ ಇತ್ಯಾದಿಗಳ ವಾಸ್ತವತೆಯಲ್ಲಿ ನಂಬಿಕೆ ಬರುತ್ತೆ."

"ಅವಳ ವಿಚಾರದಲ್ಲಿ ನಾನು ಬಹಳ ಕ್ರೂರಿಯಾಗಿದ್ದೆ. ಅದು ನೆನಪಿರಲಿ."

"ನಾನು ಹೇಳಿದರೆ ನಿನಗೆ ಆಶ್ಚರ್ಯ ಆಗಬಹುದು. ಹೆಂಗಸರು ಬೇರೆಲ್ಲಕ್ಕಿಂತ ಕ್ರೌರ್ಯವನ್ನು ಮೆಚ್ಚುತ್ತಾರೆ. ಯಾಕೆಂದರೆ ಅವರಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಪುರಾತನ ಪ್ರವೃತ್ತಿಗಳು ನೆಲೆಸಿರುತ್ತವೆ. ನಾವು ಅವುಗಳಿಗೆ ಬಿಡುಗಡೆ ಕೊಟ್ಟಿದ್ದೀವಿ. ಅವು ತಮ್ಮ ಒಡೆಯನಿಗಾಗಿ ಹುಡುಕುತ್ತಿರುತ್ತವೆ. ಅವುಗಳಿಗೆ ಒಡೆತನದಲ್ಲಿ ಪ್ರೀತಿ ಹೆಚ್ಚು. ನೀನು ಮೊನ್ನೆ ಒಂದು ಮಾತು ಹೇಳಿದ್ದೆ. ಅದು ನನಗೆ ಆಗ, ಇದೂ ಕೂಡಾ ನಿನ್ನ ರೋಚಕತೆಗಳಲ್ಲಿ ಒಂದು ಅನಿಸಿತ್ತು."

"ಏನದು ನಾನು ಹೇಳಿದ್ದು?"

"ಅದೇ ಅದೇ ಸಿಬಿಲ್ ವೇನ್ ಎಲ್ಲಾ ಪ್ರಣಯ ನಾಯಕಿಯರನ್ನು ಪ್ರತಿನಿಧಿಸುತ್ತಾಳೆ ಎಂದು ಹೇಳಿದ್ದೆ. ಡೆಸ್ಡಮೊನಾ ಇಮೋಜೆನ್ ಮತ್ತು ಜೂಲಿಯಟ್ ಇತ್ಯಾದಿ ಇತ್ಯಾದಿ" ಎಲ್ಲ ಜೀವಂತ ಪಾತ್ರಗಳಾಗಿ ಕಾಣಿಸಿಕೊಳ್ಳುತ್ತಾಳೆ ಎಂದು.

"ಈಗಂತೂ ಜೀವಂತವಾಗಿ ಬರಲಾರಳಲ್ಲ" ಎಂದು ಮುಖ ಮುಚ್ಚಿಕೊಂಡು ದುಃಖದಿಂದ ಹೇಳಿದ.

"ನಿಜ ಬದುಕಿ ಬರೋದಂತೂ ಇಲ್ಲ. ತನ್ನ ಕಟ್ಟ ಕಡೆಯ ಪಾತ್ರವನ್ನು ಮುಗಿಸಿದ್ದಾಳೆ ಆದರೆ ಒಂದೇ ಒಂದು ದುರಂತವೆಂದರೆ ಹೋಗಿ ಹೋಗಿ ಆ ಅಗ್ಗದ ಡ್ರೆಸ್ಸಿಂಗ್ ರೂಮಿನಲ್ಲಿ ಸತ್ತಿದ್ದು! ಆ ಹುಡುಗಿ ಎಂದೂ ಬದುಕಿರಲಿಲ್ಲವಾಗಿ ನಿಜವಾಗಿ ಸಾಯಲೂ ಇಲ್ಲ. ನಿನಗವಳು ಯಾವಾಗಲೂ ಕನಸಾಗಿಯೇ ಇದ್ದಳು. ನೆರಳಾಗಿ ಷೇಕ್ಸ್‌ಪಿಯರ್ ನಾಟಕಗಳಲ್ಲಿ ಕಾಣಿಸಿಕೊಳ್ಳುತ್ತಾ ಕಡೆಯಾಗಿ ಕಣ್ಮರೆಯಾದಳು. ವಾಸ್ತವದ ಸ್ಪರ್ಶಕ್ಕೆ ಬಂದ ಕೂಡಲೇ ಅವಳ ಬದುಕು ಕಳಂಕಿತವಾಯಿತು. ಸಿಬಿಲ್‌ವೇನ್‌ಳಿಗಾಗಿ ಕಣ್ಣೀರಿಡಬೇಡ. ಅವಳು ವಾಸ್ತವಕ್ಕಿಂತ ಕಲ್ಪನೆಗೇ ಹತ್ತಿರವಾಗಿದ್ದಳು."

"ಹ್ಯಾರಿ, ನನ್ನನ್ನೇ ನನಗೆ ಸಮಾಧಾನ ಮಾಡಿಸುವಂತೆ ಮಾಡಿ ಒಂದು ರೀತಿಯಲ್ಲಿ ನಿರಾಳಗೊಳಿಸಿದ್ದಿ. ನೀನು ಹೇಳಿದ್ದೆಲ್ಲ ನನಗೂ ಅನಿಸಿತ್ತು. ಆದರೆ ಯಾಕೋ ನನಗೆ ನಾನೇ ಹೆದರಿದ್ದೆ. ನನ್ನನ್ನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡಿದ್ದೀಯ. ಆದರೆ ಇನ್ನು ಮುಂದೆ ಇದನ್ನೆಲ್ಲಾ ಮಾತಾಡೋದು ಬೇಡ. ಎಲ್ಲ ಒಂದು ಅದ್ಭುತ ಅನುಭವ. ಸಾಕು, ನೋಡೋಣ ಮುಂದೆ ಏನಾದರೂ ಇಂಥ ಅದ್ಭುತ ಅನುಭವಗಳು ಕಾದಿವೆಯೇನೋ!"

"ಬೇಕಾದಷ್ಟು ಅಚ್ಚರಿಗಳು ಕಾದಿವೆ. ಅದರಲ್ಲಿಯೂ ನಿನ್ನಂಥ ಸುಂದರ ಯುವಕನಿಗೆ ಸಾಧ್ಯವಾಗದ್ದು ಏನೂ ಇರುವುದಿಲ್ಲ."

"ಒಂದು ವೇಳೆ ಹ್ಯಾರಿ ನಾನೇದರೂ ಮುದುಕನಾಗಿಬಿಟ್ಟರೆ, ನನ್ನ ಕೆಂಗುಲಾಬಿ ಚರ್ಮ ಸುಕ್ಕುಗಟ್ಟಿದರೆ? ಆಗೇನು?"

"ಆಗೇನು! ನಿನ್ನ ದಿಗ್ವಿಜಯಗಳಿಗಾಗಿ ನೀನೇ ಹೋರಾಡಬೇಕು ಡೋರಿಯನ್. ನೀನು ಈಗ ಹೇಗಿದ್ದೀಯ, ಅದನ್ನು ಕಾಪಾಡಿಕೊಳ್ಳಬೇಕು. ನಾವೆಂಥ ಯುಗದಲ್ಲಿ ಇದ್ದೇವೆಂದರೆ, ಬುದ್ಧಿ ಮತ್ತು ಸೌಂದರ್ಯವನ್ನೇ ಹೆಚ್ಚು ನಿರೀಕ್ಷಿಸುತ್ತದೆ. ಆದ್ದರಿಂದ ನಿನ್ನನ್ನು ಹಾಗೇ ಬಿಡೋಕೆ ಸಾಧ್ಯವಿಲ್ಲ. ಬೇಗ ಒಳ್ಳೆ ಬಟ್ಟೆ ಹಾಕಿಕೊಂಡು ನಡೆ, ಕ್ಲಬ್ಬಿಗೆ ಹೋಗೋಣ. ಈಗಾಗಲೇ ಬಹಳ ತಡವಾಗಿದೆ."

"ಇಲ್ಲ ಹ್ಯಾರಿ. ನನಗೆ ತಿನ್ನೋ ಮೂಡಿಲ್ಲ. ನೇರವಾಗಿ ಅಪೆರಾಕ್ಕೇ ಬರ್‍ತೀನಿ. ನಿನ್ನ ಸೋದರಿಯ ಬಾಕ್ಸ್ ನಂಬರ್ ಏನು?"

"ಇಪ್ಪತ್ತೇಳು ಅಂತ ಕಾಣುತ್ತೆ, ಮೇಲಿನ ಸಾಲು ಆಕೆ ಹೆಸರು ಬಾಗಿಲ ಮೇಲೆ ಬರೆದಿರುತ್ತೆ. ಊಟಕ್ಕೆ ಬರೋದಿಲ್ಲಾಂತೀಯ. ನನಗೆ ಬಹಳ ಬೇಜಾರಾಗುತ್ತೆ" ಹ್ಯಾರಿ ಹೊರಟುಹೋದ ಮೇಲೆ ಭಾವಚಿತ್ರದ ಬಳಿಗೆ ಹೋಗಿ, ಅದನ್ನು ಮುಚ್ಚಿದ್ದ ಪರದೆಯನ್ನು ಸರಿಸಿದ. ಏನೂ ಬದಲಾವಣೆ ಕಾಣಲಿಲ್ಲ. ತನಗೆ ಸಿಬಿಲ್ ವೇನಳ ಸಾವಿನ ಸುದ್ದಿ ತಲುಪುವುದಕ್ಕೆ ಮೊದಲೇ ಅದಕ್ಕೆ ತಿಳಿದಿರಬೇಕು ಎಂದುಕೊಂಡ. ಅವಳು ಸಾಯುವ ಕ್ಷಣಗಳಲ್ಲಿ ಅದಕ್ಕೆ ಗೊತ್ತಾಗಿದ್ದರಿಂದಲೇ ಬಹುಶಃ ಕ್ರೂರ ರೇಖೆಗಳು ಮುಖದಲ್ಲಿ ಕಾಣಿಸಿಕೊಂಡಿರಬೇಕು. ಆತ್ಮದಲ್ಲಿ ಅಂತರಂಗದಲ್ಲಿ ಏನಾಗುತ್ತಿದೆ ಎನ್ನುವುದನ್ನು ಮಾತ್ರವೇ ಗಮನಕ್ಕೆ ತೆಗೆದುಕೊಂಡಿರಬೇಕು ಎನಿಸಿತು. ಹಾಗೆಯೇ ಒಂದು ಕ್ಷಣ ಭಯದಿಂದ ಕಂಪಿಸಿದ. ಒಂದಲ್ಲ

ಒಂದು ದಿನ ಮತ್ತೆ ತನ್ನ ಕಣ್ಣೆದುರಿಗೇ ಬದಲಾವಣೆ ಕಾಣಿಸಿಕೊಳ್ಳಬಹುದೇನೋ ಎಂದು ನಂಬಿ ನಡುಗಿದ. ಬಡಪಾಯಿ ಸಿಬಿಲ್ ! ಸ್ಟೇಜ್ ಮೇಲೆ ಎಷ್ಟೋ ಸಲ ಸಾಯುವಂತೆ ನಟಿಸಿದ್ದಳು. ಆದರೆ ಈಗ ಸಾವೇ ಅವಳನ್ನು ತನ್ನ ಜೊತೆ ಕರೆದೊಯ್ದಿದೆ. ಭಯಾನಕವಾದ ಆ ಕಡೆಯ ದೃಶ್ಯವನ್ನು ಹೇಗೆ ನಿಭಾಯಿಸಿರಬೇಕು, ಸಾಯುವಾಗ ಅವನನ್ನು ಶಪಿಸಿರಬಹುದೇ? ಇಲ್ಲ ಇಲ್ಲ ಹಾಗಾಗಲು ಸಾಧ್ಯವಿಲ್ಲ. ಏಕೆಂದರೆ ಅವಳು ಅವನನ್ನು ಪ್ರೀತಿಸಿದ್ದಳು. ಪ್ರೀತಿ ಎನ್ನುವುದು ಎಂದೆಂದಿಗೂ ಅವಳ ದೃಷ್ಟಿಯಲ್ಲಿ ಪವಿತ್ರವಾದುದು. ತನ್ನ ಪ್ರಾಣತ್ಯಾಗ ಮಾಡಿ ಎಲ್ಲಕ್ಕೂ ಪರಿಹಾರ ನೀಡಿದಳು. ಹಿಂದಿನ ರಾತ್ರಿ ತನ್ನ ಕೆಟ್ಟ ಅಭಿನಯದಿಂದ ಅವನಿಗೆಷ್ಟು ಬೇಸರ ಮಾಡಿದ್ದಳೋ ಅದೆಲ್ಲವನ್ನೂ ಇನ್ನು ಮುಂದೆ ಮರೆತು ಬಿಡುತ್ತಾನೆ. ಆದರೆ ಅವಳು ಅವನ ನೆನಪಿನಲ್ಲಿ ದುರಂತದ ರೂಪದಲ್ಲಿ ಕಾಣಿಸಿಕೊಳ್ಳುತ್ತಾಳೆ. ದುರಂತದ ರಾತ್ರಿಯನ್ನು ನಿಜವಾದ ಪ್ರೀತಿಯ ಸ್ವರೂಪ ಹೇಗಿರುತ್ತದೆಂಬುದನ್ನು ತೋರಿಸಲು ಪ್ರಪಂಚದ ರಂಗದ ಮೇಲೆ ಕಳಿಸಿಕೊಡಲಾಗಿದೆ. ನೆನಪಿಸಿಕೊಂಡಾಗ ಅವನ ಕಣ್ಣು ಹನಿಯಿತು. ಕಂಬನಿಯನ್ನು ಒರೆಸಿಕೊಂಡು ಮತ್ತೊಮ್ಮೆ ಚಿತ್ರದ ಕಡೆ ನೋಡಿದ. ತನ್ನ ಆಯ್ಕೆಗಳಿಗೆ ಈಗ ಸಮಯ ಬಂದಿದೆ. ಪ್ರಾಯದಲ್ಲಿನ ಭೋಗ ವಿಲಾಸಗಳನ್ನು ಅನುಭವಿಸಬೇಕು. ಜೀವನದ ಒಂದೊಂದು ಕ್ಷಣವನ್ನೂ ಮಧುರ ಸ್ಮೃತಿಗಳಾಗಿ ಪರಿವರ್ತಿತವಾಗಿಸಬಲ್ಲ ಎಲ್ಲ ಸುಖ ಸಂತೋಷಗಳನ್ನು ಹುಚ್ಚು ಪ್ರಾಯದ ವಿಶೃಂಖಲ ಬದುಕನ್ನು ಮುಕ್ತವಾಗಿ ಅನುಭವಿಸಿಬಿಡಬೇಕು. ಭಾವಚಿತ್ರವನ್ನು ಅದರ ನಾಚಿಕೆಗೇಡಿತನದ ಹೊರೆಯನ್ನು ಹೊರಲು ಅದರ ಪಾಡಿಗೆ ಬಿಟ್ಟು ಬಿಡಬೇಕು. ಅದಷ್ಟೇ ಉಳಿದಿರುವ ದಾರಿ.

ತನ್ನ ಈ ನಿರ್ಧಾರ ಅವನಿಗೆ ನೋವುಂಟುಮಾಡಿತು. ಹುಡುಗತನದ ವಯಸ್ಸಿನಲ್ಲಿನ ಸ್ವಾನುರಕ್ತಿಯಿಂದಾಗಿ ಕ್ಯಾನ್‌ವಾಸ್ ಮೇಲಿನ ತನ್ನದೇ ಭಾವಚಿತ್ರದ ತುಟಿಗಳಿಗೆ ಮುತ್ತಿಟ್ಟಿದ್ದ. ಈಗ ತನ್ನ ಬದಲಾಗುತ್ತಿರುವ ಕ್ಷಣ ಕ್ಷಣದ ಭಾವಗಳಿಗೆ ನಿಜವಾಗಿ ಅದು ಸ್ಪಂದಿಸುತ್ತಿದೆಯೇ? ಅದನ್ನು ಹೀಗೆ ಕೋಣೆಯಲ್ಲಿ ಯಾರ ಕಣ್ಣಿಗೂ ಬೀಳದಂತೆ ಮುಚ್ಚಿಡುವಷ್ಟು ಅಸಹ್ಯಕರ ಮತ್ತು ಭಯಂಕರವಾಗಿದೆಯೇ? ಅದರ ಹೊಂಬಣ್ಣದ ಕೂದಲನ್ನು ಸೂರ್ಯ ಬೆಳಕಿನಿಂದ ದೂರವಿಡಬೇಕಾಗಿದೆಯೇ? ಎಂಥ ಶೋಚನೀಯತೆ!.

ಒಂದು ಕ್ಷಣ, ತನ್ನ ಮತ್ತು ಚಿತ್ರದ ನಡುವಿದ್ದ ಭಯಂಕರ ಸಹಾನುಭೂತಿಗೆ ಕೊನೆಯಾಗಲೆಂದು ಪ್ರಾರ್ಥಿಸಬೇಕೆಂದುಕೊಂಡ. ಅದು ಪ್ರಾರ್ಥನೆಗೆ ಉತ್ತರ ಕೊಡುವಂತೆ, ಬದಲಾಗಿಯೂ ಇತ್ತು. ಬದಲಾಗದೆಯೂ ಇತ್ತು. ಆದರೂ ಬದುಕನ್ನು ಅರ್ಥಮಾಡಿಕೊಂಡಿದ್ದವರಿಗೆ ನಿರಂತರ ಯವ್ವನದ ಸಾಧ್ಯತೆ ಅಸಾಧ್ಯತೆಗಳು ನಮ್ಮ ನಿಯಂತ್ರಣವನ್ನು ಮೀರಿದ ಸಂಗತಿ ಎನ್ನುವುದರ ಅರಿವಿತ್ತು. ಭಾವಚಿತ್ರದಲ್ಲಿ ಏನಾಗಬೇಕೋ ಅದು ಆಗಿಯೇ ಆಗುತ್ತದೆ. ಅದಕ್ಕಾಗಿ ಪದೇ ಪದೇ ಅದರ ಗುಂಗಿನಲ್ಲಿ ಇರುವ ಅಗತ್ಯವಾದರೂ ಏನಿದೆ? ಚಿತ್ರ ನೋಡುವುದರಲ್ಲಿ ಸಂತೋಷ ನಿಜವಾಗಿಯೂ ಸಿಗಬಹುದು. ಆದರೆ ಅದರ ಶಲ್ಯ ಪರೀಕ್ಷೆ ಏಕೆ? ಅವನಿಗೆ ತನ್ನ ಈ ಭಾವಚಿತ್ರ ಮಾಂತ್ರಿಕ ಕನ್ನಡಿಗಳಾಗಿರಬಹುದು. ಅವನಿಗೆ ಅವನದೇ ಶರೀರವನ್ನು ಅವನದೇ ಆತ್ಮವನ್ನು ಬಿಂಬಿಸಿ

ತೋರಿಸಲೂ ಬಹುದು. ಆದರೆ ತಾನು ಮಾತ್ರ ತನ್ನ ಪ್ರಾಯದ, ಚೆಂದ ಚೆಲುವುಗಳನ್ನು, ಬದುಕಿನ ಜೀವಂತಿಕೆಯನ್ನು, ಕರಗದ ಕನಸುಗಳನ್ನು ಬಾಡದ ಸಂತೋಷ ಸಂಭ್ರಮಗಳನ್ನು ಸದಾ ಹಸಿರಾಗಿ ಇರಿಸಿಕೊಳ್ಳಲು ಸಾಧ್ಯವಾಗುವಾಗ ಭಾವಚಿತ್ರಕ್ಕೆ ಏನಾದರೇನು? ತಾನು ಮಾತ್ರ ಸುರಕ್ಷಿತ. ಅಷ್ಟಾದರೆ ಸಾಕಲ್ಲವೇ?

ಭಾವಚಿತ್ರದ ಮೇಲೆ ಪರದೆ ಎಳೆದು ತನ್ನ ಕೋಣೆಗೆ ಹೋದ. ತನಗಾಗಿ ಕಾಯುತ್ತಿದ್ದ ಸೇವಕನ ಜೊತೆ ಮಾತಾಡಿ, ರೆಡಿಯಾಗಿ ಅಪೆರಾಗೆ ಹೋದ. ಅಲ್ಲಿ ಆಗಲೇ ಹೆನ್ರಿ ಅವನಿಗಾಗಿ ಕಾಯುತ್ತಿದ್ದ.

❖

# ಅಧ್ಯಾಯ - 9

ಮಾರನೆ ದಿನ ಡೋರಿಯನ್ ತನ್ನ ಕೋಣೆಯಲ್ಲಿ ಬೆಳಗಿನ ಉಪಾಹಾರಕ್ಕೆ ಕುಳಿತಿದ್ದಾಗ ಬೇಸಿಲ್ ಹಾಲ್‌ವಾರ್ಡ್ ಪ್ರವೇಶಿಸಿದ.

"ಸದ್ಯ ನೀನೆಲ್ಲಿ ಸಿಗುವುದಿಲ್ಲವೋ ಎಂದಿದ್ದೆ ಡೋರಿಯನ್. ಹಿಂದಿನ ರಾತ್ರಿ ನಿನ್ನ ಮನೆಗೆ ಬಂದಿದ್ದೆ. ನೀನು ಅಪೆರಾಗೆ ಹೋಗಿದ್ದಿ ಅಂತ ಗೊತ್ತಾಯಿತು. ಆದರೆ ಅದನ್ನು ನಂಬುವುದಕ್ಕೆ ನನ್ನಿಂದ ಸಾಧ್ಯವಾಗಲಿಲ್ಲ. ನಿಜವಾಗಿಯೂ ನೀನು ಹೋಗಿರಲಾರೆ ಎಂದುಕೊಂಡೆ. ರಾತ್ರಿಯೆಲ್ಲಾ ನಿದ್ದೇನೇ ಬರಲಿಲ್ಲ. ಭಯಾನಕ ಆಲೋಚನೆಗಳು! ದುರಂತವೊಂದು ಈಗ ಸಂಭವಿಸಿದೆ. ಅದರ ಹಿಂದೇನೇ ಇನ್ನೊಂದು ದುರಂತ ಸಂಭವಿಸಬಹುದೇನೋ ಎನ್ನುವ ಭೀತಿ. ನಿನಗೆ ಗೊತ್ತಾದ ಕೂಡಲೇ ನನಗೆ ಕರೆಮಾಡಬೇಕಾಗಿತ್ತು, ಸಂಜೆ ಗ್ಲೋಬ್ ಪತ್ರಿಕೆ ಓದಿದಾಗಲೇ ವಿಷಯ ತಿಳಿದದ್ದು, ತಕ್ಷಣ ನಿನ್ನ ಮನೆಗೆ ಬಂದೆ. ಆಗ ನಿನ್ನ ಸೇವಕ ನೀನು ಅಪೆರಾಗೆ ಹೋಗಿದ್ದಿ ಅಂತ ಗೊತ್ತಾಯಿತು. ನಡೆದದ್ದೆಲ್ಲ ಕೇಳಿ ಎದೆ ಒಡೆದು ಹೋಯಿತು. ಅಂಥಾದ್ದರಲ್ಲಿ ನೀನೆಷ್ಟು ಸಂಕಟ ಪಟ್ಟಿರಬೇಕು. ಆದರೆ ನೀನೆಲ್ಲಿದ್ದೆ? ಆ ಹುಡುಗಿ ತಾಯಿಯನ್ನಾದರೂ ನೋಡಲು ಹೋಗಿದ್ದಿಯೇನು? ನೀನೇನಾದರೂ ಹೋಗಿದ್ದರೆ, ನಾನೂ ಅಲ್ಲಿಗೇ ಬರೋಣ ಅಂತ ಅಂದುಕೊಂಡಿದ್ದೆ. ಅಡ್ರೆಸ್ಸೂ ತಗೊಂಡೆ. ಆದರೆ ಆಮೇಲೆ ಅನ್ನಿಸಿತು. ನಿಮ್ಮ ದುಃಖದ ಮಧ್ಯೆ ಪ್ರವೇಶಿಸಿ, ದುಃಖವನ್ನು ಕಡಿಮೆ ಮಾಡಲು ಆಗದಿರುವಾಗ, ಸುಮ್ಮನೆ ಯಾಕೆ ಅಂದುಕೊಂಡೆ. ಬಡಪಾಯಿ ಹೆಂಗಸು. ಈ ಆಘಾತವನ್ನು ಹೇಗೆ ಸಹಿಸಿಕೊಂಡಿರಬೇಕು! ಅದೂ ಒಬ್ಬಳೇ ಮಗಳು! ಆಕೆ ಇದರ ವಿಷಯವಾಗಿ ಏನು ಹೇಳಿದಳು?"

"ಗೆಳೆಯ ಬೇಸಿಲ್. ಅದು ನನಗೆ ಹೇಗೆ ಗೊತ್ತಾಗುತ್ತೆ?" ಎಂದು ಹೇಳುತ್ತಾ ವೈನ್ ಗ್ಲಾಸನ್ನು ತುಟಿಗೆತ್ತಿಕೊಂಡು ಹೀರ ತೊಡಗಿದ. ನೋಡಲು ತುಂಬಾ ಬೇಸರದಲ್ಲಿ ಇದ್ದಂಗೆ ಇತ್ತು. ನೀನೂ ಅಪೆರಾಗೆ ಬಂದು ಬಿಡಬಹುದಾಗಿತ್ತು. ನಾನು ಅಲ್ಲಿಯೇ ಇದ್ದೆ. ಹೆನ್ರಿ ಸಿಸ್ಟರ್ ಬಂದಿದ್ದಳು. ತುಂಬಾ ಚೆನ್ನಗಿದ್ದಳು. ಇದೇ ಮೊದಲ ಸಲ ಅವಳನ್ನು ಭೇಟಿಯಾದದ್ದು. ಭಯ ಹುಟ್ಟಿಸುವ ವಿಷಯಗಳನ್ನು ಹೇಳಬೇಡ. ಅಂಥವುಗಳ ಬಗ್ಗೆ ಮಾತಾಡದೆ ಇದ್ದು ಬಿಟ್ಟರೇನೆ ಒಳ್ಳೇದು. ಅವೆಲ್ಲಾ ಆಗಿಯೇ ಇಲ್ಲ ಎಂದುಕೊಂಡು ಬಿಡುತ್ತೇವೆ. ಇನ್ನೊಂದು ನೀನು ಕೇಳಿದ ಪ್ರಶ್ನೆಗೆ ಉತ್ತರ ಹೇಳೋದಾದರೆ, ಅವಳೊಬ್ಬಳೇ ಅಲ್ಲ. ಆಕೆಗೆ ಒಬ್ಬ ಮಗನೂ ಇದ್ದಾನೆ, ಆದರೆ ಅವನೇನೂ ರಂಗ ನಟ ಅಲ್ಲ. ಅವನು ನಾವಿಕನೋ ಏನೋ ಆಗಿರಬೇಕು. ಹೇಳು ನಿನ್ನ ಪೈಟಿಂಗ್ ಕೆಲಸ ಹೇಗೆ ನಡೀತಿದೆ"

"ಏನು ನೀನು ಅಪೆರಾಗೆ ಹೋಗಿದ್ದಿಯಾ?" ನೋವಿನ ದನಿಯಲ್ಲಿ ಕೇಳಿದ. "ಸಿಬಿಲ್ ವೇನ್ ದರಿದ್ರವಾದ ಲಾಡ್ಜಿಂಗ್‌ನಲ್ಲಿ ಸಾಯ್ತಾ ಬಿದ್ದಿರುವಾಗ ನೀನು ಅಪೆರಾಕ್ಕೆ ಹೋದೆಯಾ? ಆಕರ್ಷಕ ಹೆಣ್ಣುಗಳ ಬಗ್ಗೆ ಮಾತಾಡೋಕೆ ಆಗುತ್ತೆ, ಪ್ಯಾಟಿ ತುಂಬಾ ಚೆನ್ನಾಗಿ ಹಾಡಿದ್ದನ್ನು ಮೆಚ್ಚೋಕೆ ಆಗುತ್ತೆ, ಆದರೆ ನಿನ್ನನ್ನು ಪ್ರೀತಿಸಿದ ಆ ಹೆಣ್ಣು ಸಮಾಧಿಯಲ್ಲಿ ಚಿರನಿದ್ರೆಗೆ ಸರಿದಿರುವುದು ನಿನಗೇನೂ ಅನಿಸಲಿಲ್ಲ! ಯಾಕೆ? ಆ ಪುಟ್ಟ ದೇಹಕ್ಕೆ ಮುಂದೆ ಇನ್ನೂ ಏನೇನು ಭಯಂಕರ ಅನಿಷ್ಟಗಳು ಕಾದಿವೆಯೋ?"

"ಸಾಕು ಮಾಡು ಬೇಸಿಲ್! ಇನ್ನು ನನಗೆ ಕೇಳೋಕೆ ಆಗೋದಿಲ್ಲ" ಎಂದು ಕಾಲನ್ನು ನೆಲಕ್ಕೆ ಝಾಡಿಸುತ್ತಾ ಎದ್ದು ನಿಂತ. ಬೇಡದ್ದೆಲ್ಲ ಮಾತಾಡಬೇಡ, ಆದದ್ದು ಆಗಿ ಹೋಯ್ತು"

"ಏನು, ನೆನ್ನೆ ನಡೆದದ್ದೂ, ನಡೆದುಹೋದದ್ದೇ!?"

"ಎಷ್ಟು ಹಿಂಸೆ ಆದದ್ದು ಅನ್ನೋದು ಮುಖ್ಯ ಅಲ್ಲ ಬುದ್ಧಿ ಇಲ್ಲದ ಜನಕ್ಕೆ ಮರೆಯೋದಕ್ಕೆ ವರ್ಷಗಳೇ ತಗೋತಾರೆ. ಆದರೆ ಒಬ್ಬ ತನಗೆ ತಾನೇ ಯಜಮಾನನಾಗಿರುವವನು ದುರಂತವನ್ನು ಸುಲಭವಾಗಿ, ಕ್ಷಣಗಳಲ್ಲಿ ಮರೆಯುತ್ತಾನೆ. ಅಲ್ಲದೆ ಹೊಸದಾಗಿ ಬೇಕಾದ ಮನೋರಂಜನೆಗಳನ್ನೂ ಹುಡುಕಿಕೊಳ್ಳುತ್ತಾನೆ. ಅಂತೆಯೇ ನನ್ನ ಭಾವನೆಗಳಿಗೆ ನಾನು ಗುಲಾಮನಾಗಿರಲಾರೆ. ಅವುಗಳನ್ನು ಬಳಸಿಕೊಳ್ಳುತ್ತೇನೆ, ಮಜ ಮಾಡುತ್ತೇನೆ, ಅಂಕೆಯಲ್ಲಿರಿಸಿಕೊಳ್ಳುತ್ತೇನೆ."

"ಡೋರಿಯನ್ ಇದು ಬಹಳ ಅನ್ಯಾಯ ನಿನಗೆ ಏನೋ ಆಗಿದೆ. ಎಷ್ಟು ಬದಲಾಗಿ ಬಿಟ್ಟಿದ್ದೀ. ನೀನು ನನ್ನ ಸ್ಟುಡಿಯೋಗೆ ಬಂದಾಗ ನನ್ನ ಮುಂದೆ ಕುಳಿತಾಗ ನೀನೆಷ್ಟು ಸರಳ, ಮುಗ್ಧ, ಆಕರ್ಷಕ, ಮುದ್ದಾಡಬೇಕೆನ್ನುವ ರೀತಿಯಲ್ಲಿ ಇದ್ದೆ. ಇಡೀ ಪ್ರಪಂಚದಲ್ಲಿಯೇ ಕಾಣಸಿಗದ ಬಹಳ ಒಳ್ಳೆಯ ಹುಡುಗನಾಗಿದ್ದೆ. ಆದರೆ ಈಗ ಏನಾಗಿದೆ ನಿನಗೆ, ನಿನಗೆ ಹೃದಯವೇ ಇಲ್ಲವೇನೋ ಎಂಬಂತೆ ಮಾತಾಡುತ್ತಿದ್ದೀಯ. ಎಷ್ಟು ನಿಷ್ಠುರಿ, ಕ್ರೂರಿಯಾಗಿದ್ದೀಯ. ಇದೆಲ್ಲಾ ಬಹುಶಃ ಹ್ಯಾರಿಯ ಪ್ರಭಾವವೇ ಇರಬೇಕು." ಅವನಿಗೆ ನಾಚಿಕೆಯೆನಿಸಿರಬೇಕು. ಎದ್ದು ಕಿಟಕಿಯ ಬಳಿಗೆ ಹೋಗಿ ಅಚ್ಚಹಸುರಿನ, ಸೂರ್ಯ

ಬೆಳಕಿನಿಂದ ತೊಯ್ದು ತೋಟವನ್ನು ನೋಡಿದ, "ಹ್ಯಾರಿಗೆ ನಾನು ಹೆಚ್ಚು ಋಣಿಯಾಗಿದ್ದೇನೆ ಬೇಸಿಲ್" ನಿನಗಿಂತ ಹೆಚ್ಚು! ನೀನು ನನಗೆ ಕಲಿಸಿದ್ದು ಬದುಕಿನ ನಿಸ್ಸಾರತೆ, ನಿಷ್ಫಲತೆಗಳನ್ನಷ್ಟೇ!

"ಅದಕ್ಕಾಗಿ ನನಗೆ ಶಿಕ್ಷೆ... ಈಗಲ್ಲದಿದ್ದರೆ ಮುಂದೆ ಎಂದಾದರೂ....."

"ಏನು ಹೇಳೋಕೆ ಹೊರಟಿದ್ದೀಯೋ ಗೊತ್ತಾಗ್ಲಿಲ್ಲ ಬೇಸಿಲ್" ಉದ್ಗರಿಸಿದ. ಒಮ್ಮೆ ತಿರುಗಿ ಹೇಳಿದ. "ನಿನಗೆ ಏನು ಬೇಕೋ ಗೊತ್ತಾಗಿಲ್ಲ ಹೇಳು ಏನು ಬೇಕು?"

"ನನ್ನ ಭಾವಚಿತ್ರದ ಡೋರಿಯನ್ ನನಗೆ ಹಿಂತಿರುಗಿ ಬರಬೇಕು" ಎಂದು ದುಃಖದಿಂದ ಹೇಳಿದ, "ಬೇಸಿಲ್ ಎಂದು ಆತ್ಮೀಯವಾಗಿ ಅವನ ಹೆಗಲ ಮೇಲೆ ಕೈಯಿರಿಸುತ್ತಾ "ನೀನು ಬಹಳ ತಡವಾಗಿ ಬಂದೆ ನಿನ್ನೆ ಸಿಬಿಲ್ ವೇನ್ ಆತ್ಮಹತ್ಯೆ ಮಾಡಿಕೊಂಡಳು ಎಂಬ ಸುದ್ದಿ ಕೇಳಿದಾಗಿನಿಂದ...."

"ಅಂದ್ರೆ? ಆತ್ಮಹತ್ಯೆ ಮಾಡಿಕೊಂಡಳೇ! ದೇವರೇ! ಅನುಮಾನ ಏನೂ ಇಲ್ಲಾ ತಾನೇ?" ಎಂದು ಅವನ ಕಡೆ ಭಯಭೀತನಾದಂತೆ ಕೇಳಿದ. ಗೆಳೆಯ ಬೇಸಿಲ್, ಅದೇನೋ ಆಕಸ್ಮಿಕ ಅಪಘಾತ ಅಂತ ಭಾವಿಸಬೇಡ. ನಿಜವಾಗಿಯೂ ಅವಳು ಮಾಡಿಕೊಂಡದ್ದು ಆತ್ಮಹತ್ಯೆಯೇ!" ಆ ಹಿರಿಯ ಕೈಗಳಿಂದ ಮುಖಮುಚ್ಚಿಕೊಂಡು ಎಂಥಾ ಭಯಾನಕ ಸುದ್ದಿ!" ಎಂದು ತನ್ನೊಳಗೇ ಹೇಳಿಕೊಳ್ಳುತ್ತಾ, ಒಂದು ಕ್ಷಣ ಕಂಪಿಸಿದ. ಇಲ್ಲ ಇದರಲ್ಲಿ ಇಷ್ಟು ಭಯಾನಕವಾದದ್ದು ಏನೂ ಇಲ್ಲ, ಯುಗದ ಪ್ರಣಯ ದುರಂತಗಳಲ್ಲಿ ಇದೂ ಕೂಡಾ ಒಂದು ಮಹತ್ವದ ದುರಂತ ಅಷ್ಟೆ! ಇನ್ನೂ ಹೇಳುವುದಾದರೆ, ನಾಟಕ ಕಲಾವಿದರ ಬದುಕೆಲ್ಲಾ ತೀರಾಸಾಮಾನ್ಯವಾದದ್ದೇ. ಅವರಲ್ಲಿ ಒಳ್ಳೆ ಗಂಡಂದಿರು ಅಥವಾ ಪ್ರಾಮಾಣಿಕ ಹೆಂಡಂದಿರು ಇರುವುದು ಮಾಮೂಲೇ. ನಾನು ಹೇಳುವುದು ಅರ್ಥವಾಗಿರಬೇಕು. ಮಧ್ಯಮವರ್ಗದವರ ಆದರ್ಶಗಳು ಮೌಲ್ಯಗಳು! ಸಿಬಿಲ್ ಎಷ್ಟು ಭಿನ್ನವಾಗಿದ್ದಳು. ಅವಳ ಸಾವೂ ದುರಂತ ನಾಟಕಗಳ ನಾಯಕಿಯರ ದುರಂತ ಸಾವಿನಷ್ಟೇ ಅದ್ಭುತವಾಗಿತ್ತು. ಸಾಯುವ ಹಿಂದಿನ ದಿನ ತೀರಾ ಕೆಟ್ಟದಾಗಿ ಅಭಿನಯಿಸಲು ಕಾರಣ, ನಿಜವಾದ ಪ್ರೀತಿಯ ಅನುಭವವಾಗಿತ್ತು. ಯಾವಾಗ ತಾನು ತೋರುತ್ತಿರುವ ಪ್ರೀತಿ ಕೃತಕವಾದದ್ದೆಂದು ಅರಿವಾದೊಡನೆ ಸಾವಿಗೆ ಶರಣಾದಳು. ಹುತಾತ್ಮಳು ಎನಿಸಿಕೊಳ್ಳುವಂತಾದಳು. ಅವಳ ಸಾವಿನಲ್ಲಿ ಹುತಾತ್ಮತೆಯ ನಿಷ್ಪ್ರಯೋಜಕತೆ, ಸೌಂದರ್ಯದ ವ್ಯರ್ಥತೆಗಳೂ ಸೇರಿಕೊಂಡಿವೆ. ನಿನ್ನೆ ಬಂದಿದ್ದರೆ, ನಿನಗೇ ಗೊತ್ತಾಗುತ್ತಿತ್ತು. ನಾನೆಷ್ಟು ಅವಳಿಗಾಗಿ ಅತ್ತೆ ಎಂಬುದು! ಸುದ್ದಿ ತಿಳಿಸಲು ಬಂದಿದ್ದ ಹ್ಯಾರಿಗೂ ನನ್ನ ಮೇಲೆ ಎಂಥ ಪರಿಣಾಮವಾಗಿದೆ, ನಾನೇನು ಅನುಭವಿಸುತ್ತಿದ್ದೇನೆ ಎಂಬುದು ಗೊತ್ತಿರಲಿಲ್ಲ. ತುಂಬ ದುಃಖಿಸಿದೆ. ಆದರೆ ಮತ್ತೊಮ್ಮೆ ಆ ದುಃಖವನ್ನು ತೋರಿಸಿಕೊಳ್ಳಲು ನನ್ನಿಂದ ಆಗುವುದಿಲ್ಲ. ತೀರಾ ಭಾವುಕಭಾವದವರಿಗೆ ಮಾತ್ರ ಅದು ಸಾಧ್ಯವಾಗಬಹುದೇನೋ. ನನ್ನನ್ನು ತಪ್ಪಾಗಿ ತಿಳಿದಿದ್ದೀ. ನನ್ನನ್ನು ಸಮಾಧಾನಪಡಿಸಲು ಬಂದಿದ್ದೀ. ಅದು ನಿನ್ನ ಒಳ್ಳೆತನ. ಆದರೆ ಈಗ ನಾನು ಸಮಾಧಾನವಾಗಿರುವುದು ನೋಡಿ ಕೋಪಮಾಡಿಕೊಳ್ತಾ ಇದ್ದೀಯ. ಇದು ತಮಾಶೆ ಅನಿಸೊಲ್ಲವೇ? ನಿಜವಾಗಿ ಸಮಾಧಾನ ಮಾಡೋಕೇ ಬಂದಿದ್ದೀಯ ಅನ್ನೋದಾದರೆ,

ನಡೆದದ್ದನ್ನೆಲ್ಲಾ ಹೇಗೆ ಮರೆಯೋದು ಅನ್ನೋದನ್ನು ಹೇಳಿಕೊಡು. ಇಲ್ಲವೇ ಕಲಾದೃಷ್ಟಿಯಿಂದ ಅದನ್ನು ಹೇಗೆ ನೋಡಬೇಕು ಅಂತ ತಿಳಿಸು.

ಹ್ಯಾರಿ ಹೇಳೋ ಹಾಗೆ, ತನ್ನ ಬದುಕನ್ನು ತಾನೆ ಪ್ರೇಕ್ಷಕನಾಗಿ ನೋಡಬೇಕಾದರೆ, ಬದುಕಿನಲ್ಲಿನ ನೋವು ಸಂಕಟಗಳಿಂದ ತಪ್ಪಿಸಿಕೊಳ್ಳಬೇಕು, ನಾನು ಮಾತಾಡೊ ರೀತಿ ನಿನಗೆ ಆಶ್ಚರ್ಯವೆನಿಸಬಹುದು. ನಾನು ಹೀಗೆ ಹೇಗಾದೆ ಅನ್ನುವುದು ನಿನಗೆ ಸರಿಯಾಗಿ ಗ್ರಹಿಸಲಾಗಿಲ್ಲ. ನಿನ್ನ ಪರಿಚಯ ಆದಾಗ ನಾನು ಶಾಲೆಯ ಹುಡುಗನಾಗಿದ್ದೆ. ಈಗ ವಯಸ್ಸಿಗೆ ಬಂದಿದ್ದೇನೆ. ಹೊಸ ಹೊಸ ಆಸೆಗಳು, ಕನಸುಗಳು, ಭಾವನೆಗಳು, ವಿಚಾರಗಳು ನನ್ನಲ್ಲಿ ಉಂಟಾಗಿವೆ. ನಾನು ಈಗ ಮೊದಲಿಗಿಂತ ಬೇರೆಯೇ ಆಗಿದ್ದೇನೆ. ಆದರೆ ನೀನು ಮಾತ್ರ ನನ್ನನ್ನು ಎಂದಿನಂತೆ ಪ್ರೀತಿಸಬೇಕು. ನಾನು ಬದಲಾಗಿರಬಹುದಾದರೂ ನೀನು ನನ್ನ ಹಳೆಯ ಗೆಳೆಯನೇ ಆಗಿರಬೇಕು. ಹ್ಯಾರಿ ಎಂದರೆ ನನಗೆ ತುಂಬ ಪ್ರೀತಿ. ಆದರೆ ನೀನು ಅವನಿಗಿಂತ ಹೆಚ್ಚು. ನಿನಗೆ ಧೈರ್ಯ ಸಾಲದು. ಬಹಳ ಬೇಗ ಎಲ್ಲಕ್ಕೂ ಹೆದರ್ತೀಯ. ಆದರೂ ಅವನಿಗಿಂತ ನೀನು ಇಷ್ಟ. ನಾವಿಬ್ಬರೂ ಎಷ್ಟು ಸಂತೋಷವಾಗಿದ್ದೆವು, ನನ್ನನ್ನು ಬಿಟ್ಟು ಹೋಗಬೇಡ; ಜಗಳ ಮಾಡಬೇಡ. ನಾನು ಹೇಗಿರಬೇಕೊ ಹಾಗಿದ್ದೀನಿ. ಇನ್ನೂ ಹೆಚ್ಚಿಗೆ ಹೇಳೋದೇನೂ ಇಲ್ಲ."

ಕಲಾವಿದ ಬೇಸಿಲ್‌ನ ಹೃದಯ ಕರಗಿತು. ಅವನಿಗೆ ಡೋರಿಯನ್ ಎಂದರೆ ಪ್ರಾಣ. ಅವನ ವ್ಯಕ್ತಿತ್ವ ಅವನ ಕಲೆಗೆ ಒಂದು ಹೊಸ ತಿರುವನ್ನು ಕೊಟ್ಟಿತ್ತು. ಇನ್ನು ಅವನನ್ನು ಬೇಸರಪಡಿಸಬಾರದು ಎಂದುಕೊಂಡ. ತಾನು ಹೀಗೆ ಅವನ ಜೊತೆ ನಡೆದುಕೊಂಡದ್ದು ಕೂಡಾ ಸಾಂದರ್ಭಿಕ. ಕ್ರಮೇಣ ಮರೆತುಹೋಗುತ್ತೆ. ಅವನಲ್ಲಿ ಇನ್ನೂ ಸಾಕಷ್ಟು ಒಳ್ಳೆತನವಿದೆ. ಉದಾತ್ತತೆಯಿದೆ.

"ಆಯಿತು ಡೋರಿಯನ್, ಇನ್ನು ನಾನು ಈ ವಿಷಯದ ಬಗ್ಗೆ ಮಾತಾಡೋಲ್ಲ" ಎಂದು ಮುಗುಳ್ನಗೆಯೊಂದಿಗೆ ಮುಂದುವರೆದ – ನಾನು ಬಯಸುವುದು ಇಷ್ಟೆ, ಈ ಘಟನೆಗೆ ಸಂಬಂಧಿಸಿದಂತೆ ನಿನ್ನ ಹೆಸರು ಎಲ್ಲೂ ಕಾಣಿಸಿಕೊಳ್ಳಬಾರದು. ವಿಚಾರಣೆ ಇವತ್ತು ಮಧ್ಯಾಹ್ನ ನಡೆಯಲಿದೆ. ನಿನಗೇನಾದರೂ ಕರೆಕಳಿಸಿದ್ದರೆ? ಇಲ್ಲ ಎನ್ನುವುದನ್ನು ಸೂಚಿಸುವಂತೆ ತಲೆಯಾಡಿಸಿದ. ಅವನ ಮುಖದಲ್ಲಿ 'ವಿಚಾರಣೆ', ಶಬ್ದ ಕೇಳಿದ್ದೇ ಒಂದು ರೀತಿಯ ಅಸಹನೆ ಕಾಣಿಸಿತು. ಆ ಘಟನೆ ಎಷ್ಟು ಭಯಂಕರವಾಗಿ, ಕೆಟ್ಟದಾಗಿತ್ತು ಅಂದರೆ... ಅವರಿಗೆ ನನ್ನ ಹೆಸರು ಗೊತ್ತಿಲ್ಲ" ಎಂದ. "ಆದರೆ ಅವಳಿಗೆ ಗೊತ್ತಿತ್ತಲ್ಲ".

"ನನ್ನ ಕ್ರಿಶ್ಚಿಯನ್ ಹೆಸರು ಮಾತ್ರವೇ ಗೊತ್ತಿತ್ತು. ಅಲ್ಲದೆ ಅವಳು ಯಾರ ಬಳಿಯೂ ನನ್ನ ಹೆಸರಿನ ಪ್ರಸ್ತಾಪ ಮಾಡಿರಲಿಲ್ಲ. ಒಮ್ಮೆ ನನಗೆ ಹೇಳಿದ್ದೇನೆಂದರೆ, ಅವರೆಲ್ಲ ಬಲವಂತದಿಂದ ಹೆಸರು ಹೇಳೆಂದಾಗ ಅವಳು ಕೇವಲ ಪ್ರಿನ್ಸ್ ಚಾರ್ಮಿಂಗ್ ಅಂತ ಮಾತ್ರವೇ ಹೇಳಿದ್ದಳಂತೆ. ಎಂಥ ಒಳ್ಳೆ ಕೆಲಸ ಮಾಡಿದ್ದಳು ಬೇಸಿಲ್ ಅವಳದೊಂದು ಚಿತ್ರ ಬರಕೊಡಬೇಕು. ಕೇವಲ ಕೆಲವು ಚುಂಬನದ ಕ್ಷಣಗಳು, ಕೆಲವು ಹೃದಯವಿದ್ರಾವಕ ಸಂಗತಿಗಳ ನೆನಪುಗಳಿಗಿಂತ ಹೆಚ್ಚಿನದಾದ ಯಾವುದಾದರೂ ಒಂದು ವಸ್ತು ನನ್ನ ಬಳಿ ಇರಬೇಕು.

"ನಿನಗೆ ಸಂತೋಷ ಆಗುವುದಾದರೆ, ನಾನು ಪ್ರಯತ್ನ ಮಾಡ್ತೀನಿ. ಆದರೆ ನೀನು ನನ್ನ ಜೊತೆ ಬಂದು ಕುಳಿತಿರಬೇಕು. ನೀನಿಲ್ಲದೆ ನನಗೆ ಇರೋಕೆ ಆಗೊಲ್ಲ" ನಿನಗಾಗಿ ನಾನು ಇನ್ನು ಮುಂದೆ ಕೂರಲು ಸಾಧ್ಯವೇ ಇಲ್ಲ" ಎಂದು ಉದ್ಗರಿಸಿದ. ಬೇಸಿಲ್ ಅವನ ಕಡೆ ಕಣ್ಣು ನೆಟ್ಟು ನೋಡಿ "ಎಲೋ ಹುಡುಗ, ಏನು ಹೇಳ್ತಿದ್ದೀಯ!" ಎಂದು ಗಟ್ಟಿಯಾಗಿ ಹೇಳಿದ. ನೀನು ಹೇಳುವುದರ ಅರ್ಥ ನಿನಗಾಗಿ ನಾನು ಮಾಡಿದ ಭಾವಚಿತ್ರ ನಿನಗೆ ಹಿಡಿಸಲಿಲ್ಲವೇನು? ಎಲ್ಲಿದೆ? ಇದ್ಯಾಕೆ ಅದರ ಮುಖಕ್ಕೆ ಪರದೆ ಹಾಕಿದ್ದೀಯ? ತೆಗಿ, ನೋಡೋಣ. ನನ್ನ ಜೀವನದಲ್ಲಿ ನಾನು ಮಾಡಿದ ಅತ್ಯುತ್ತಮ ಕಲಾಕೃತಿ ಇದಾಗಿದೆ. ಆ ಪರದೆ ಕಿತ್ತೆಸೆ, ನಿನ್ನ ಸೇವಕ ಅಂಥಾ ಒಂದು ಕಲಾಕೃತಿಯನ್ನು ಹೀಗೆ ನಿರ್ಲಕ್ಷ್ಯದಿಂದ ಇರಿಸೋದು ಅವಮಾನ ಮಾಡಿದಂತೆ! ಇಲ್ಲಿಗೆ ಬರುತ್ತಿದ್ದ ಹಾಗೆ, ಏನೋ ಬದಲಾವಣೆ ಆಗಿದೆ ಅಂತ ಅನ್ನಿಸಿತ್ತು."

"ನನ್ನ ಸೇವಕನಿಗೂ ಆ ಪೈಂಟಿಂಗ್‌ಗೂ ಯಾವುದೇ ಸಂಬಂಧ ಇಲ್ಲ. ನನ್ನ ರೂಮಿನ ತಂಟೆಗೆ ಬರ್ತಾನೆ ಅಂದುಕೊಂಡಿದ್ದೀಯೇನು? ಏನಿದ್ದರೂ ಇಲ್ಲಿ ಹೂವುಗಳನ್ನು ತಂದಿರಿಸುತ್ತಾನೆ ಅಷ್ಟೆ! ನಾನೇ ಜಾಗ ಬದಲಾಯಿಸಿ ಇಟ್ಟೆ, ಭಾವಚಿತ್ರದ ಮೇಲೆ ತುಂಬ ಬೆಳಕು ಬೀಳುತ್ತಿತ್ತು." ತುಂಬಾ ಬೆಳಕು! ಏನು ಹೇಳ್ತಿದ್ದೀ? ಅದು ಇದ್ದ ಜಾಗ ಎಲ್ಲ ರೀತಿಯಿಂದಲೂ ಬಹಳ ಸೂಕ್ತವಾಗಿತ್ತು. ಎಲ್ಲಿ ನೋಡೋಣ" ಹಾಲ್‌ವಾರ್ಡ್ ಕೋಣೆಯ ಮೂಲೆ ಕಡೆಗೆ ಹೆಜ್ಜೆ ಹಾಕಿದ. ಗಾಬರಿಯಿಂದ ಕಿರುಚಿಕೊಂಡು ಓಡಿಬಂದು ಬೇಸಿಲ್ ಮತ್ತು ಭಾವಚಿತ್ರದ ಮಧ್ಯೆ ಬಂದು ನಿಂತ. "ಬೇಸಿಲ್ ನೀನು ಅದನ್ನು ನೋಡಬಾರದು ನೀನು ನೋಡುವುದು ನನಗೆ ಇಷ್ಟ ಇಲ್ಲ." "ಏನಂದೆ?" ನಾನು ಮಾಡಿದ ಕಲಾಕೃತಿಯನ್ನು ನಾನೇ ನೋಡಬಾರದೆ? ತಮಾಶೆ ಮಾಡ್ತಿಲ್ಲ ತಾನೇ? ನಾನು ಯಾಕೆ ನೋಡಬಾರದು" ದೊಡ್ಡದಾಗಿ ನಕ್ಕು ಹೇಳಿದ. "ನೀನೇನಾದರೂ ಬಲವಂತವಾಗಿ ನೋಡೋಕೆ ಪ್ರಯತ್ನ ಮಾಡಿದರೆ, ನನ್ನ ಮೇಲಾಣೆ ಇನ್ನು ಮುಂದೆ, ನಿನ್ನ ಜೊತೆ, ನಾನು ಬದುಕಿರುವವರೆಗೂ ಮಾತಾಡುವುದೇ ಇಲ್ಲ. ನಾನು ಸೀರಿಯಸ್ಸಾಗಿ ಹೇಳ್ತಾ ಇದ್ದೀನಿ. ಯಾಕೆ? ಏನು? ಅಂತ ನೀನು ಕೇಳಲೂ ಬೇಡ, ನಾನು ಹೇಳುವುದೂ ಬೇಡ. ನೆನಪಿಟ್ಟುಕೊ ನೀನೇನಾದರೂ ಈ ಪರದೆಗೆ ಕೈ ಹಾಕಿದರೆ, ನನ್ನ ನಿನ್ನ ಸಂಬಂಧ ಮುಗಿಯಿತೆಂದೇ ತಿಳಿ."

ಹಾಲ್‌ವಾರ್ಡ್‌ಗೆ ಸಿಡಿಲೆರಗಿದಂತಾಯಿತು ದಿಗ್ಭ್ರಾಂತನಾಗಿ ಅವನ ಕಡೆ ನೋಡಿದ. ಇದಕ್ಕೆ ಮೊದಲು ಎಂದೂ ಅವನನ್ನು ಹೀಗೆ ನೋಡಿರಲೇ ಇಲ್ಲ. ಆಕ್ರೋಶದ ತುಟ್ಟ ತುದಿಯಲ್ಲಿದ್ದ. ಮುಷ್ಟಿ ಬಿಗಿಹಿಡಿದಿದ್ದ. ಕಣ್ಣಲ್ಲಿ ಬೆಂಕಿ ಕಾರುತ್ತಿದ್ದ. ಅಡಿಯಿಂದ ಮುಡಿವರೆಗೆ ಕಂಪಿಸುತ್ತಿದ್ದ.

"ಡೋರಿಯನ್"

"ಮಾತಾಡಬೇಡ"

"ವಿಷಯ ಏನೂಂತ...? ನಿನಗೆ ಇಷ್ಟ ಇಲ್ಲ ಅನ್ನೋದಾದರೆ ನಾನು ನೋಡೊಲ್ಲ ಎಂದು ಕಿಟಕಿಯ ಕಡೆ ಹೆಜ್ಜೆ ಹಾಕಿದ. ಆದರೆ ಹೇಳು ನಾನು ಮಾಡಿದ್ದನ್ನು ನಾನೇ ನೋಡಬಾರದು ಅನ್ನೋದು ತೀರಾ ಅಸಂಬದ್ಧ. ಅದೂ ನಾನು ಪ್ಯಾರಿಸಿನಲ್ಲಿ ಕಲಾಪ್ರದರ್ಶನದಲ್ಲಿ

ಇಡಬೇಕೂಂತ ಯೋಚಿಸುತ್ತಿರುವಾಗ ಹೀಗೆ ಮಾಡೋದು...!? ಅಲ್ಲಿ ಕಳಿಸೋ ಮುಂಚೆ ಮತ್ತೊಮ್ಮೆ ಭಾವಚಿತ್ರಕ್ಕೆ ಬಣ್ಣಗಳ ಟಚ್‌ಅಪ್ ಕೊಡಬೇಕು. ಈಗಲ್ಲದಿದ್ದರೂ ಇನ್ನೊಂದು ದಿನವಾದರೂ ನನಗೆ ಅದು ಬೇಕೆಬೇಕು. ಹೀಗಿರುವಾಗ ಇವತ್ತೇ ಯಾಕಾಗಬಾರದು ಅಂತ ಕೇಳುತ್ತಿದ್ದೇನೆ" "ಏನು ಪ್ರದರ್ಶನ? ಪ್ರದರ್ಶನದಲ್ಲಿ ಇಡಬೇಕೇ?" ಎಂದು ಭಯಭೀತನಾದಂತೆ ಅಬ್ಬರಿಸಿ ಪ್ರಶ್ನಿಸಿದ. ಅವನ ಅಂತರಂಗದ ರಹಸ್ಯಗಳನ್ನು ಎಲ್ಲರಮುಂದೆ ಪ್ರದರ್ಶಿಸಬೇಕೆ? ಅವನ ಬದುಕಿನ ನಿಗೂಢತೆಯನ್ನು ಜನ ಕೆಕ್ಕರಿಸಿ ನೋಡಬೇಕೇ? ಇಲ್ಲ, ಸಾಧ್ಯವೇ ಇಲ್ಲ. ಏನಾದರೂ ಸದ್ಯಕ್ಕೆ ಮಾಡಲೇಬೇಕು. "ಹೌದು ಇಡಲೇ ಬೇಕು. ಅದಕ್ಕೆ ನಿನ್ನ ಅಭ್ಯಂತರ ಇರಲಾರದು. ಜಾರ್ಜ್ ಪೆಕಿತ್ ನನ್ನ ಎಲ್ಲ ಅತ್ಯುತ್ತಮವಾದ ಕಲಾಕೃತಿಗಳನ್ನು 'ರೂದೆ ಸೆಝೆ'ಯಲ್ಲಿ ವಿಶೇಷ ಪ್ರದರ್ಶನಕ್ಕಾಗಿ ಸಂಗ್ರಹಿಸುತ್ತಿದ್ದಾನೆ. ಅಕ್ಟೋಬರ್ ಮೊದಲವಾರದಲ್ಲೇ ಪ್ರದರ್ಶನ ಶುರುವಾಗುತ್ತೆ, ನಿನ್ನ ಭಾವಚಿತ್ರ ಕೇವಲ ಒಂದು ತಿಂಗಳು ಮಾತ್ರವೇ ನಿನ್ನಿಂದ ದೂರ ಇರುತ್ತೆ. ಅಷ್ಟು ಸಮಯಕ್ಕಾಗಿ ನೀನು ಅದನ್ನು ಕೊಟ್ಟರೆ ಸಾಕು. ನೀನೂ ಕೂಡಾ ಎಲ್ಲೋ ಹೋಗೋದು ಇದೇಂತ ಹೇಳಿದ್ದೆ. ಹಾಗಿರುವಾಗ ಇದನ್ನು ನೋಡಿಕೊಳ್ಳೋದು ಕಷ್ಟವಾಗಬಹುದು.

ಡೋರಿಯನ್ ಗ್ರೇ ಹಣೆಮೇಲೆ ಕೈಯಿರಿಸಿ ನೋಡಿಕೊಂಡ. ಬೆವರಿನ ಹನಿಗಳು ಅವನ ಕೈಗೆ ತಾಕಿದವು. ತಾನು ಯಾವುದೊ ಭಯಂಕರ ಅಪಾಯದಲ್ಲಿ ಸಿಲುಕಿಕೊಳ್ಳುತ್ತಿರುವ ಹಾಗೆ ಅನಿಸಿತು.

"ಒಂದು ತಿಂಗಳ ಹಿಂದೆ ನೀನು ಇದನ್ನು ಪ್ರದರ್ಶನಕ್ಕೆ ಕಳಿಸೊಲ್ಲ ಅಂತ ಹೇಳಿದೆ. ಈಗ ಯಾಕೆ ಮನಸ್ಸು ಬದಲಾಯಿಸಿದೆ. ತಮ್ಮ ನಿರ್ಧಾರಗಳಲ್ಲಿ ಗಟ್ಟಿಯಾಗಿ ಇರುತ್ತೇವೆ ಎನ್ನುವ ನಿಮ್ಮಂಥವರೂ ಬೇರೆಯವರ ಹಾಗೆ, ಬದಲಾಗ್ತಾ ಇರ್ತೀರಿ. ಆದರೆ ವ್ಯತ್ಯಾಸ ಏನೂಂದ್ರೆ ನಿಮ್ಮ ಮನಃಸ್ಥಿತಿಗಳು ಮಾತ್ರ ಅರ್ಥವಿಲ್ಲದ್ದಾಗಿರುತ್ತವೆ. ನೀನೇ ಹೇಳಿದ್ದೆ ಪ್ರಪಂಚದ ಯಾವುದೇ ಒತ್ತಡಕ್ಕೂ ಮಣಿಯದೆ ಈ ಕಲಾಕೃತಿಯನ್ನು ಪ್ರದರ್ಶಿಸುವುದಿಲ್ಲ ಎಂದಿದ್ದೆ. ಹ್ಯಾರಿಗೂ ಇದೇ ಮಾತನ್ನು ಹೇಳಿದ್ದೆ" ಎಂದು, ಒಮ್ಮೆಲೇ ಸುಮ್ಮನಾಗಿ ಬಿಟ್ಟೆ. ಅವನ ಕಣ್ಣಲ್ಲಿ ಬೆಳಕಿನ ಹೊಳಪು ಕಾಣಿಸಿತು. ಲಾರ್ಡ್ ಹೆನ್ರಿ ಹೇಳಿದ್ದ, ನಿನಗೆ ಸಾಧ್ಯ ಆಗುವುದಾದರೆ ಬೇಸಿಲ್‌ನನ್ನು, ಯಾಕೆ ಈ ಚಿತ್ರವನ್ನು ಪ್ರದರ್ಶನಕ್ಕೆ ಕಳಿಸುವುದಿಲ್ಲ ಎಂದು ಕೇಳು ಎಂದು ಹೇಳಿದ್ದ ಮಾತುಗಳು ನೆನಪಾದವು. ತಾನು ಕೇಳಿದ್ದಕ್ಕೆ ಅವನು ಕೊಟ್ಟ ಉತ್ತರದಿಂದ ತನಗೆ ಜ್ಞಾನೋದಯವಾಗಿತ್ತು. ಬಹುಶಃ ಅವನಿಗೂ ಅವನದೇ ರಹಸ್ಯಗಳಿರಬಹುದು! ಕೇಳಿ ತಿಳಿದುಕೊಳ್ಳಲು ಪ್ರಯತ್ನಿಸುತ್ತೇನೆ.

"ಬೇಸಿಲ್" ಅವನಿಗೆ ಹತ್ತಿರ ಬರುತ್ತ ನೇರವಾಗಿ ಅವನ ಮುಖ ನೋಡುತ್ತಾ "ನೋಡು ನಮ್ಮಿಬ್ಬರಲ್ಲಿಯೂ ನಮ್ಮ ನಮ್ಮನದೇ ರಹಸ್ಯಗಳಿವೆ, ಅದು ಗೊತ್ತು. ಈಗ ನೀನು ನಿನ್ನ ರಹಸ್ಯವನ್ನು ಹೇಳು, ನಾನು ನನ್ನದನ್ನು ಹೇಳುತ್ತೇನೆ? ನನ್ನ ಭಾವಚಿತ್ರವನ್ನು ಪ್ರದರ್ಶಿಸುವುದಿಲ್ಲ ಎಂದು ಯಾಕೆ ಹೇಳಿದೆ?" ಕಲಾವಿದ ಒಳಗೇ ನಡುಗಿದ. "ಡೋರಿಯನ್ ನಾನು ಹೇಳಿದರೆ, ನನ್ನ ಮೇಲಿನ ಸ್ನೇಹ ಕಡಿಮೆಯಾಗಬಹುದು, ನೀನು ನಗಲೂ ಬಹುದು ಅವೆರಡೂ ಆಗಬಾರದು ಅನ್ನೋದೇ ನನ್ನ ಉದ್ದೇಶ. ನೀನೇನಾದರೂ ನಿನ್ನ ಚಿತ್ರ ನೋಡಲೇ

ಬಾರದು ಅನ್ನೋದಾದರೆ ಬೇಡವೇ ಬೇಡ. ನಿನ್ನನ್ನೇ ಖುದ್ದಾಗಿ ನೋಡುತ್ತಿರುತ್ತೇನಲ್ಲ ಅಷ್ಟೇ ಸಾಕು. ಪ್ರಪಂಚದ ಅತ್ಯುತ್ತಮ ಕಲಾಕೃತಿ ಎನಿಸಿಕೊಳ್ಳಲಿರುವ ನಿನ್ನ ಭಾವಚಿತ್ರ ಜನರ ಕಣ್ಣಿಗೆ ಬೀಳಬಾರದು ಅನ್ನೋದಾದರೆ, ಅದೂ ಸರಿ ಎಂದುಕೊಂಡು ತೃಪ್ತನಾಗುತ್ತೇನೆ. ನನಗೆ ಸಿಗಬಹುದಾದ ಗೌರವ ಪ್ರತಿಷ್ಠೆಗಳಿಗಿಂತ ನಿನ್ನ ಸ್ನೇಹವೇ ನನಗೆ ದೊಡ್ಡದು.

"ಇಲ್ಲ ಬೇಸಿಲ್, ನೀನು ನಿಜ ಹೇಳಲೇ ಬೇಕು." ಎಂದು ಒತ್ತಾಯಿಸಿದ. "ನನಗೆ ಅದನ್ನು ತಿಳಿದುಕೊಳ್ಳುವ ಹಕ್ಕು ಇದೆ ಎಂದು ಭಾವಿಸುತ್ತೇನೆ. ಭಯದ ಸ್ಥಿತಿಯಿಂದ ದೂರವಾಗಿ, ಕುತೂಹಲ ಹೆಚ್ಚಿಸಿಕೊಂಡ. ಬೇಸಿಲ್ ಹಾಲ್‌ವಾರ್ಡ್‌ನ ರಹಸ್ಯವನ್ನು ತಿಳಿದುಕೊಳ್ಳಲೇ ಬೇಕೆಂದು ನಿರ್ಧರಿಸಿದ.

"ಕುಳಿತುಕೊಳ್ಳೋಣ ಬಾ ಡೋರಿಯನ್" ಎಂದು ಹೇಳಿದನಾದರೂ ಯಾಕೋ ಕಸಿವಿಸಿ ಅನುಭವಿಸಿದ. "ಹೇಳು. ನಿನ್ನನ್ನು ಒಂದು ಪ್ರಶ್ನೆ ಕೇಳುತ್ತೇನೆ. ಚಿತ್ರದಲ್ಲಿ ಏನಾದರೂ ವಿಚಿತ್ರವಾದ ಬದಲಾವಣೆಯನ್ನು ಗುರುತಿಸಿದೆಯೇನು? ಬಹುಶಃ ಮೊದಲಿಗೆ ಅದು ನಿನ್ನ ಕಣ್ಣಿಗೆ ಬಿದ್ದಿರಲಾರದು. ಆದರೆ ಒಮ್ಮೆಲೇ ಅದು ನಿನ್ನ ಕಣ್ಣಿಗೆ ಹೊಡೆದೆದ್ದು ಕಾಣಿಸಿರಬೇಕು."

"ಬೇಸಿಲ್" ಅಬ್ಬರಿಸಿದ ಹುಡುಗ. ಕುರ್ಚಿಯ ಎರಡೂ ಕಡೆಗಳನ್ನು ಬಿಗಿಯಾಗಿ ತನ್ನ ನಡುಗುವ ಕೈಗಳಿಂದ ಹಿಡಿದುಕೊಂಡ. ಗಾಬರಿ ಕ್ರೌರ್ಯಗಳಿಂದ ತುಂಬಿದ ಕಣ್ಣುಗಳಿಂದ ಅವನನ್ನು ನೋಡತೊಡಗಿದ.

"ನನಗೆ ಗೊತ್ತು. ನೀನು ನೋಡಿದ್ದೀಯ ಡೋರಿಯನ್. ನಾನು ಹೇಳುವ ತನಕ ಸುಮ್ಮನಿರು. ಡೋರಿಯನ್ ನಿನ್ನನ್ನು ನೋಡಿದ ಕ್ಷಣದಿಂದ ನಿನ್ನ ಪ್ರಭಾವಕ್ಕೆ ಅತಿಯಾಗಿ ಒಳಗಾಗಿದ್ದೆ. ನನ್ನಾತ್ಮ, ನನ್ನ ಬುದ್ಧಿ ಎಲ್ಲದರ ಮೇಲೆ ನಿನ್ನಧಿಕಾರ ಪ್ರಾರಂಭವಾಯಿತು. ನಮ್ಮಂಥ ಕಲಾವಿದರನ್ನು ಕನಸಿನಂತೆ ಕಾಡುವ ಯಾವುದೋ ಅದೃಶ್ಯ ಆದರ್ಶದ ನೆನಪಿನ ಸಾಕಾರ ರೂಪವಾಗಿ ನೀನು ಕಾಣಿಸಿದೆ. ನಿನ್ನನ್ನು ಆರಾಧಿಸಿದೆ. ನೀನು ಮಾತನಾಡುತ್ತಿದ್ದವರ ಬಗ್ಗೆ ನನಗೆ ಅಸೂಯೆ ಉಂಟಾಯಿತು. ನೀನು ನನಗೊಬ್ಬನಿಗೇ ಇರಬೇಕೆಂದು ಆಶಿಸಿದೆ. ನಿನ್ನ ಜೊತೆಗಿದ್ದಾಗ ಮಾತ್ರವೇ ನಾನು ಬಹಳ ಸಂತೋಷವಾಗಿ ಇರುತ್ತಿದ್ದೆ. ನನ್ನಿಂದ ನೀನು ದೂರವಿದ್ದಾಗಲೂ ನೀನು ನನ್ನ ಕಲೆಯಲ್ಲಿ ಇರುತ್ತಿದ್ದೆ... ಆದರೆ ಇದ್ಯಾವುದನ್ನೂ ನಿನಗೆ ತಿಳಿಸಿರಲಿಲ್ಲ. ಅದು ಸಾಧ್ಯವಾಗುತ್ತಲೂ ಇರಲಿಲ್ಲ. ನಿನಗೆ ಅರ್ಥವಾಗುತ್ತಲೂ ಇರಲಿಲ್ಲ. ನನಗೂ ಸರಿಯಾಗಿ ಅರ್ಥವಾಗಿರಲಿಲ್ಲ. ನನಗೆ ನಿನ್ನಲ್ಲಿ ಸಮಗ್ರತೆ ಪ್ರತ್ಯಕ್ಷವಾಗಿ ಕಾಣಿಸಿತು... ಪ್ರಪಂಚ ಒಂದು ಅದ್ಭುತ... ತುಂಬಾ ಅದ್ಭುತ ಎನಿಸಿತು... ಬಹುಶಃ ಅತಿಯಾದ ಆರಾಧನೆಯಲ್ಲಿ ಕಳೆದು ಕೊಳ್ಳುವ ಅಪಾಯ, ಮತ್ತು ಅದನ್ನು ಇರಿಸಿಕೊಳ್ಳುವುದರಲ್ಲಿನ ಅಪಾಯಕ್ಕಿಂತ ಹೆಚ್ಚೇ ಇರುತ್ತದೆ. ವಾರಗಟ್ಟಲೆ ಸರಿಯಿತು. ನಿನ್ನನ್ನು ಅತಿಯಾಗಿ ಹಚ್ಚಿಕೊಳ್ಳುತ್ತಾ ಹೋದ. ಅಷ್ಟರಲ್ಲಿ ಒಂದು ಹೊಸ ಬೆಳವಣಿಗೆಯಾಯಿತು. ನಾನು ನಿನ್ನಲ್ಲಿ ಪ್ಯಾರಿಸ್, ಅಡೋನಿಸ್‌ರನ್ನು ಅವರವರ ಅಲಂಕಾರಗಳಾದ ಹೂವಿನ ಮುಕುಟ, ಕೋಮಲವಾದ ಮೈ ಕವಚ ಮುಂತಾದವುಗಳೊಂದಿಗೆ ಕಾಣುವಂತೆ ಚಿತ್ರಿಸಿದೆ. ಆದರೆ ಒಂದು ದಿನ ಯಾಕೋ

ಇದ್ದಕ್ಕಿದ್ದಂತೆ ಯಾವುದೋ ಗತ ಕಾಲದ ವ್ಯಕ್ತಿಗಳಂತೆ ಚಿತ್ರಿಸುವುದಕ್ಕೆ ಬದಲಾಗಿ ಈಗ, ಈ ಕಾಲದಲ್ಲಿ ನೀನಿರುವಂತೆಯೇ ನಿನ್ನನ್ನು ಚಿತ್ರಿಸಬೇಕೆನಿಸಿತು. ಯಾಕೋ ಏನೋ! ವಾಸ್ತವವಾಗಿರಬೇಕೆಂತಲೋ ಇಲ್ಲ ನಿನ್ನ ವ್ಯಕ್ತಿತ್ವದಿಂದ ಆಕರ್ಷಿತನಾದುದರಿಂದಲೋ ನಿನ್ನನ್ನು ನೇರವಾಗಿ ನೀನಿದ್ದಂತೆ ಸ್ಪಷ್ಟವಾಗಿ ಭಿತ್ತಿಯ ಮೇಲೆ ಬಿಡಿಸಿದೆ. ಆದರೆ ಬಿಡಿಸುವಾಗ ಒಂದೊಂದು ಬಣ್ಣದ ಪದರವೂ ನನ್ನ ನಿಗೂಢತೆಗಳನ್ನು ನನ್ನ ಮುಂದೆ ಬಿಡಿಸಿ ತೆ ೋರುತ್ತಿದೆ ಎನಿಸಿತು. ನೋಡಿದವರು ನನ್ನನ್ನು ಮೂರ್ತಿ ಪೂಜಕ ಎಂದು ಗುರುತಿಸಿ ಬಿಡುತ್ತಾರೆಂದು ಹೆದರಿದೆ. ಡೋರಿಯನ್ ನಿನಗೆ ಹೇಳಬೇಕೆಂದುಕೊಂಡದ್ದಕ್ಕಿಂತ ಹೆಚ್ಚಾಗಿ ಹೇಳಿದೆ ಮತ್ತು ಅದರಲ್ಲಿ ನನ್ನನ್ನು ನಾನು ಅತಿಯಾಗಿ ಕಾಣಿಸಿದ್ದೇನೆ ಎನಿಸಿದ್ದರಿಂದ ನಾನು ಬಯಲಾಗುವ ಭೀತಿಯಿಂದ ಪ್ರದರ್ಶನಕ್ಕೆ ಕಳಿಸಲು ಒಪ್ಪಲಿಲ್ಲ. ನಿನಗೆ ಸ್ವಲ್ಪ ಬೇಸರವಾಯಿತು. ನನಗೆ ಅನಿಸಿರಬಹುದಾದ್ದೆಲ್ಲ ನಿನಗೆ ಅರ್ಥವಾಗಿರಲಿಲ್ಲ. ಹ್ಯಾರಿಗೆ ಇದೆಲ್ಲ ಹೇಳಿದಾಗ ಸುಮ್ಮನೆ ನಕ್ಕು ಬಿಟ್ಟಿದ್ದ ಆದರೂ ನಾನೇನೂ ಅಂದುಕೊಳ್ಳಲಿಲ್ಲ. ಚಿತ್ರ ಪೂರೈಸಿದೆ. ಅದರ ಜೊತೆ ನಾನೊಬ್ಬನೇ ಕುಳಿತಿದ್ದೆ ನಾನು ಊಹಿಸಿದ್ದೆಲ್ಲ ಸರಿ ಎನಿಸಿತು. ಆ ಮೇಲೆ ಆ ಭಾವ ಚಿತ್ರ ನನ್ನ ಸ್ಟುಡಿಯೋದಿಂದ ಹೊರಟುಹೋಯಿತು. ಅದರ ಉಪಸ್ಥಿತಿಯಿಂದ ಅನುಭವಿಸುತ್ತಿದ್ದ ಅಸಹನೀಯ ಅಕರ್ಷಣೆಯಿಂದ ಬಿಡುಗಡೆ ಸಿಕ್ಕಿತು. ಆಮೇಲೆ ಅನಿಸಿತು, ನಾನೊಬ್ಬ ಮೂರ್ಖ ಎಂದು. ಏನೇನೋ ಅದರಲ್ಲಿ ನೋಡಿದೆ ಎಂದು ಕೊಂಡದ್ದೆಲ್ಲ ಭ್ರಮೆ ಎಂದು ತಿಳಿಯಿತು. ನೀನಂತೂ ಬಹಳ ಚೆಲುವನಾಗಿ ಕಾಣುತ್ತಿದ್ದೆ. ಆಮೇಲೇನೇ ನನ್ನ ಪೈಟಿಂಗ್ ಮುಂದುವರೆಯಿತು. ಈಗಲೂ ಕೂಡಾ ಅನಿಸುತ್ತೆ, ನಮ್ಮ ಕಲಾಸೃಷ್ಟಿಯಲ್ಲಿ ಏನೆಲ್ಲಾ ಭಾವನೆಗಳನ್ನು ತರಬೇಕೊಂತ ಅಂದುಕೊಳ್ತೇವೆ, ಅದನ್ನೆಲ್ಲ ತರೋದು ಸಾಧ್ಯವೇ ಇಲ್ಲ ಅಂತ, ಆದರೆ ಅದನ್ನು ಸಾಧ್ಯ ಎಂದು ಕೊಂಡು ತಪ್ಪುಮಾಡುತ್ತೇವೆ. ನಾವು ಭಾವಿಸುವುದಕ್ಕಿಂತ ಕಲೆ ತುಂಬಾ ಅಮೂರ್ತ, ಸಂಕೀರ್ಣ ಕಲಾವಿದನನ್ನು ಅದರಲ್ಲಿ ಮೂಡಿಸುವುದಕ್ಕಿಂತ ಹೆಚ್ಚಾಗಿ ಮರೆಮಾಡುತ್ತೆ ಅಂತ ಅರಿವಾದ ಮೇಲೆ ನಿನ್ನ ಭಾವಚಿತ್ರವನ್ನು ಪ್ರದರ್ಶನಕ್ಕಿಡಬೇಕೆಂಬ ಕೋರಿಕೆ ಬಂದ ಮೇಲೆ ಮಾಡಲುತೊಡಗಿದೆ. ಆದರೆ ಪ್ರದರ್ಶನಕ್ಕಿಡುವುದನ್ನು ನೀನು ಒಪ್ಪುವುದಿಲ್ಲ ಎನ್ನುವ ಕಲ್ಪನೆ ಇರಲಿಲ್ಲ. ಈಗ ನನಗೆ ನೀನು ಮಾಡಿದ್ದು ಸರಿ ಅಂತ ತೋರುತ್ತೆ, ಚಿತ್ರವನ್ನು ಪ್ರದರ್ಶಿಸಲು ಸಾಧ್ಯವಿಲ್ಲ. ನನ್ನ ಮಾತುಗಳನ್ನು ಕೇಳಿ ನಿನಗೆ ಸಿಟ್ಟಾಗಿರಬಹುದು ಡೋರಿಯನ್. ಒಮ್ಮೆ ಹ್ಯಾರಿಗೆ ಹೇಳಿದ್ದಂತೆ, ನೀನು ಪೂಜಾರ್ಹ ವ್ಯಕ್ತಿಯೇ ಆಗಿದ್ದೀಯ. ಡೋರಿಯನ್ ಗ್ರೇ ದೀರ್ಘವಾಗಿ ಉಸಿರೆಳೆದ. ಸಾಮಾನ್ಯ ಸ್ಥಿತಿಗೆ ಬಂದ. ಮುಖದಲ್ಲಿ ಎಂದಿನಂತೆ ನಗು ಕಾಣಿಸಿತು. ಕೆಟ್ಟ ವಿಚಾರಗಳೆಲ್ಲ ಕರಗಿಹೋಗಿದ್ದವು. ಆದರೆ ಗೆಳೆಯನೊಬ್ಬ ಇಷ್ಟು ದೀನವಾಗಿ ಬೇಡಿಕೊಳ್ಳುವುದು ವಿಚಿತ್ರ ಎನಿಸಿತು. ತಾನೆಂದಾದರೂ ಯಾರಾದರೂ ಗೆಳೆಯ ಇಷ್ಟು ಗಾಢವಾದ ಪ್ರಭಾವ ಬೀರಿದ್ದರೆ, ತಾನು ಹೀಗೆ ದೈನ್ಯವಾಗಿ ಕ್ಷಮೆಯಾಚಿಸುವುದು ಸಾಧ್ಯವಿತ್ತೆ ಎಂದು ಯೋಚಿಸಿದ. ಬೇಸಿಲ್ ಮೇಲೆ ಕನಿಕರ ಮೂಡಿತು. ಹೆನ್ರಿಯಾದರೊ ತನ್ನ ಪ್ರಭಾವದ ಮೂಲಕ ಅಪಾಯಕಾರಿ ಆಗುತ್ತಾನೆ, ಅಷ್ಟೆ! ಅವನನ್ನು ತುಂಬಾ ಹಚ್ಚಿಕೊಳ್ಳೋಕೆ ಅವನು ಬಹಳ ಬುದ್ಧಿವಂತ ಮತ್ತು ಸಿನಿಕ ಯಾರಿಗಾದರೂ ಅವನನ್ನು ಮೂರ್ತಿ ಪೂಜಕನನ್ನಾಗಿ ಮಾಡಲು ಸಾಧ್ಯವೇ?

"ನಾನು ಹೇಳಿದ್ದನ್ನೆಲ್ಲ ನೀನು ಭಾವಚಿತ್ರದಲ್ಲಿ ನೋಡಬಹುದಾಗಿತ್ತು. ನೀನು ನಿಜವಾಗಿ ನೋಡಿದೆಯಾ ಹೇಗೆ?"

"ಅದರಲ್ಲೇನೋ ಕಾಣಿಸಿದ್ದುಂಟು. ಅದೇನೋ ಒಂದು ಥರ ಕುತೂಹಲಕಾರಿಯಾಗಿತ್ತು."

"ಹಾಗ್ಗಾದರೆ ಅದನ್ನು ಈಗ ಚಿತ್ರದಲ್ಲಿ, ನಿನ್ನ ಅಭ್ಯಂತರವಿಲ್ಲದಿದ್ದಲ್ಲಿ ನೋಡಬಹುದಾ ಹೇಗೆ?"

"ಬೇಸಿಲ್ ಅದನ್ನು ನೀನು ಕೇಳಲೇ ಬಾರದಾಗಿತ್ತು, ಖಂಡಿತ ಅದರ ಮುಂದೆ ನಿಂತುಕೊಳ್ಳಲು ಬಿಡುವ ಸಾಧ್ಯತೆಯೂ ಇರಲಾರದು"

"ಒಂದಿಲ್ಲ ಒಂದು ದಿನ ನೀನು ಅದನ್ನು ಸಾಧ್ಯಮಾಡ್ತೀಯ" "ಖಂಡಿತ, ಎಂದಿಗೂ ಇಲ್ಲ"

"ನೀನೇ ಸರಿ ಹಾಗಾದರೆ, ಗುಡ್ ಬೈ ಡೋರಿಯನ್. ನನ್ನ ಜೀವನದಲ್ಲಿ ನನ್ನ ಕಲೆಯ ಮೇಲೆ ಪ್ರಭಾವ ಬೀರಿದ ಏಕೈಕ ವ್ಯಕ್ತಿಯೆಂದರೆ ನೀನೊಬ್ಬನೇ. ನನ್ನಿಂದ ಒಳ್ಳೊಳ್ಳೆ ಕಲಾಕೃತಿಗಳು ಸೃಷ್ಟಿಯಾಗಿದೆಯಾದರೆ, ಅದೆಲ್ಲ ನಿನ್ನಿಂದಲೇ. ನಾನು ಅದಕ್ಕೆ ಬಹಳ ಕೃತಜ್ಞನಾಗಿದ್ದೇನೆ. ನಾನು ನಿನಗೆ ಹೇಳಿದ ಎಲ್ಲ ವಿಚಾರಗಳಿಗೆ ಎಷ್ಟು ಬೆಲೆ ತೆರಬೇಕಾಯಿತು ಗೊತ್ತೇನು?"

"ಗೆಳೆಯ ಬೇಸಿಲ್ ಅಂಥಾದ್ದು ಏನು ಹೇಳಿದೆ? ನೀನು ನನ್ನನ್ನು ತುಂಬ ಹಚ್ಚಿಕೊಂಡು ಹೊಗಳಿದ್ದೀಯ. ಅಷ್ಟೆ! ಅದು ಅಷ್ಟು ದೊಡ್ಡ ಕಾಂಪ್ಲಿಮೆಂಟೂ ಅಲ್ಲ."

"ಅದು ನಿನಗೆ ಕಾಂಪ್ಲಿಮೆಂಟ್ ಆಗಿ ಹೇಳಲಿಲ್ಲ. ಕೇವಲ ಕನ್‌ಫೆಷನ್. ಆದರೆ ಅದು ನನ್ನ ಕೈ ದಾಟಿಹೋಗಿದೆ. ಯಾರೇ ಆಗಲಿ, ಯಾರನ್ನಾದರೂ ಆರಾಧಿಸುತ್ತಿದ್ದರೆ, ಅದನ್ನು ಮಾತುಗಳಲ್ಲಿ ಹೇಳಿಕೊಳ್ಳಬಾರದು."

"ನಿನ್ನ ಕನ್‌ಫೆಷನ್ ಬಹಳ ನಿರಾಶಾದಾಯಕವಾಗಿತ್ತು."

"ಯಾಕೆ ಡೋರಿಯನ್? ಇದಕ್ಕಿಂತ ಬೇರೆಯಾಗಿ ಇನ್ನು ಯಾವರೀತಿ, ಯಾವುದನ್ನು ನಿರೀಕ್ಷಿಸಿದ್ದೆ? ಚಿತ್ರದಲ್ಲಿ ಬೇರೆಯಾಗಿ ಇನ್ನೇನನ್ನೂ ನೋಡಲಿಲ್ಲವೇ? ಅಥವಾ ನೋಡೋಕೆ ಏನೂ ಇರಲಿಲ್ಲವೇ?

"ನೋಡೋಕೆ ಇನ್ನೇನಾದರೂ ಇದ್ದರೆ ತಾನೇ? ಯಾಕೆ ಹಾಗೆ ಕೇಳ್ತಾ ಇದ್ದೀಯ! ನೀನೂ ನಾನು ಇಬ್ಬರೂ ಗೆಳೆಯರು, ಗೆಳೆಯರಾಗಿ ಕಡೆತನಕ ಉಳೀಬೇಕು."

"ನಿನಗೆ ಹ್ಯಾರಿ ಇದ್ದಾನಲ್ಲ" ಎಂದು ದುಃಖದಿಂದ ಹೇಳಿದ.

"ಓ ಹ್ಯಾರೀನಾ" ಎಂದು ಗಹಗಹಿಸಿ ನಕ್ಕ. ಅವನು ಏನೇನೋ, ಅರ್ಥ ಪರ್ಥ ಇಲ್ಲದಿರೋದನ್ನು ಮಾತಾಡ್ತಾ ದಿನ ಕಳೀತಾನೇ, ಸಂಜೆ ಹೊತ್ತು ಮಾಡಬಾರದ್ದನ್ನೆಲ್ಲ ಮಾಡ್ತಿರ್ತಾನೆ. ನಾನೂ ಅವನ ಹಾಗೇ ಜೀವನ ಕಳೀಬೇಕೂಂತ. ಆದರೆ ಕಷ್ಟದಲ್ಲಿ ಇದ್ದಾಗ ಮಾತ್ರ ಅವನ ಹತ್ತಿರ ಹೋಗಬಾರದು ಎಂದುಕೊಳ್ಳುತ್ತೇನೆ. ತಕ್ಷಣ ಹೋಗಲು ಬಯಸುವುದು ಬೇಸಿಲ್ ಬಳಿಗೆ !"

"ನನ್ನ ಚಿತ್ರಕ್ಕೆ ಮತ್ತೆ ಕೂತ್ಕೊಳ್ತೀಯ"

"ಸಾಧ್ಯವೇ ಇಲ್ಲ"

"ಡೋರಿಯನ್ ನಿನ್ನ ಈ ನಿರಾಕರಣೆಯಿಂದ ಒಬ್ಬ ಕಲಾವಿದನ ಬದುಕನ್ನು ಮುಗಿಸಿಬಿಡ್ತೀಯ. ಯಾರಿಗೂ ಎರಡು ಆದರ್ಶಗಳನ್ನು ಪಾಲಿಸುವುದು ಸಾಧ್ಯವಿಲ್ಲ. ಕೆಲವರಿಗೆ ಒಂದು ಆದರ್ಶ ಪಾಲನೆ ಮಾತ್ರ ಸಾಧ್ಯವಾಗುತ್ತದೆ."

"ನಿನಗೆ ಕಾರಣ ವಿವರಿಸಿ ತಿಳಿಸಲು ಸಾಧ್ಯವಿಲ್ಲ. ಭಾವಿಚಿತ್ರಕ್ಕೆ ಸಂಬಂಧಿಸಿದ ಹಾಗೆ ಪ್ರಾಣವೇ ಹೋಗಬಹುದಾದ ಅಪಾಯಕಾರಿ ಅಂಶಗಳಿವೆ. ಅದಕ್ಕೆ ಅದರದೆ ಬದುಕಿದೆ. ಪ್ರಾಣವಿದೆ. ನಿನ್ನ ಜೊತೆ ಟೀ ಕುಡಿಯಲು ಬರುತ್ತೇನೆ. ಅದೇ ತುಂಬಾ ಹಿತವಾಗಿರುತ್ತದೆ."

"ನಿನಗೆ ಮಾತ್ರ ಹಿತವಾಗಿರಬಹುದೇನೋ" ಸಂತಾಪದ ದನಿಯಲ್ಲಿ ಹೇಳಿದ. ಈಗ ಗುಡ್ ಬೈ. ಭಾವಚಿತ್ರ ಮತ್ತೊಮ್ಮೆ ನೋಡಲು ಅವಕಾಶ ಕೊಡಲಿಲ್ಲ. ತುಂಬಾ ಬೇಜಾರಾಗುತ್ತೆ. ಇರಲಿ ಅದಕ್ಕೇನೂ ಮಾಡಲಾಗದು. ಅದರ ಬಗ್ಗೆ ನಿನ್ನ ಭಾವನೆಗಳು ನನಗೆ ಅರ್ಥವಾಗಿದೆ. ಬೇಸಿಲ್ ಎದ್ದು ಹೊರಡುತ್ತಲೇ ಡೋರಿಯನ್ ತನ್ನೊಳಗೇ ನಕ್ಕ. ಬಡಪಾಯಿ ಬೇಸಿಲ್! ನಿಜವಾದ ಕಾರಣ ಏನೆಂದೇ ತಿಳಿಯಲಿಲ್ಲ! ನನ್ನಿಂದ ರಹಸ್ಯವನ್ನು ಕೇಳಿ ತಿಳಿದುಕೊಳ್ಳುವ ಪ್ರಯಾಸದಲ್ಲಿ ತನ್ನದೆಲ್ಲವನ್ನು ಬಯಲು ಮಾಡಿದ, ಕನ್‌ಫೆಷನ್ ಮೂಲಕ ಅವನಿಗೆ ಏನು ತಾನೆ ಅರ್ಥವಾಯಿತು. ಪೈಂಟರ್‌ನ ಅಸೂಯೆಯ ತೀವ್ರತೆ, ಹುಚ್ಚು ಆರಾಧನೆ, ಅತಿಯಾದ ಹೊಗಳಿಕೆ ಮಾತುಗಳು, ಕುತೂಹಲದ ನಿಗೂಢತೆಗಳು – ಇವೆಲ್ಲ ಈಗ ಅವನಿಗೆ ಅರ್ಥವಾಗಿದ್ದಕ್ಕೆ ತಪ್ಪೊಪ್ಪಿಕೊಂಡ. ಅವನಿಗೆ ಈ ಸ್ನೇಹದ ಬಣ್ಣದ ಮಾತುಗಳಲ್ಲಿ ಏನೋ ದುರಂತವಿದೆ ಎನಿಸಿತು.

ಒಂದು ನಿಟ್ಟುಸಿರೆಳೆದು, ಗಂಟೆ ಒತ್ತಿದ. ಭಾವಚಿತ್ರವನ್ನು ಹೇಗಾದರೂ ಅಡಗಿಸಿಡಬೇಕು. ಮತ್ತೆ ಅವನ ಕಣ್ಣಿಗೆ ಬೀಳುವಂತಾಗಬಾರದು. ಮೊದಲೇ ತಪ್ಪು ಮಾಡಿದ್ದಾಯ್ತು. ಗೆಳೆಯರು ಅವರು ಇವರು ಬಂದು ಹೋಗುವ ಈ ಕೋಣೆಯಲ್ಲಿ ಒಂದು ಗಂಟೆ ಇರಿಸವುದೂ ದೊಡ್ಡ ತಪ್ಪಾಗುತ್ತೆ.

❖

# ಅಧ್ಯಾಯ – 10

ಸೇವಕ ಬಂದು ಅವನೆಡೆಗೆ ಕಣ್ಣು ಮಿಟುಕಿಸದೆ ನೋಡಿದ. ಆ ಭಾವಚಿತ್ರದ ಪರದೆಯೊಳಗಿಂದ ಏನಾದರೂ ನೋಡಲು ಪ್ರಯತ್ನಿಸುತ್ತಿರಬಹುದೇ ಎಂದು ಅಚ್ಚರಿ ಪಡುತ್ತಿದ್ದ. ಆ ಸೇವಕ ಸುಮ್ಮನೆ ಗೊಂಬೆಯಂತೆ ನಿಂತು ಅವನ ಆದೇಶಕ್ಕಾಗಿ ಕಾಯುತ್ತಿದ್ದ. ಡೋರಿಯನ್ ಸಿಗರೇಟು ಹೊತ್ತಿಸಿದ ಗಾಜಿನ ಬಳಿಗೆ ನಡೆದು ಹೋದ. ಅದರೊಳಗಿಂದ ನೋಡಿದ. ವಿಕ್ಟರ್‌ನ ಪ್ರತಿಬಿಂಬ ನಿಚ್ಚಳವಾಗಿ ಕಾಣಿಸಿತು. ಮುಖದಲ್ಲಿ ಸೇವಕತನದ ದೈನ್ಯತೆ ಕಾಣುತ್ತಿತ್ತು. ಹೆದರುವಂಥದ್ದು ಏನೂ ಇರಲಿಲ್ಲ. ಆದರೂ ತನ್ನ ಎಚ್ಚರಿಕೆಯಲ್ಲಿ ತಾನಿರಬೇಕು ಎಂದುಕೊಂಡ.

ನಿಧಾನವಾಗಿ ವಿಕ್ಟರ್‌ಗೆ, ಕೆಲಸದ ಹೆಂಗಸನ್ನು ಕಳಿಸಿಕೊಡಲು ಹೇಳಿದ. ನಂತರ ಫ್ರೇಮುಗಳನ್ನು ಮಾಡುವವನಿಗೆ ಒಂದಿಬ್ಬರು ಕೆಲಸಗಾರರನ್ನು ಕಳಿಸಿಕೊಡಲು ಹೇಳೆಂದ. ಸೇವಕ ಅಲ್ಲಿಂದ ಹೊರಟ ಕೂಡಲೇ ಸುತ್ತಲೂ ಕಣ್ಣಾಡಿಸಿದ, ವಿಶೇಷವಾಗಿ, ಪರದೆಯಿಂದ ಮುಚ್ಚಿದ್ದ ಭಾವಚಿತ್ರ ಇದ್ದ ದಿಕ್ಕಿನಲ್ಲಿ! ಸ್ವಲ್ಪ ಹೊತ್ತಿನ ನಂತರ ವಯಸ್ಸಾದ ಹೆಂಗಸು ಲೈಬ್ರರಿಯೊಳಗೆ ಪ್ರವೇಶಿಸಿದಳು. ಸ್ಕೂಲ್ ರೂಮಿನ ಬೀಗದ ಕೈ ಕೊಡಲು ಅವಳಿಗೆ ಹೇಳಿದ. "ಆ ಹಳೇ ಸ್ಕೂಲ್ ರೂಮೇನು ಡೋರಿಯನ್? ಆದರೆ ಯಾಕೆ?" ಅಚ್ಚರಿಯಿಂದ ಉದ್ಗರಿಸಿದಳು. ರೂಮಿನ ತುಂಬ ಧೂಳು! ಆದರೆ ನಾನು ಕೂಡಲೇ ಹೋಗಿ ನೀವು ಅಲ್ಲಿಗೆ ಬರೋಕೆ ಮೊದಲೇ ಕ್ಲೀನ್ ಮಾಡಿಸಿ, ಸರಿಯಾಗಿ ಅರೇಂಜ್ ಮಾಡಿಸಿ ಇರಿಸುತ್ತೇನೆ."

"ಸರಿ ಮಾಡೋದೇನೂ ಬೇಕಿಲ್ಲ. ನನಗೆ ಕೀ ಕೊಡು ಸಾಕು"

"ಆಯ್ತು ಯಜಮಾನರೇ, ಆದರೆ ಅದರ ತುಂಬ ಧೂಳು ಜೇಡ ಬಲೆಗಳು! ನಿಮಗೆ ಒಳಗೆ ಪ್ರವೇಶ ಮಾಡೋಕೂ ಆಗೊಲ್ಲ. ಅದರ ಬಾಗಿಲು ತೆಗೆದು ಈಗಾಗಲೇ ಐದು ವರ್ಷದ ಮೇಲೆ ಆಗಿದೆ. ದೊಡ್ಡ ಯಜಮಾನರು ತೀರಿಕೊಂಡ ಮೇಲೆ ಆ ಕಡೆ ಹೋಗಿಯೇ ಇಲ್ಲ."

ತಾತನ ಪ್ರಸ್ತಾಪ ಬಂದ ಕೂಡಲೇ ಒಂದು ಥರಾ ಎನಿಸಿತು. ಅಸಹ್ಯಕರವಾದ, ದ್ವೇಷಿಸಬಹುದಾದ ನೆನಪುಗಳೇ ಅವನ ಬಗ್ಗೆ ತುಂಬಿದ್ದವು. "ಹೇಗಿದ್ದರೂ ಪರವಾಗಿಲ್ಲ. ನಾನು ಸುಮ್ಮನೆ ಅದನ್ನು ನೋಡಬೇಕು ಅಷ್ಟೆ. ಕೊಡು ಬೀಗದ ಕೈನ"

"ತೆಗೆದುಕೊಳ್ಳಿ" ಎಂದು ಹೇಳುತ್ತಾ ಬೀಗದ ಕೈ ಗೊಂಚಲನ್ನು ತೆಗೆದು, ಬೀಗದ ಕೈಗಾಗಿ ತಡಕಾಡುತ್ತಾ, ಕೊಟ್ಟೆ ಒಂದೇ ಒಂದು ನಿಮಿಷ." ಎಂದಳು "ಅಲ್ಲಿ ನಿಮಗೆ ಖಂಡಿತ ಇರೋಕೆ ಆಗುವುದಿಲ್ಲ. ಇಲ್ಲಿಯೇ ಇರೋಕೆ ನಿಮಗೆ ಅನುಕೂಲ ಇಲ್ಲವೇ?"

"ಇಲ್ಲ, ಇಲ್ಲ ಹಾಗೇನು ಇಲ್ಲ" ಎಂದು ಹೇಳುತ್ತಾ ಬೀಗದ ಕೈ ಅವಳಿಂದ ಪಡೆದು, ಧನ್ಯವಾದಗಳು ಲೀಫ್" ಎಂದು ಕೃತಜ್ಞತೆ ಹೇಳಿದ.

ಒಂದೆರಡು ನಿಮಿಷ ಯೋಚನೆ ಮಾಡಿದಳು. ಅದು ಇದೂಂತ ಮನೆಯ ವಸ್ತುಗಳ ಮೇಲೆ ಕಣ್ಣಾಡಿಸಿದಳು. ಒಂದು ನಿಟ್ಟುಸಿರು ಬಿಟ್ಟು, ಅವನು, ಅವಳಿಗೆ ಇಷ್ಟ ಬಂದಂತೆ ಮನೆಯನ್ನು ಇಟ್ಟುಕೊಳ್ಳಲು ಹೇಳಿ, ಮುಗುಳ್ನಗೆ ತಂದುಕೊಂಡ. ಬಾಗಿಲು ಮುಚ್ಚಿದ ಕೂಡಲೇ ಬೀಗದ ಕೈಯನ್ನು ಜೇಬಿನಲ್ಲಿ ಇರಿಸಿದ. ಕೋಣೆಯ ಸುತ್ತ ಕಣ್ಣಾಡಿಸಿದ ಎಂಬ್ರಾಯಿಡರಿ ಮಾಡಿದ್ದ ಸ್ಯಾಟಿನ್ ಪರದೆ ಕಣ್ಣಿಗೆ ಬಿತ್ತು. ಇದನ್ನು ಅವನ ತಾತ ವೆನಿಷಿಯಾದಿಂದ ತಂದಿದ್ದ. ಸಾಮಾನ್ಯವಾಗಿ ಇದನ್ನು ಶವದ ಪೆಟ್ಟಿಗೆ ಮೇಲೆ ಹಾಸುತ್ತಿದ್ದರು. ಈಗ ಅದು ಸಾವಿಗಿಂತ ಭಯಾನಕವಾದದ್ದನ್ನು, ಮತ್ತು ತನಗೆ ಸಾವಿಲ್ಲದಿದ್ದರೂ ಭಯಾನಕವಾದದ್ದನ್ನೆಲ್ಲ ಹುಟ್ಟುಹಾಕುತ್ತಿರುವುದನ್ನು ಮುಚ್ಚಲು ಸಹಾಯಕವಾಗುತ್ತದೆ. ಶವವನ್ನು ಒಳಗಿಂದಲೇ ಕೊರೆಯುವ ಹುಳುವಿನಂತೆಯೇ ಕಲಾವಿದನ ಪಾಪಗಳು ಅವನು ಸೃಷ್ಟಿಸುವ ಕಲಾಕೃತಿಯ ಎದೆಯಾಳದಲ್ಲಿ ಹುದುಗಿರುತ್ತವೆ. ಅದರ ಸೌಂದರ್ಯವನ್ನು, ಚಿತ್ತಾಕರ್ಷಣೆಯನ್ನು ಹಾಳು ಮಾಡಿ, ನಾಚಿಕೆಗೇಡಿಗೆ ಗುರಿಯಾಗಿಸುತ್ತದೆ. ಆದರೆ ಅದು ಮಾತ್ರ ಉಳಿಯುತ್ತದೆ, ಶಾಶ್ವತವಾಗಿ ಉಳಿಯುತ್ತದೆ.

ಒಂದು ಕ್ಷಣ ಕಂಪಿಸಿದ. ಬೇಸಿಲ್‌ಗೆ, ತನ್ನ ಭಾವಚಿತ್ರವನ್ನು ಮರೆಮಾಚಲು ನಿಜವಾದ ಕಾರಣ ಏನೆಂಬುದನ್ನು ಹೇಳದೆ ತಪ್ಪು ಮಾಡಿದೆನೆಂದು ನೊಂದುಕೊಂಡ. ಹೆನ್ರಿಯ ಪ್ರಭಾವದ ಕಪಿಮುಷ್ಟಿಯಿಂದ ಮತ್ತು ತನ್ನದೇ ಆದ ಸ್ವಯಂ ಪ್ರಚೋದನೆಗಳಿಂದ ಉಳಿಸಿಕೊಂಡಿದ್ದ ತನ್ನ ಬಗೆಗಿನ ಪ್ರೀತಿ ಅವನ ನಿಜವಾದ ಪ್ರೀತಿಯಾಗಿತ್ತು. ಕೇವಲ ದೈಹಿಕ ಸೌಂದರ್ಯದಿಂದ ಆಕರ್ಷಿತನಾಗಿ ಹುಟ್ಟುಹಾಕಿಕೊಂಡ ಪ್ರೀತಿಯಾಗಿರಲಿಲ್ಲ ಅದು. ಕೇವಲ ಹೊರ ಸೌಂದರ್ಯದ ಆಕರ್ಷಣೆಯಾಗಿದ್ದರೆ ಬೇಗ ಸಾಯುತ್ತಿತ್ತು. ಮೈಕೆಲ್ ಏಂಜಿಲೋ ಮೋಂಟೇನ್. ಷೇಕ್ಸಪಿಯರ್ ಮೊದಲಾದವರ ಅನುಭವಕ್ಕೆ ಬಂದಿದ್ದ ಪ್ರೀತಿಯ ಸ್ವರೂಪದ್ದಾಗಿತ್ತು, ತನ್ನ ಮೇಲಿನ ಬೇಸಿಲ್‌ನ ಪ್ರೀತಿ. ನಿಜವಾಗಿಯೂ ತಾನು ತಪ್ಪು ಮಾಡಿದೆ. ಆದರೆ ಈಗ ಎಲ್ಲವೂ,

ಕೈ ಮೀರಿದೆ. ಮೊದಲೇ ಆಗಿದ್ದರೆ, ಪಶ್ಚಾತ್ತಾಪ, ಜ್ಞಾನೋದಯಗಳಿಂದ ನಿವಾರಿಸಿಕೊಳ್ಳ ಬಹುದಿತ್ತು. ಆದರೆ ಅನುಭವಿಸದೆ ಗತಿಯಿಲ್ಲ ಬರುವುದನ್ನು ಸ್ವೀಕರಿಸಲೇ ಬೇಕಾದೀತು.

ಮೆಲ್ಲಗೆ ಭಾವಚಿತ್ರದ ಬಳಿಗೆ ಹೋಗಿ, ಪರದೆ ಸರಿಸಿ ಇಣುಕಿ ನೋಡಿದ. ಮೊದಲಿಗಿಂತ ಮುಖ ವಿಕಾರವಾಗಿದೆಯೇ ಎಂದು ಪರೀಕ್ಷಿಸಿದ. ನಂತರ ಯಾವುದೇ ಬದಲಾವಣೆ ಇದ್ದಂತೆ ಕಾಣುತ್ತಿಲ್ಲವೆಂದುಕೊಂಡ. ಆದರೂ ಆ ಚಿತ್ರದ ಬಗ್ಗೆ ಅಸಹ್ಯ, ಬೇಸರಗಳು ಕಡಿಮೆಯಾಗಿರಲಿಲ್ಲ. ಹೊಂಬಣ್ಣದ ಕೂದಲು, ನೀಲಿ ಕಣ್ಣು, ಗುಲಾಬಿ ಬಣ್ಣದ ತುಟಿಗಳು ಎಲ್ಲವೂ ಇದ್ದ ಹಾಗೇ ಇತ್ತು, ಆದರೆ ಮುಖಚರ್ಯೆಯಲ್ಲಿ ಭಯಾನಕ ಕ್ರೌರ್ಯ ಕಾಣಿಸುತ್ತಿತ್ತು. ಒಂದಿಷ್ಟು ನೋವು ಮುಖದಲ್ಲಿ ಕಾಣಿಸಿಕೊಂಡಿತು. ಬೆಲೆ ಬಾಳುವ ಹೊದಿಕೆಯನ್ನು ಭಾವಚಿತ್ರದ ಮೇಲೆ ಎಸೆದ, ಅಷ್ಟರಲ್ಲಿ ಬಾಗಿಲು ಬಡಿದ ಸದ್ದು ಕೇಳಿಸಿತು, ಸೇವಕ ಒಳ ಬರುತ್ತಿದ್ದಂತೆ ಅವನು ಹೊರ ನಡೆಯಲಿದ್ದ.

"ಕೆಲವರು ವ್ಯಕ್ತಿಗಳು ಬಂದಿದ್ದಾರೆ, ಯಜಮಾನರೇ ಎಂದು ಹೇಳಿದ. ಅವನನ್ನು ಆದಷ್ಟು ಬೇಗ ಅಲ್ಲಿಂದ ಹೊರಡಿಸಬೇಕು. ಚಿತ್ರ ಎಲ್ಲಿದೆ ಅಂತ ಅವನಿಗೂ ತಿಳಿಯಬಾರದು. ಪತ್ತೆದಾರಿ ಕಣ್ಣಿಂದ ನೋಡುತ್ತಿರುವಂತಿದೆ ಎನಿಸಿ, ಕೂಡಲೇ ಟೇಬಲ್ ಮುಂದೆ ಕುಳಿತು ಹೆನ್ರಿ ಹೆಸರಿಗೆ ಒಂದು ಚೀಟಿ ಬರೆದ. ಓದುವುದಕ್ಕೆ ಏನಾದರೂ ಕಳಿಸಿಕೊಡಬೇಕೆಂದೂ ತಾನು ಸಂಜೆ ಎಂಟು ಹದಿನೈದಕ್ಕೆ ಭೇಟಿಯಾಗಲು ಬರುವೆನೆಂದೂ ತಿಳಿಸಿ ಬರೆದಿದ್ದ. ಅದನ್ನು ಸೇವಕನ ಕೈಗೆ ಕೊಟ್ಟು, ಉತ್ತರ ಕೊಡುವವರೆಗೂ ಕಾದು ಬರಬೇಕೆಂದು ಆದೇಶಿಸಿದ. ಹಾಗೆಯೇ ತನ್ನನ್ನು ಕಾಣಲು ಬಂದವರನ್ನು ಒಳಗೆ ಕಳಿಸಲು ಹೇಳಿದ.

ಬಂದೊಡನೆ "ಮಿಸ್ಟರ್ ಡೋರಿಯನ್" ನನ್ನಿಂದ ಏನಾದರೂ ಸಹಾಯ ಬೇಕಿತ್ತೇ? ತುಂಬಾ ಒಳ್ಳೊಳ್ಳೆ ಫ್ರೇಮುಗಳು ಬಂದಿವೆ." ಎಂದ ಹಬ್ಬರ್ಡ್.

"ಕ್ಷಮಿಸು ಮಿಸ್ಟರ್ ಹಬ್ಬರ್ಡ್. ನಾನೇ ಬರೋಕೆ ಬದಲಾಗಿ ನಿಮ್ಮನ್ನು ಇಲ್ಲಿಗೆ ಬರುವ ಹಾಗೆ ಮಾಡಿದೆ. ಸದ್ಯಕ್ಕೆ ಫ್ರೇಮಿನ ಅಗತ್ಯ ಇಲ್ಲ. ನನ್ನ ಬಳಿ ಒಂದು ದೊಡ್ಡ ಭಾವಚಿತ್ರ ಇದೆ. ಅದನ್ನು ಸ್ವಲ್ಪ ಮಹಡಿ ಮೇಲಕ್ಕೆ ಕೊಂಡೊಯ್ಯಬೇಕಾಗಿತ್ತು. ನಿಮ್ಮ ಇಬ್ಬರು ಕೆಲಸದವರನ್ನು ಕಳಿಸಿಕೊಡಲು ಆಗುತ್ತಾ ಕೇಳೋಣಾಂತ ಹೇಳಿಕಳಿಸಿದ್ದೆ.

"ಅಡ್ಡಿಯಿಲ್ಲ ಸಾರ್. ನೀವು ಏನೇ ಆದೇಶಿಸಿದರೂ ನಾವು ಮಾಡೋಕೆ ತಯಾರಿದೀವಿ. ನಿಮಗೆ ಸಹಾಯ ಮಾಡೋದು ನಮಗೆ ಸಂತೋಷದ ವಿಷಯವೇ! ಆ ಕಲಾಕೃತಿ ಎಲ್ಲಿದೆ ಸಾರ್"

"ಇಗೋ ಇಲ್ಲೇ ಇದೆ" ಪರದೆಯನ್ನು ಸರಿಸಿದೆ ಇರುವುದನ್ನು ಇರುವ ಹಾಗೆಯೇ ಮೇಲೆ ಕೊಂಡೊಯ್ಯಲು ಸಾಧ್ಯವಾಗುವುದೇನು? ತಗೊಂಡು ಹೋಗುವಾಗ ಸ್ವಲ್ಪ ಎಚ್ಚರಿಕೆಯಿಂದ ಇರಬೇಕು. ಗೀರುಗಳು ಬೀಳಬಾರದು.

"ಸಮಸ್ಯೆಯಿಲ್ಲ ಸಾರ್" ಎಂದು ಹೇಳಿ ತನ್ನ ಜೊತೆಗಿದ್ದವನ ಸಹಾಯದಿಂದ ಸರಪಳಿಯಿಂದ ಇಳಿಬಿಟ್ಟಿದ್ದ ಭಾವಚಿತ್ರವನ್ನು ಬಿಡಿಸಿ, ಸಾರ್ ಇದನ್ನು ಎಲ್ಲಿ ಇಡ ಬೇಕು?"

"ನನ್ನ ಜೊತೆ ಬಂದರೆ ನಾನೇ ನಿಮಗೆ ಜಾಗ ತೋರಿಸ್ತೀನಿ. ಇಲ್ಲಾಂದ್ರೆ ನೀವೇ ಮುಂದೆ ಇದ್ದರೂ ಒಳ್ಳೇದು. ನಾವು ತೀರಾ ಮೇಲೆ ಹೋಗಬೇಕಾಗಿದೆ. ಮುಂದುಗಡೆಯಿಂದ ಹೋಗೋದೆ ಒಳ್ಳೇದು, ಯಾಕೆಂದರೆ ಮೆಟ್ಟಿಲುಗಳು ಅಗಲವಾಗಿವೆ. ಅವರಿಗಾಗಿ ಬಾಗಿಲು ತೆರೆದಿರಿಸಿದ. ಅವರು ಹಜಾರದ ಮೂಲಕ ಹತ್ತಲು ಆರಂಭಿಸಿದರು. ಭಾವಚಿತ್ರಕ್ಕೆ ಹಾಕಿದ್ದ ಫ್ರೇಮು ಬಹಳ ಮಜಬೂತಾಗಿ ಇದ್ದುದರಿಂದ, ತುಂಬ ಭಾರವಾಗಿತ್ತು. ಮಧ್ಯೆ ಮಧ್ಯೆ ಹಬ್ಬರ್ಡ್ ಬೇಡ ಬೇಡವೆಂದು ಹೇಳುತ್ತಿದ್ದರೂ ಡೋರಿಯನ್ ಕೈಯ್ಯಾಸರೆಯನ್ನು ಅವರಿಗೆ ಕೊಡುತ್ತಿದ್ದ.

"ಬಹಳ ತೂಕ ಇದೆ" ಎಂದು ಏದುಸಿರು ಬಿಡುತ್ತಾ ಹತ್ತಿ ಕಡೆಗೆ ತಲುಪಿದರು. ಹಬ್ಬರ್ಡ್ ಹಣೆ ಒರೆಸಿಕೊಳ್ಳುತ್ತಿದ್ದ.

"ಬಹಳ ಭಾರ ಇದೇಂತ ಕಾಣುತ್ತೆ" ಎಂದು ಹೇಳುತ್ತಾ, ಭಾವಚಿತ್ರವನ್ನು ಇಡಬೇಕಾದ ಕೋಣೆಯ ಬೀಗವನ್ನು ತೆಗೆದ. ಇಲ್ಲಿಯೇ ತನ್ನ ರಹಸ್ಯಗಳನ್ನು ಯಾರ ಕಣ್ಣಿಗೂ ಬೀಳದಂತೆ ಇಡಬೇಕಾದದ್ದು! ಎಂದು ಯೋಚಿಸಿದ. ನಾಲ್ಕು ವರ್ಷಗಳಿಂದ ಇಲ್ಲಿಗೆ ಒಮ್ಮೆಯೂ ಬಂದಿರಲಿಲ್ಲ. ಮಗುವಾಗಿದ್ದಾಗ ಇದು ಆಡುವ ಜಾಗವಾಗಿತ್ತು. ಸ್ವಲ್ಪ ದೊಡ್ಡವನಾದ ಮೇಲೆ ಓದುವ ಕೋಣೆಯಾಗಿ ಮಾರ್ಪಾಟಾಗಿತ್ತು. ಕೋಣೆ ವಿಶಾಲವಾಗಿ ತುಂಬ ಚೆನ್ನಾಗಿತ್ತು. ಅಷ್ಟಾಗಿ ಬದಲಾವಣೆಯೇನೂ ಆಗಿರಲಿಲ್ಲ. ಹಳೆಯ ನೆನಪುಗಳೆಲ್ಲ ಮರುಕಳಿಸಿದವು. ಬಾಲ್ಯದಲ್ಲಿನ ಒಂಟಿತನದ ನೆನಪುಗಳು ಸ್ಪಷ್ಟವಾಗಿ ಅವನ ಕಣ್ಣಮುಂದೆ ಸುಳಿದವು. ಅಲ್ಲಿನ ಒಂದೊಂದು ವಸ್ತುವೂ ಒಂದೊಂದು ಕಥೆ ಹೇಳುತ್ತಿದ್ದಂತೆನಿಸಿತು. ತನ್ನ ಹುಡುಗುತನದ ನೆನಪೂ ಹೊಳೆಯಿತು. ಎಂಥ ವಿಚಿತ್ರ! ತನ್ನ ನೆನಪುಗಳ ಗೂಡಿನಲ್ಲಿ ಭಯಾನಕವಾದ ಭಾವಚಿತ್ರವನ್ನು ಮರೆಮಾಡಿ ಇಡಬೇಕಾದ ಹಣೆಬರಹ ಅವನದಾಯಿತು.

ಆದರೆ ಇದಕ್ಕಿಂತ ರಹಸ್ಯವಾದ, ಸುರಕ್ಷಿತವಾದ ಸ್ಥಳ ಬೇರೆಲ್ಲೂ ಸಾಧ್ಯವಿರಲಿಲ್ಲ. ಬೀಗದ ಕೈ ತನ್ನ ಬಳಿಯೇ ಇರುವಾಗ, ಬೇರೆ ಯಾರಾದರೂ ನೋಡಿಯಾರೆಂಬ ಭೀತಿಯೂ ಇರಲಿಲ್ಲ. ನೇರಳೆ ಬಣ್ಣದ ಹೊದಿಕೆ ಅಥವಾ ಪರದೆಯ ಹಿಂದಿನ ಭಾವಚಿತ್ರದಲ್ಲಿನ ಮುಖ ಪಾಶವಿಕವೂ ಅಸಹ್ಯಕರವೂ ಆಗಿ ಬಿಡಬಹುದು. ಆದರೇನಂತೆ ಯಾರ ಕಣ್ಣಿಗೂ ಬೀಳುವ ಸಾಧ್ಯತೆ ಇಲ್ಲವಲ್ಲ! ಸ್ವತಃ ತಾನೂ ಕೂಡಾ ನೋಡುವುದಿಲ್ಲ, ಅಸಹ್ಯಕರವಾದ ವಿಕೃತ ಮುಖವನ್ನು ನೋಡುವುದಾದರೂ ಯಾಕೆ? ತನ್ನ ಯೌವ್ವನ ತನಗಿದೆ ಅಷ್ಟೇ ಸಾಕು. ತನ್ನ ಭವಿಷ್ಯ ನಾಚಿಕೆಗೇಡಾಗಲು ಯಾವ ಕಾರಣವೂ ಇರಲಾರದು. ಪ್ರೀತಿ ಎನ್ನುವುದೊಂದು ಪ್ರವೇಶಿಸಿ ಪವಿತ್ರಗೊಳಿಸಬಹುದು. ತನ್ನ ಪಾಪಗಳಿಂದ ರಕ್ಷಿಸಬಹುದು, ಒಂದಲ್ಲ ಒಂದು ದಿನ ಕಲ್ಪನೆಗೂ ಸಿಗದ ಪಾಪಗಳು ಕರಗಿ ಹೋಗಿ ವಿಕಾರವೂ ಮರೆಯಾಗಿ, ತಾನು ಬೇಸಿಲ್‌ನ ಮಾಸ್ಟರ್ ಪೀಸನ್ನು ಜಗತ್ತಿಗೆ ತೋರಿಸಲು ಸಾಧ್ಯವಾಗಬಹುದು.

ಇಲ್ಲ. ಅದು ಸಾಧ್ಯವೇ ಇಲ್ಲ. ಒಂದೊಂದು ಗಂಟೆಗೂ ಒಂದೊಂದು ವಾರಕ್ಕೂ ಕ್ಯಾನ್‌ವಾಸ್ ಮೇಲಿನ ಚಿತ್ರಕ್ಕೆ ವಯಸ್ಸಾಗುತ್ತಿದೆ. ಪಾಪಗಳಿಂದ ಮುಕ್ತವಾಗ ಬಹುದಾದರೂ ಮುಪ್ಪಿನಿಂದ ಬಿಡುಗಡೆ ಸಾಧ್ಯವಾಗುವುದಿಲ್ಲ. ಕೆನ್ನೆಗಳಲ್ಲಿ ಗುಳಿ, ಉದುರುವ ಕೂದಲು, ಬೊಚ್ಚುಬಾಯಿ, ಸುಕ್ಕುಗಟ್ಟುವ ಕೈ ಕಾಲುಗುಳು, ನರಗಳೆದ್ದು ಕಾಣುವ ಹಸ್ತಗಳು, ಇವುಗಳಿಂದ

ತಪ್ಪಿಸಿಕೊಳ್ಳಲು ಸಾಧ್ಯವಾಗುವುದಾದರೂ ಹೇಗೆ? ಇದನ್ನೆಲ್ಲ ತನ್ನ ಅಜ್ಜನಲ್ಲಿ ಕಂಡಿದ್ದ. ಆದ್ದರಿಂದ ಇದನ್ನು ಯಾರ ಕಣ್ಣಿಗೂ ಬೀಳದ ರೀತಿಯಲ್ಲಿ ಅಡಗಿಸಿ ಇಡಬೇಕು. ಅದರ ಹೊರತು ಬೇರೆ ದಾರಿಯೇ ಇಲ್ಲ.

"ಹಬ್ಬಾರ್ಡ್, ಇಲ್ಲಿಗೆ ತನ್ನಿ. ನಿಮ್ಮನ್ನು ತುಂಬ ಹೊತ್ತು ಕಾಯಿಸಿ ಬಿಟ್ಟೆ. ಏನೋ ಯೋಚನೆಯಲ್ಲಿ ಮುಳುಗಿಹೋಗಿದ್ದೆ."

"ಸ್ವಲ್ಪ ವಿಶ್ರಾಂತಿ ಸಿಕ್ಕಿದರೆ, ನಮಗೂ ಸಂತೋಷವೇ ಮಿಸ್ಟರ್ ಗ್ರೇ," ಏದುಸಿರುಬಿಡುತ್ತಲೇ ಉತ್ತರಿಸಿದ. ಎಲ್ಲಿ ಇಡೋಣ ಸಾರ್?"

"ಎಲ್ಲಾದರೂ ಸರಿ. ಇಲ್ಲಿ, ಇಲ್ಲಿ ಈ ಜಾಗದಲ್ಲಿ ಸರಿ ಎನಿಸುತ್ತೆ, ಗೋಡೆಗೆ ಒರಗಿಸಿ ಇಟ್ಟು ಬಿಡಿ. ಧನ್ಯವಾದಗಳು."

"ಸಾರ್, ಇದನ್ನು ನಾವು ನೋಡಬಹುದೇ?" ಡೋರಿಯನ್ ಬೆಚ್ಚಿಬಿದ್ದ. ಅದೇನೂ ನಿಮಗೆ ಹಿಡಿಸೋದಿಲ್ಲ ಹಬ್ಬರ್ಡ್" ಎಂದು ಆ ವ್ಯಕ್ತಿಯನ್ನು ನೋಡಿದ. ಅವನೇನಾದರೂ ಆ ಚಿತ್ರ ನೋಡಲು ಪ್ರಯತ್ನಿಸಿದ್ದರೆ, ಅವನನ್ನು ಎತ್ತಿ ಒಗೆದುಬಿಡಬೇಕು ಎಂದುಕೊಂಡ. "ಇನ್ನಷ್ಟು ನಿಮಗೆ ತೊಂದರೆ ಕೊಡೋದಿಲ್ಲ. ಇಲ್ಲಿಗೆ ಬರುವಂತೆ ಮಾಡಿ ತೊಂದರೆ ಕೊಟ್ಟೆ ನಿಮಗೆ ನನ್ನ ಕೃತಜ್ಞತೆಗಳು."

"ಅಯ್ಯಯ್ಯೋ, ಅದೇನು ದೊಡ್ಡದಲ್ಲ ಬಿಡಿ. ನಿಮಗಾಗಿ ಯಾವ ಹೊತ್ತಲ್ಲಾದರೂ ಸರಿ, ಏನಾದರೂ ಸರಿ. ನಾವು ಮಾಡುವುದಕ್ಕೆ ರೆಡಿಯಾಗಿದ್ದೀವಿ ಸರ್" ಹಬ್ಬರ್ಡ್ ತನ್ನ ಸಹಾಯಕನೊಂದಿಗೆ ಮೆಟ್ಟಿಲಿಳಿಯತೊಡಗಿದ. ಆ ಸಹಾಯಕ ಒಮ್ಮೆ ಡೋರಿಯನ್ ಕಡೆಗೆ ಕುತೂಹಲದಿಂದ ತಿರುಗಿ ಕಣ್ಣಾಡಿಸಿದ, ಅಬ್ಬ! ಎಷ್ಟು ಮೋಹಕವಾಗಿದ್ದಾನೆ! ಎಂದುಕೊಂಡ. ತನ್ನ ಬದುಕಿನಲ್ಲಿ ಇದೇ ಮೊದಲಬಾರಿಗೆ ಇಷ್ಟೊಂದು ಸುಂದರ ಯುವಕನನ್ನು ನೋಡುತ್ತಿದ್ದ.

ಅವರಿಬ್ಬರ ಹೆಜ್ಜೆ ಸದ್ದು ಕ್ಷೀಣವಾದಂತೆ ಡೋರಿಯನ್ ಬಾಗಿಲು ಹಾಕಿ, ಬೀಗ ಜಡಿದು ಬೀಗದ ಕೈಯನ್ನು ಜೇಬಿನಲ್ಲಿ ಇರಿಸಿಕೊಂಡ. ಅವನಿಗೆ ಈಗ ಸುರಕ್ಷಿತ ಎನಿಸಿತು. ಇನ್ನು ಯಾರೂ ಇಷ್ಟು ಭಯಂಕರ ವಿಕಾರದ ಚಿತ್ರವನ್ನು ನೋಡುವುದಿಲ್ಲ. ಅವನನ್ನು ಹೊರತುಪಡಿಸಿ ನಾಚಿಕೆಗೇಡಿತನ ಯಾರ ಕಣ್ಣಿಗೂ ಬೀಳುವುದಿಲ್ಲ.

ತನ್ನ ಲೈಬ್ರರಿಗೆ ಹೋದಮೇಲೆ ಐದು ಗಂಟೆ ದಾಟಿದ್ದು ಗಮನಕ್ಕೆ ಬಂತು. ಅವನಿಗಾಗಿ ಚಹ ಕೂಡಾ ಅವನ ಸೇವಕ ತಂದಿರಿಸಿದ್ದ, ಚಹದ ಟ್ರೇನಲ್ಲಿ, ಸೈಂಟ್ ಜೇಮ್ಸ್‌ನ ಗೆಜೆಟ್‌ನ ಮೂರನೇ ಆವೃತ್ತಿಯನ್ನೂ ಇರಿಸಿದ್ದ. ತನ್ನ ಕೆಲಸಮುಗಿಸಿ ಸೇವಕ ವಿಕ್ಟರ್ ಅಲ್ಲಿಂದ ಹೊರಟುಬಿಟ್ಟಿದ್ದ. ಯಾರೂ ತನ್ನನ್ನು ನೋಡುತ್ತಿಲ್ಲವೆಂದು ಖಾತರಿ ಪಡಿಸಿಕೊಂಡು ಗೋಡೆಯ ಕಡೆಗೆ ನೋಡಿದ. ಖಾಲಿ! ಖಾಲಿ! ಅವನಿಗೆ, ತಾನೇ ಒಂದು ದಿನ ರಾತ್ರಿ ಯಾರ ಕಣ್ಣಿಗೂ ಬೀಳದಂತೆ, ಮೇಲೆ ಹೋಗಿ ಬಾಗಿಲನ್ನು ಬಲವಂತದಿಂದ ತೆರೆದು ಆ ಚಿತ್ರವನ್ನು ತಂದು ಇಟ್ಟುಬಿಡುತ್ತೇನೇನೋ ಎನಿಸಿತು.

ಒಂದು ನಿಟ್ಟುಸಿರುಬಿಟ್ಟು. ಬಟ್ಟಲಿಗೆ ಚಹ ಬಗ್ಗಿಸಿಕೊಂಡ. ಹೆನ್ರಿ ಕಳಿಸಿಕೊಟ್ಟಿದ್ದ ಪತ್ರವನ್ನು ಬಿಡಿಸಿದ. ಅದರಲ್ಲಿ ವಿಶೇಷವಾಗಿ ಏನೂ ಇರಲಿಲ್ಲ. ಸುಮ್ಮನೆ ಸಮಯ ಕಳೆಯಲೆಂದು ಆ ಪುಸ್ತಕವನ್ನು ಕಳಿಸಿರುವುದಾಗಿಯೂ, ಸರಿಯಾಗಿ 8–15 ಕ್ಕೆ ಅವನು ಕ್ಲಬ್ಬಿನ ಬಳಿ ಇರುವನೆಂದು ಭಾವಿಸಿರುವುದಾಗಿ ತಿಳಿಸಿದ್ದ. ಪುಸ್ತಕದ ಜೊತೆಗೆ ಇರಿಸಿದ್ದ ಸಂಜೆ ಸುದ್ದಿ ಪತ್ರಿಕೆಯಲ್ಲಿ ಸಿಬಿಲ್‌ವೇನ್‌ಳ ದುರಂತ ಸಾವಿನ ಬಗ್ಗೆ ಬರೆಯಲಾಗಿತ್ತು. ಆಕೆಯ ನಟನೆ, ಸೌಂದರ್ಯಗಳ ಬಗ್ಗೆ ಮೆಚ್ಚುಗೆ ಮತ್ತು ಸಾವಿಗೆ ವಿಷಾದವನ್ನು ಸೂಚಿಸಲಾಗಿತ್ತು.

ಅವನು ಸಿಟ್ಟಿನಿಂದ ಅದನ್ನು ಓದಿದ ಕೂಡಲೇ ಪತ್ರಿಕೆಯನ್ನು ಚೂರು ಚೂರಾಗಿ ಹರಿದು ಬಿಸಾಡಿದ. ಇಂಥ ದರಿದ್ರದ್ದೆಲ್ಲ ಕಳಿಸಬೇಕಾದ ಅಗತ್ಯ ಏನಿತ್ತು ಎಂದು ಹೆನ್ರಿಯ ಮೇಲೆ ಆಕ್ರೋಶಗೊಂಡ. ಸಾಲದ್ದಕ್ಕೆ ಕಣ್ಣಿಗೆ ಇನ್ನಷ್ಟು ಎದ್ದು ಕಾಣುವಂತೆ ಕೆಂಪುಗೆರೆಗಳನ್ನು ಬೇರೆ ಎಳೆದಿದ್ದಾನೆ. ವಿಕ್ಟರ್ ಕೂಡಾ ಅದನ್ನೇನಾದರೂ ಓದಿಬಿಟ್ಟಿದ್ದರೆ!?

ಸರಿ ಓದಿದರೆ ಓದಲಿ. ಬೇಕಾದರೆ ನನ್ನನ್ನು ಅನುಮಾನದಿಂದ ಕೂಡಾ ನೋಡಲಿ ಏನಾಗುತ್ತೆ? ಸಿಬಿಲ್‌ವೇನ್ ಜೊತೆ ಡೋರಿಯನ್ ಗ್ರೇಗೆ ಏನು ಕೆಲಸ. ಅವಳ ಸಾವಿಗೂ ಅವನಿಗೂ ಏನು ಸಂಬಂಧ? ಹೆದರಬೇಕಾದ್ದೇನೂ ಇಲ್ಲ. ಡೋರಿಯನ್ ಮಾತ್ರ ಅವಳ ಕೊಲೆ ಮಾಡಿಲ್ಲ. ಇದ್ದಕ್ಕಿದ್ದಂತೆ ಹೆನ್ರಿ ಕಳಿಸಿದ್ದ, ಹಳದಿ ಬೈಂಡಿನ ಪುಸ್ತಕದ ಮೇಲೆ ಕಣ್ಣುಬಿತ್ತು. ಅದನ್ನೆತ್ತಿ ಅತ್ತಿತ್ತ ತಿರುಗಿಸಿ ನೋಡಿದ. ಅದೊಂದು ಕಾದಂಬರಿಯಾಗಿತ್ತು. ಅದರಲ್ಲಿ ಬಂದಿದ್ದು ಒಂದೇ ಒಂದು ಪಾತ್ರ. ಒಬ್ಬ ಯುವಕ, ಎಲ್ಲ ಕಾಲದ, ಎಲ್ಲ ಜನರ ಭಾವನೆಗಳ, ವಿಚಾರಗಳ ಮನೋವೈಜ್ಞಾನಿಕ ಅಧ್ಯಯನ ಮಾಡಲು ಪ್ರಯತ್ನಿಸುತ್ತಿದ್ದುದರ ಕತೆಯಾಗಿತ್ತು. ವಿಚಿತ್ರವಾದ ಮಾತುಗಳಲ್ಲಿ, ನಿಗೂಢ ಪ್ರತೀಕಗಳಲ್ಲಿ ಅತೀಂದ್ರಿಯ ಅನುಭವಗಳನ್ನು ವಿವರಿಸಲಾಗಿತ್ತು. ಅವನಿಗೆ ಅದು ಹೊರೆಯಾಗಿ ಭಾಸವಾಯಿತು. ಇನ್ನು ಸಾಕೆನಿಸಿ ಹೆನ್ರಿ ಸೂಚಿಸಿದ್ದ ವೇಳೆಯ ನೆನಪಾಯಿತು. ದಿಢೀರನೆ ಎದ್ದು ಪಕ್ಕದ ಕೋಣೆಗೆ ಹೋದ. ಡಿನ್ನರ್‌ಗೆ ಹೋಗಲು ಬೇಕಾದ ಬಟ್ಟೆ ಹಾಕಿಕೊಂಡ. ಎಷ್ಟು ಸಮಯಕ್ಕೆ ಸರಿಯಾಗಿ ಇರಬೇಕೆಂದು ಕೊಂಡರೂ ಒಂಬತ್ತು ಗಂಟೆಗೆ ಮುಂಚೆ ಅವನಿಗೆ ಹೆನ್ರಿ ಇದ್ದ ಕಡೆಗೆ ಹೋಗಲಾಗಲಿಲ್ಲ.

"ಸಾರಿ ಹ್ಯಾರಿ" ನಿಜವಾಗಿಯೂ ಸಾರಿ ಹೇಳುತ್ತಿದ್ದೇನೆ. ನೀನು ಕಳಿಸಿದ್ದ ಪುಸ್ತಕದಲ್ಲಿ ಮೈಮರೆತದ್ದರಿಂದ ತಡವಾಯಿತು.

"ನನಗೆ ಗೊತ್ತು ನಿನಗೆ ಇಷ್ಟವಾಗುತ್ತೇಂತ" ನನಗೆ ಇಷ್ಟ ಆಯ್ತು ಅಂತ ಹೇಳಲಿಲ್ಲವಲ್ಲ? ನನ್ನನ್ನು ಹಿಡಿದಿಟ್ಟಿತು ಅಂದೆ ಅಷ್ಟೆ! ಎರಡೂ ಮಾತುಗಳು ಬೇರೆ ಬೇರೆ? ಪರವಾಗಿಲ್ಲ ವ್ಯತ್ಯಾಸ ಕಂಡುಕೊಂಡುಬಿಟ್ಟೆ – ಎಂದು ಹೆನ್ರಿ ಹೇಳುತ್ತಿದ್ದಂತೆ ಇಬ್ಬರೂ ಎದ್ದು ಊಟಕ್ಕೆ ಮೀಸಲಿದ್ದ ಜಾಗಕ್ಕೆ ಹೋದರು.

❖

# ಅಧ್ಯಾಯ – 11

ಹೆನ್ರಿ ಕಳಿಸಿದ್ದ ಕಾದಂಬರಿಯ ನಾಯಕ ಪ್ಯಾರಿಸಿನ ಯುವಕನ ಕತೆಯ ಪ್ರಭಾವದ ಕಪಿಮುಷ್ಟಿಯಿಂದ ಅವನಿಗೆ, ವರ್ಷಗಳೇ ಕಳೆದರೂ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಮತ್ತೆ ಪ್ಯಾರಿಸಿನಿಂದ ಹೆಚ್ಚಿನ ಪ್ರತಿಗಳನ್ನು ತರಿಸಿಕೊಂಡ. ಕಥಾನಾಯಕನಾಗಿದ್ದ ಆ ಪ್ಯಾರಿಸಿನ ಯುವಕ ತನ್ನಲ್ಲಿ ರಮ್ಯ, ವೈಚಾರಿಕ, ವೈಜ್ಞಾನಿಕ ಮನೋಧರ್ಮಗಳನ್ನು ಹೇಗೆ ಮಿಳಿತಗೊಳಿಸಿಕೊಂಡಿದ್ದನೆಂದರೆ, ತನ್ನನ್ನೇ ತಾನು ಆ ಪಾತ್ರದಲ್ಲಿ ಕಲ್ಪಿಸಿಕೊಂಡ. ಅವನಿಗೆ ಅದು ತನ್ನದೇ ಕತೆ ಎಂದು ಭಾಸವಾಯಿತು.

ಒಂದು ವಿಷಯದಲ್ಲಿ ತಾನು ಮಾತ್ರ ಕಥಾನಾಯಕನಿಗಿಂತ ಅದೃಷ್ಟವಂತ. ಆ ಪ್ಯಾರಿಸ್ ಯುವಕನಿಗೆ ಬಹಳ ಸಣ್ಣ ಪ್ರಾಯದಲ್ಲಿಯೇ ಎದುರಾದ ಕನ್ನಡಿಗಳು, ಪ್ರಶಾಂತವಾದ ನೀರಿನ ಪದರ, ಹೊಳಪಿನ ಲೋಹದ ಹಾಳೆಗಳು ಮುಂತಾಗಿ ತನಗೆ ಪರಿಚಯವೇ ಇಲ್ಲವಾಗಿತ್ತು. ಆಗುವ ಅವಕಾಶವೂ ಇರಲಿಲ್ಲ.

ಒಂದು ಕಾಲಕ್ಕೆ ಅವನಿಗಿದ್ದ ಅದ್ಭುತ ಸೌಂದರ್ಯ ಆಕಸ್ಮಿಕವಾಗಿ ಆವರಿಸಿಕೊಂಡ ಮುಪ್ಪಿನಿಂದ, ಪೂರ್ತಿಯಾಗಿ ನಾಶವಾಯಿತು. ಬಹುಶಃ ಪ್ರತಿಯೊಂದು ಸಂತೋಷದಲ್ಲಿ ಸೌಂದರ್ಯದಲ್ಲಿ ಅನಿವಾರ್ಯವಾಗಿ ಒಂದು ಭಯಂಕರ ಕ್ರೌರ್ಯ ಅಡಗಿರುತ್ತದೆ ಎಂದೆನಿಸುತ್ತದೆ. ಪುಸ್ತಕದ ಕಡೆಯ ಭಾಗದಲ್ಲಿ, ತಾನು ಮತ್ತು ಪ್ರಪಂಚದಲ್ಲಿ ಉಳಿದವರೂ ಕಳೆದುಕೊಂಡದ್ದನ್ನು ಅತಿಯಾಗಿ ಪ್ರೀತಿಸುತ್ತಿದ್ದುದರಿಂದ ಅನುಭವಿಸಿದ ನೋವು ಯಾತನೆಗಳನ್ನು ಚಿತ್ರಿಸಲಾಗಿತ್ತು. ಅವನ ಅದ್ಭುತ ಸೌಂದರ್ಯ ಬೇಸಿಲ್‌ನನ್ನು ಮತ್ತು ಇತರರನ್ನು ಆಕರ್ಷಿಸಿದ್ದ ರೀತಿ, ಎಂದಿಗೂ ಅವನ ಬೆನ್ನು ಹತ್ತಿತ್ತು. ಅವನ ಸೌಂದರ್ಯದ

ಚರ್ಚೆ ಲಂಡನ್ನಿನ ಸಮಾಜ ಸಾರ್ವಜನಿಕ ಸ್ಥಳಗಳಲ್ಲಿ ಚರ್ಚೆಗೆ ಗ್ರಾಸವಾಗಿತ್ತು. ಜನ ಮಂತ್ರಮುಗ್ಧರಾಗಿದ್ದರು. ಅವನ ಸೌಂದರ್ಯದ ಪ್ರಭಾವ ಎಷ್ಟು ಪ್ರಬಲವಾಗಿತ್ತೆಂದರೆ, ಅವನ ಬಗ್ಗೆ ಯಾವುದೇ ಅಗೌರವದ ಮಾತುಗಳನ್ನು ಕೇಳುವುದಕ್ಕೆ ಸಿದ್ಧವಾಗಿರಲಿಲ್ಲ ಜನ. ಅವನೂ ಕೂಡಾ ಬಹಳ ಸಾಚಾ ಮತ್ತು ಸಜ್ಜನನಂತೆ ಕಾಣಿಸಿಕೊಳ್ಳುತ್ತಿದ್ದ. ಅವನು ಕ್ಲಬ್ಬಿನೊಳಗೆ ಪ್ರವೇಶಿಸುತ್ತಿದ್ದಂತೆ ಅವನ ಬಗ್ಗೆ ಅದೂ ಇದೂ ಮಾತಾಡುತ್ತಿದ್ದವರೆಲ್ಲ ಸುಮ್ಮನಾಗುತ್ತಿದ್ದರು. ಆದರೆ ಈಗ ಅವನಿಗೆ ಕಲಂಕ ಹತ್ತಿತ್ತು. ಜನಕ್ಕೆ ನಂಬಲು ಸಾಧ್ಯವಾಗಿರಲಿಲ್ಲ. ಹಿಂದೆ ಕಂಡ ಮುಗ್ಧತೆ, ಸಜ್ಜನಿಕೆಗಳು ನೆನಪಾದವು. ಇಷ್ಟು ಮೋಹಕ, ಆಕರ್ಷಕ ಹುಡುಗ ಆ ಕಾಲದ ಪ್ರಚಲಿತ ಭೋಗ ವಿಲಾಸಗಳಿಂದ ಕಳಂಕಿತನಾದ ಜೀವನ ಶೈಲಿಯಿಂದ ದೂರವಿರಲು ಹೇಗೆ ಸಾಧ್ಯವಾಯಿತು? ಎಂದೆಲ್ಲ ಯೋಚಿಸುತ್ತಿದ್ದರು.

ಮನೆಗೆ ಹಿಂತಿರುಗಿದ ಮೇಲೆ ಆಗಾಗ ತನ್ನ ಗೆಳೆಯರು, ಜನರು ವರ್ತಿಸುತ್ತಿದ್ದ ವಿಚಿತ್ರ ರೀತಿಯನ್ನು ಗಮನಿಸಿ, ಮತ್ತೊಮ್ಮೆ ಅವನಿಗೆ ತನ್ನ ಭಾವಚಿತ್ರವನ್ನು ನೋಡಬೇಕೆನಿಸಿತು. ಕಳ್ಳ ಹೆಜ್ಜೆಗಳಲ್ಲಿ ಮೆಲ್ಲಗೆ ಮೆಟ್ಟಿಲೇರಿ, ಬೇಸಿಲ್ ಹಾಲ್‌ವಾರ್ಡ್ ಸೃಷ್ಟಿಸಿದ್ದ ತನ್ನ ಆ ಭಾವಚಿತ್ರವನ್ನು ಕನ್ನಡಿಯಲ್ಲಿ ನೋಡಿದ. ಕನ್ನಡಿಯ ಬಿಂಬ ತನ್ನನ್ನು ನೋಡಿ ನಗುತ್ತಿರುವಂತೆನಿಸಿತು. ತನ್ನ ಸೌಂದರ್ಯದ ಬಗ್ಗೆ ತಾನೇ ಮುಗ್ಧನಾಗುತ್ತಾ, ತನ್ನಾತ್ಮದ ಪಾಪಗಳ ಬಗ್ಗೆಯೂ ಕುತೂಹಲಿಯಾಗುತ್ತಿದ್ದ, ತುಂಬಾ ಸೂಕ್ಷ್ಮವಾಗಿ ನೋಡುತ್ತಿದ್ದ. ವಿಕಟ, ವಿಕೃತ, ಅಸಹ್ಯದ ಗೆರೆಗಳಿಂದ ಕೂಡಿದ ಸುಕ್ಕುಗಳಿಂದ ಕೂಡಿದ್ದ ಆ ಮುಖವನ್ನು ವಿಘ್ನ ಸಂತೋಷಿಯಾಗಿ ಗಮನಿಸುತ್ತಿದ್ದ. ಅದರಲ್ಲಿನ ಆ ವಿಕೃತ ರೂಪವನ್ನು ಗೇಲಿ ಮಾಡುತ್ತಿದ್ದ.

ಅನೇಕ ಬಾರಿ, ನಿದ್ದೆ ಹೋಗುವ ಸಮಯದಲ್ಲಿ ನಿದ್ದೆ ಬಾರದೆ ತನ್ನ ಭ್ರಷ್ಟವಾದ ಚಾರಿತ್ರ್ಯದ ಬಗ್ಗೆ, ತಾನು ಮಾಡಿದ ಭಯಂಕರ ಅಪರಾಧದ ಬಗ್ಗೆ ಆತ್ಮವಿನಾಶದ ಬಗ್ಗೆ ಯೋಚಿಸುತ್ತಾ, ನಿದ್ದೆಯೇ ಬಾರದ ರಾತ್ರಿಗಳನ್ನು ಕಳೆದಿದ್ದ, ಜೀವನದ ಬಗ್ಗೆ ಲಾರ್ಡ್ ಹೆನ್ರಿ ಅವನ ಮನಸ್ಸಿನಲ್ಲಿ ಹುಟ್ಟುಹಾಕಿದ ಆಸಕ್ತಿ, ನೀಡಿದ ಪ್ರಚೋದನೆಗಳು ನಿರಂತರವಾಗಿ ಅವನಲ್ಲಿ ಒಂದು ಬಗೆಯ ಹಸಿವನ್ನು ಮೂಡಿಸಿತು.

ಆದರೂ ಅತಿರೇಕದ ಮಟ್ಟಕ್ಕೆ ತಲುಪಿರಲಿಲ್ಲ. ತನ್ನ ಅಂದವಾದ ಬಂಗಲೆಯನ್ನು ಜನಕ್ಕಾಗಿ ತೆರೆದಿರಿಸಿದ. ಸಂಗೀತ ಸಭೆಗಳನ್ನು ನಡೆಸುತ್ತಿದ್ದ ಜನರನ್ನು ಆಹ್ವಾನಿಸಿ ಅವರ ಜೊತೆ ಸಂತೋಷದ ಕ್ಷಣಗಳನ್ನು ಕಳೆಯುತ್ತಿದ್ದ. ಅವರೆಲ್ಲ ತನ್ನ ಸೌಂದರ್ಯವನ್ನು ಮೆಚ್ಚಿ ಹೊಗಳುವುದರ ಆನಂದವನ್ನು ಒಳಗೊಳಗೇ ಮಿತಿಮೀರಿ ಆನಂದಿಸುತ್ತಿದ್ದ. ಅಲ್ಲಿ ನೆರೆದಿದ್ದವರಿಗೆ, ಸೌಂದರ್ಯವನ್ನು ಆರಾಧಿಸಿ ತಮ್ಮನ್ನು ತಿದ್ದಿಕೊಳ್ಳುವುದಕ್ಕೆ ಮಾದರಿ ಎಂದು ಭಾವಿಸುವಂತೆ ತೋರುತ್ತಿದ್ದ.

ಈ ಎಲ್ಲಾ ಹಿನ್ನೆಲೆಯಲ್ಲಿ, ತಾನು ಲಂಡನ್ ಸಮಾಜದಲ್ಲಿ ಮತ್ತಷ್ಟು ಪ್ರತಿಷ್ಠೆಯ ಎತ್ತರಕ್ಕೆ ಏರಬೇಕೆಂದು ಹಾತೊರೆಯುತ್ತಿದ್ದ. ಡೋರಿಯನ್ ಗ್ರೇಗೆ ಇಂದ್ರಿಯಗಳನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೇನೋ ಎನಿಸಿತು. ಇಂದ್ರಿಯಗಳ ಸುಖವನ್ನು ಹತ್ತಿಕ್ಕಿ ನೋವನ್ನು ಅನುಭವಿಸುವುದಕ್ಕಿಂತ ಅದರ ಜೊತೆಗೆ ಅಧ್ಯಾತ್ಮವನ್ನು ಬೆರೆಸುವುದರ ಬಗ್ಗೆ ಜನ

ಯೋಚಿಸುವುದಿಲ್ಲವೇಕೆ ಎಂದುಕೊಂಡ.

ಅವನಿಗೆ ಹೊಸ ಅನುಭವಗಳ ಅಗತ್ಯ ಬೇಕಿತ್ತು. ಹೊಸ ಹೊಸ ಜೀವನಶೈಲಿಗಳ ಬಗ್ಗೆ ಯೋಚಿಸುತ್ತಿದ್ದ. ಅವೆಲ್ಲ ಅವನಿಗೆ ಅಪರಿಚಿತವಾದುದೇ ಆಗಿದ್ದವು. ಅನುಭವಿಸಿದ ನಂತರ ರಮ್ಯ, ರೋಚಕತೆಗಳನ್ನು ಮರೆತುಬಿಡುತ್ತಿದ್ದ. ಅವನ ನಡವಳಿಕೆಯೇ ನೋಡುವವರಿಗೆ ವಿಚಿತ್ರವೆನಿಸುತ್ತಿತ್ತು. ಒಮ್ಮೊಮ್ಮೆ ಮನೋವಿಕಾರಗಳೇನೋ ಎನ್ನುವ ಸಂದೇಹವನ್ನು ಹುಟ್ಟಿಸುತ್ತಿತ್ತು.

ಇದ್ದಕ್ಕಿದ್ದಂತೆ ಡೋರಿಯನ್ ಗ್ರೇ ರೋಮನ್ ಕ್ಯಾಥೋಲಿಕ್ ಪಂಗಡಕ್ಕೆ ಸೇರುತ್ತಿದ್ದಾನೆ ಎನ್ನುವ ಸುದ್ದಿ ಹಬ್ಬಿತು. ರೋಮನ್ ಕ್ಯಾಥೋಲಿಕರಿಗೂ ಡೋರಿಯನ್ ಗ್ರೇ ತುಂಬ ಪ್ರಿಯನಾಗಿದ್ದ. ಧಾರ್ಮಿಕ ವಿಧಿ ಆಚರಣೆಗಳನ್ನು ಬಹಳ ನಿಷ್ಠೆಯಿಂದ ಪಾಲಿಸುತ್ತಿದ್ದ. ಜನ ಪಾಪದ ವೇದನೆ ಮಾಡುತ್ತಿದ್ದುದನ್ನು ಕುತೂಹಲದಿಂದ ಗಮನಿಸುತ್ತಿದ್ದ. ತಮ್ಮ ಪಾಪಗಳನ್ನು ಹೇಳಿಕೊಂಡು ಕ್ಷಮಾಯಾಚನೆ ಮಾಡುತ್ತಿದ್ದರು.

ಇಂಥೆಲ್ಲಾ ಧಾರ್ಮಿಕ ಪರಿಸರಕ್ಕೆ ಬರುತ್ತಿದ್ದರೂ ತನ್ನ ಬೌದ್ಧಿಕತೆ, ವೈಚಾರಿಕತೆಯ ಬೆಳವಣಿಗೆ ಕುಂಠಿತವಾಗಲು ಬಿಡಲಿಲ್ಲ. ತಾನು ವಾಸ ಮಾಡುವ ಮನೆ, ಹೋಗುತ್ತಿದ್ದ ಹೋಟೆಲುಗಳು, ಭೇಟಿಯಾಗುತ್ತಿದ್ದ ಸ್ನೇಹಿತರು ಬದಲಾಗಲಿಲ್ಲ. ಬದುಕಿಗಿಂತ ಬದುಕಿನ ಸಿದ್ಧಾಂತಗಳು ಅವನಿಗೆ ಹೆಚ್ಚೆನಿಸಲಿಲ್ಲ. ಪ್ರಯೋಗ ಮತ್ತು ಕ್ರಿಯಾ ಶೀಲತೆಗಳಿಂದ ದೂರವಾದ ಯಾವುದೇ ಬೌದ್ಧಿಕ ಚಿಂತನೆಯೂ ಪ್ರಯೋಜನಕಾರಿ ಆಗುವುದಿಲ್ಲ. ಇಂದ್ರಿಯಗಳಿಗೂ ಆತ್ಮಕ್ಕಿರುವಷ್ಟೇ ಆಧ್ಯಾತ್ಮಿಕ ನಿಗೂಢತೆಗಳನ್ನು ತೆರೆದಿರಿಸುವ ಶಕ್ತಿಯನ್ನು ಹೊಂದಿದೆ. ಭೋಗಾಸಕ್ತಿ ಸಂವೇದನೆಗಳಿಂದ ಮುಕ್ತವಾದ ಮನಃಸ್ಥಿತಿ ಸಾಧ್ಯವೇ ಇಲ್ಲ. ಅವುಗಳ ನಡುವಿನ ಅಂತರವನ್ನು ತಿಳಿಯಲೇ ಬೇಕೆನ್ನುವ ಪ್ರಯತ್ನದಲ್ಲಿ ನಿರತನಾದ. ಹಲವು ರೀತಿಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ. ಸುಗಂಧ ದ್ರವ್ಯಗಳ ತಯಾರಿಕೆಯ ವಿಧಾನಗಳಲ್ಲಿ ಆಸಕ್ತಿಯಿಂದ ತೊಡಗಿಸಿಕೊಂಡ. ಒಂದಷ್ಟು ಕಾಲ ಅದರಲ್ಲಿ ನಿರತನಾಗಿದ್ದು, ನಂತರ ಸಂಗೀತ ವಾದ್ಯಗಳಲ್ಲಿ ಪರಿಣತರಾದವರನ್ನು ಪ್ರಪಂಚದ ಮೂಲೆ ಮೂಲೆಗಳಿಂದ ಆಹ್ವಾನಿಸುವ ಮತ್ತು ವೈವಿಧ್ಯಮಯ ವಾದ್ಯ ಸಂಗೀತಗಳನ್ನು ಆಸ್ವಾದಿಸುವ ಕೆಲಸಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ. ಹೀಗೆಯೇ ಆಭರಣಗಳ ಬಗ್ಗೆ ಆಸಕ್ತಿ ತೋರಿದ. ಅಮೂಲ್ಯವಾದ ವಜ್ರ, ವೈಢೂರ್ಯ ಮತ್ತು ಹವಳಗಳನ್ನು ಚಿನ್ನದಲ್ಲಿ ಹುದುಗಿಸಿ, ಆಕರ್ಷಕ ಒಡವೆಗಳನ್ನು ತಯಾರಿಸುವ ಪ್ರಯತ್ನಗಳಲ್ಲಿ ಮುಳುಗಿದ. ಒಂದಷ್ಟು ದಿನದ ನಂತರ ಇದರಲ್ಲಿನ ಆಸಕ್ತಿ ಕರಗಿದಂತೆ, ಎಂಬ್ರಾಯಿಡರಿ ಕೆಲಸಗಳಲ್ಲಿ ನಿರತನಾಗಿ ಹೊಸ ಹೊಸ ಚಿತ್ತಾರಗಳನ್ನು ಬಿಡಿಸಿದ. ಪ್ರಪಂಚದಲ್ಲಿನ ಅದ್ಭುತವಾದ ಎಂಬ್ರಾಯಿಡರಿ ಮಾದರಿಗಳನ್ನು, ಬಟ್ಟೆಗಳನ್ನು ತಂದು ತಂದು ತುಂಬಿಕೊಂಡ. ಅಮೂಲ್ಯವಾದ ಬಟ್ಟೆ ಬರೆ ಮತ್ತು ಇನ್ನಿತರೆ ವಸ್ತುಗಳನ್ನು ಫ್ಯಾಷನ್‌ಗಾಗಿ ತರಿಸಿಕೊಂಡ. ಹೀಗೆ ಕೊಂಡು ತಂದು ರಾಶಿ ರಾಶಿಯಾಗಿ ತನ್ನ ವಿಶಾಲವಾದ ಅರಮನೆಯಂತಹ ಮನೆಯಲ್ಲಿ ತುಂಬಿಸಿಕೊಂಡದ್ದು ತನಗೆ ಉಪಯೋಗವಾದೀತೆಂಬ ಉದ್ದೇಶದಿಂದಲ್ಲ. ತನ್ನ ಬದುಕಿನಲ್ಲಿನ ಕಹಿ ಘಟನೆಗಳನ್ನು ಮರೆಯುವುದಕ್ಕಾಗಿ ಹೀಗೆಲ್ಲ

ಮಾಡಿದ; ಭಯಾನಕ ನೆನಪುಗಳು ತನ್ನನ್ನು ಕಾಡದಿರಲೆಂದು ಪ್ರಾರ್ಥಿಸಿದ. ದೇವರ ಬಗ್ಗೆ ಸ್ವಲ್ಪ ಹೆಚ್ಚಾಗಿಯೇ ಒಲಿಯುತ್ತಿದ್ದ. ಯಾರೂ ಪ್ರವೇಶಿಸದ, ಬೀಗಹಾಕಿದ ಆ ಒಂಟಿ ಕೋಣೆಯ ಗೋಡೆಗೆ ನೇತುಹಾಕಿದ್ದ ಭಾವಚಿತ್ರದಲ್ಲಿ ಕಾಣಿಸಿಕೊಳ್ಳುತ್ತಿದ್ದ ಬದಲಾವಣೆಗಳು ಅವನ ಜೀವನ ಪತನದ ಸಂಕೇತವಾಗಿತ್ತು. ವಾರಗಳಲ್ಲಿ ಒಂದು ದಿನವಾದರೂ ಅವನು ಆಕಡೆ ತಲೆಹಾಕಿರಲಿಲ್ಲ. ಅಸಹ್ಯಕರವಾದ ಆ ವರ್ಣಚಿತ್ರವನ್ನು ಮರೆತು ಮೊದಲಿನಂತೆ ತನ್ನ ಸಂತೋಷದ ಕ್ಷಣಗಳಿಗೆ ಮರಳಬೇಕೆಂಬ ಪ್ರಯತ್ನಗಳಲ್ಲಿದ್ದ.

ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಎಲ್ಲೋ ಹೊರಗೆ ಎದ್ದು ಹೋಗಿ ಹುಚ್ಚನಂತೆ ಅಲೆಯುತ್ತಿದ್ದ. ಯಾರಾದರೂ ಅವನನ್ನು ಅಲ್ಲಿಂದ ಓಡಿಸುವವರೆಗೂ ಅಲೆದಾಟದಲ್ಲೇ ಮುಳುಗಿರುತ್ತಿದ್ದ. ಹಾಗೂ ಹೀಗೂ ಮನೆ ಸೇರಿದನೆಂದರೆ ಯಾವ ಭಾವಚಿತ್ರದ ನೆರಳಿನಿಂದಲೇ ದೂರವಿರಬೇಕೆಂದು ಪ್ರಯತ್ನಿಸುತ್ತಿದ್ದನೋ ಅದೇ ಭಾವಚಿತ್ರದ ಮುಂದೆ ಕುಳಿತು, ಅಸಹ್ಯಪಡುತ್ತ ದ್ವೇಷಿಸುತ್ತಿದ್ದ. ಮತ್ತೊಮ್ಮೆ ವಿಚಿತ್ರವಾದ ರೀತಿಯಲ್ಲಿ ಅದರಲ್ಲಿನ ತನ್ನ ಸೌಂದರ್ಯದ ಬಗ್ಗೆ ಹೆಮ್ಮೆಪಡುತ್ತಿದ್ದ.

ತನ್ನ ಬದುಕಿನ ಭಾಗವಾಗಿದ್ದ ಭಾವಚಿತ್ರದಿಂದ ಬೇರೆಯಾಗಿ, ಇಂಗ್ಲೆಂಡಿನಿಂದ ದೂರವಾಗಿ ಇರಲು ಅವನಿಗೆ ಮನಸ್ಸಾಗಲಿಲ್ಲ. ಅಲ್ಲದೆ ಭಾವಚಿತ್ರವನ್ನು ಇರಿಸಿದ್ದ ಕೋಣೆಯ ಬಾಗಿಲನ್ನು ಎಷ್ಟು ಭದ್ರಪಡಿಸಿದ್ದರೂ ಯಾರಾದರೂ ಅದನ್ನು ನೋಡಿಬಿಡುವರೇನೋ ಎನ್ನುವ ಸಂದೇಹಕ್ಕೆ ಒಳಗಾಗಿ ಹೆದರಿದ್ದ. ಆದರೆ ಅದೇ ಸಮಯಕ್ಕೆ ಯಾರೇ ನೋಡಿದರೂ ಅವರಿಗೆ ಏನೂ ಅರ್ಥವಾಗುವುದಿಲ್ಲವೆಂದು ಅವನ ಒಳಮನಸ್ಸಿಗೆ ಹೊಳೆದಿತ್ತು. ಒಂದಂತೂ ನಿಜವಾಗಿತ್ತು. ಭಾವಚಿತ್ರದಲ್ಲಿ ಮೂಡಿದ ವಿಕೃತ ಬದಲಾವಣೆಗಳ ನಡುವೆಯೂ ತನ್ನ ಮುಖದ ಹೋಲಿಕೆಯನ್ನಂತೂ ಉಳಿಸಿಕೊಂಡಿತ್ತು. ಒಮ್ಮೊಮ್ಮೆ ನಕ್ಕು ತನ್ನಲ್ಲೇ ಹೇಳಿಕೊಳ್ಳುತ್ತಿದ್ದ ನೋಡಿದವರಿಗೆ ಏನರ್ಥವಾಗುತ್ತೆ? ತಾನೇನೂ ಸೃಷ್ಟಿಸಿಲ್ಲವಲ್ಲ. ಅಂಥ ವಿಕಾರದ ಸೃಷ್ಟಿ ತನ್ನಿಂದ ಸಾಧ್ಯವಿಲ್ಲ. ಯಾರಾದರೂ ಹೇಳಿದರೂ ಜನ ನಂಬುವುದಿಲ್ಲ – ಎಂದು.

ಆದರೂ ಹೆದರಿಕೆ ಅವನನ್ನು ಪೆಡಂಭೂತವಾಗಿ ಕಾಡುತ್ತಿತ್ತು. ಸಮಾಜದ ಪ್ರತಿಷ್ಠಿತ ವ್ಯಕ್ತಿಗಳನ್ನು ಆಹ್ವಾನಿಸುತ್ತಿದ್ದ. ಅವರ ಜೊತೆ ಸಂತೋಷದಿಂದ ಹೊತ್ತು ಕಳೆಯುತ್ತಿದ್ದ. ಮಧ್ಯೆ ಮಧ್ಯೆ ಇದ್ದಕ್ಕಿದ್ದಂತೆ ಎದ್ದು ಹೋಗಿ ಭಾವಚಿತ್ರವಿರಿಸಿದ್ದ ಕೋಣೆಯ ಬಾಗಿಲು ಭದ್ರವಾಗಿದೆಯೇ ಎಂದು ಪರೀಕ್ಷಿಸಿ ಹೋಗುತ್ತಿದ್ದ. ಬಾಗಿಲು ತೆಗೆದು ನೋಡಿ, ಇದ್ದಲ್ಲೇ ಚಿತ್ರವಿರುವುದನ್ನು ಖಾತ್ರಿಪಡಿಸಿಕೊಂಡು ಬರುತ್ತಿದ್ದ. ಮೊತ್ತೊಮ್ಮ "ಯಾರಾದರೂ ಕದ್ದರೆ ಕದಿಯಲಿಬಿಡು" ಎಂದು ತನಗೆ ತಾನೇ ಸಮಾಧಾನ ಪಡಿಸಿಕೊಳ್ಳುತ್ತಿದ್ದ.

ಆದರೂ ತುಂಬಾ ಜನ ಅವನ ಸೌಂದರ್ಯದಿಂದ ಆಕರ್ಷಿತರಾಗಿದ್ದರು. ಜೊತೆ ಜೊತೆಯಲ್ಲಿಯೇ ಅಷ್ಟೇ ಪ್ರಮಾಣದಲ್ಲಿ ಜನ ಅವನನ್ನು ಗುಮಾನಿಯಿಂದ ನೋಡುತ್ತಿದ್ದರು. ಕ್ರಮೇಣ ಅವನ ಬಗ್ಗೆ ಚಿತ್ರ ವಿಚಿತ್ರ ಕತೆಗಳು, ವದಂತಿಗಳು ಕ್ಲಬ್ಬುಗಳಲ್ಲಿ ಬೇರೆ ಬೇರೆ ಸಾರ್ವಜನಿಕರ ಸ್ಥಳಗಳಲ್ಲಿ ಹರಿದಾಡಿದವು. ವಿದೇಶಿ ನಾವಿಕರ ವಾಸಯೋಗ್ಯವಲ್ಲದ ಬಿಲದಂತಹ ಕೋಣೆಗಳಲ್ಲಿ ಇರುತ್ತಾನೆಂದೂ, ಕಳ್ಳಕಾಕರ ಒಡನಾಟದಲ್ಲಿ ಯಾವಾಗಲೂ

ಕಾಣಿಸಿಕೊಳ್ಳುತ್ತಾ ಅವರ ನಿಗೂಢ ಚಟುವಟಿಕೆಗಳ ರಹಸ್ಯವನ್ನು ತಿಳಿಯಲು ಪ್ರಯತ್ನಿಸುತ್ತಿದ್ದಾನೆಂದೂ ಕತೆಗಳು ಹುಟ್ಟಿಕೊಂಡವು. ಅಲ್ಲದೆ ಆಗಾಗ ಇದ್ದಕ್ಕಿದ್ದಂತೆ ಬಹಳ ದಿನಗಳವರೆಗೆ ಕಾಣಿಸಿಕೊಳ್ಳದೆ ಇದ್ದುಬಿಡುತ್ತಿದ್ದ. ಇದೂ ಕೂಡಾ ಜನರ ಊಹಾಪೋಹಗಳಿಗೆ ದಾರಿ ಮಾಡುತ್ತಿತ್ತು. ಒಂದು ವೇಳೆ ಅಪರೂಪಕ್ಕೆ ಕಾಣಿಸಿಕೊಂಡರೆ, ಗುಮಾನಿಯಿಂದ ನೋಡುತ್ತಿದ್ದರು. ಇಲ್ಲವೆ ಪಿಸುಮಾತುಗಳಲ್ಲಿ ಒಬ್ಬರಿಗೊಬ್ಬರು ಅವನ ಕುರಿತು ಹೇಳಿಕೊಳ್ಳುತ್ತಿದ್ದರು. ಅವರ ನಡವಳಿಕೆ ನೋಡಿದರೆ, ಅವನ ಜೀವನ ರಹಸ್ಯವನ್ನರಿಯಲು ಪತ್ತೇದಾರಿಕೆ ಮಾಡುತ್ತಿರುವಂತೆ ತೋರುತ್ತಿತ್ತು.

ಇಷ್ಟೆಲ್ಲ ಆದರೂ ಅವನು ಮಾತ್ರ ಇವುಗಳಿಂದ ವಿಚಲಿತನಾಗಲಿಲ್ಲ. ಅವನ ಸೌಮ್ಯ, ಸಾಚಾ ನಡೆ, ನೋಡಿದವರ ಮನ ಸೆಳೆಯುವ ಸೌಂದರ್ಯ, ಅವನ ಆ ಯೌವನ, ರೋಮಾಂಚನಕ್ಕೆ ದೂಡುವ, ಮತ್ತೇರಿಸುವ ಅವನ ನಗೆ ಇವುಗಳೇ ಕೆಲವರನ್ನು ಅವನು ಪವಿತ್ರ, ಪರಿಶುದ್ಧ; ವದಂತಿಗಳೆಲ್ಲ ಸುಳ್ಳು ಎಂದು ಭಾವಿಸುವಂತೆ ಮಾಡಿತು. ಆದರೆ ಅದೇ ಸಮಯಕ್ಕೆ ಅವನಿಗೆ ತೀರಾ ಹತ್ತಿರವಿದ್ದ ಗೆಳೆಯರು ಗೆಳತಿಯರು ಅವನನ್ನು ದೂರವಿರಿಸಲು ಪ್ರಯತ್ನಿಸುತ್ತಿದ್ದರು. ತಮ್ಮ ಕೋಣೆ ಪ್ರವೇಶಿಸುವನೇನೋ ಎಂದು ಹೆದರಿ ಕೂರುತ್ತಿದ್ದರು. ಕೆಲವರ ಕಣ್ಣಲ್ಲಿ ಅವನ ಅನುಪಮ ಸೌಂದರ್ಯದಲ್ಲಿ ಅಪಾಯ ಅಡಗಿರುವ ಭಾವನೆ ಕಾಣಿಸುತ್ತಿತ್ತು. ಸಾಮಾನ್ಯವಾಗಿ ಅಂದಿನ ಶಿಷ್ಟ ಸಮಾಜದಲ್ಲಿ ಪ್ರತಿಷ್ಠಿತ, ಶ್ರೀಮಂತ ವ್ಯಕ್ತಿಗಳ ವ್ಯಕ್ತಿತ್ವಕ್ಕೆ ಮಾರಕವಾಗಬಹುದಾದ ಯಾವುದೇ ವದಂತಿಗಳನ್ನು ಅಷ್ಟು ಸುಲಭವಾಗಿ ನಂಬುತ್ತಿರಲಿಲ್ಲ. ಅಲ್ಲದೆ ಸಮಾಜದಲ್ಲಿನ ಅವರ ಪ್ರತಿಷ್ಠೆ, ಸ್ಥಾನಮಾನಗಳು ಮುಖ್ಯವೆಂದು ಪರಿಗಣಿಸಲಾಗುತ್ತಿತ್ತೇ ಹೊರತು ನೈತಿಕತೆಯನ್ನಲ್ಲ.

ಡೋರಿಯನ್ ಗ್ರೇನ ದೃಷ್ಟಿಯಲ್ಲಿ ಮನುಷ್ಯ ಅಸಂಖ್ಯ ಬದುಕುಗಳು, ಅಸಂಖ್ಯ ಸಂವೇದನೆಗಳು, ಭಾವನೆಗಳಿಂದ ಕೂಡಿದ ಒಂದು ಸಂಕೀರ್ಣ ಜೀವಿ. ಅವನಲ್ಲಿ ಆನುವಂಶಿಕವಾಗಿ ಹಿಂದಿನ ತಲೆಮಾರಿನವರ ಕೆಲವಷ್ಟು ದೌರ್ಬಲ್ಯಗಳು, ಪಾಪಗಳು ಭಯಾನಕ ಅಪವಾದಗಳು ರಕ್ತಗತವಾಗಿ ಅಂಟಿಕೊಂಡಿರುತ್ತವೆ. ಬಹುಶಃ ಹಾಗೆಯೇ ಬೇಸಿಲ್ ಹಾಲ್‌ವಾರ್ಡ್ ಸೃಷ್ಟಿಸಿದ ಡೋರಿಯನ್ ಗ್ರೇನ ಭಾವಚಿತ್ರದಲ್ಲಿ ಕಾಣಿಸಿಕೊಂಡಿರಬಹುದೇ? ಹಾಲ್‌ವಾರ್ಡ್‌ನ ಒತ್ತಾಯವೇ ತನ್ನ ಬದುಕನ್ನು ಸಂಪೂರ್ಣ ಬದಲಾಯಿಸಿರಬಹುದೇ?

❖

## ಅಧ್ಯಾಯ - 12

**ತ**ನ್ನ ಮೂವತ್ತೆಂಟನೆ ಹುಟ್ಟು ಹಬ್ಬದ ದಿನ, ರಾತ್ರಿ ಹನ್ನೊಂದು ಗಂಟೆ ಸಮಯ, ವಿಪರೀತ ಚಳಿಯ ಕಾರಣ ಫರ್ ಕೋಟನ್ನು ಧರಿಸಿ, ಹೆನ್ರಿ ಮನೆಯಲ್ಲಿ ಊಟ ಮುಗಿಸಿ ಮನೆಯ ಕಡೆ ಹೆಜ್ಜೆ ಹಾಕುತ್ತಿದ್ದ. ಗವರ್ನರ್ ಚೌಕದಲ್ಲಿ, ಒಬ್ಬ ವ್ಯಕ್ತಿ ವೇಗದ ಹೆಜ್ಜೆ ಹಾಕುತ್ತ ಅವನನ್ನು ದಾಟಿ ಹೋಗುತ್ತಿದ್ದ. ಕೈಯಲ್ಲಿ ದೊಡ್ಡದೊಂದು ಚೀಲವಿತ್ತು. ಆ ರಾತ್ರಿಯಲ್ಲೂ ಡೋರಿಯನ್ ಗ್ರೇ ಅವನನ್ನು ಗುರುತಿಸಿದ. ಅವನು ಬೇರೆ ಯಾರೂ ಆಗಿರದೆ ಬೇಸಿಲ್ ಹಾಲ್‌ವಾರ್ಡ್ ಆಗಿದ್ದ. ಅವನೆಂದು ತಿಳಿಯುತ್ತಲೇ ಯಾಕೋ ಅವನನ್ನು ಭಯ ಆವರಿಸಿತು. ಅವನ ಗುರುತೇ ಹತ್ತಲಿಲ್ಲವೆಂಬಂತೆ ಕಾಣಿಸಿಕೊಳ್ಳುತ್ತಾ, ಬೇಗ ಬೇಗ ತನ್ನ ಮನೆಯ ಕಡೆ ಹೆಜ್ಜೆ ಹಾಕಿದ.

ಆದರೆ ಹಾಲ್ ವಾರ್ಡ್ ಅವನನ್ನು ಗುರುತಿಸಿ ಬಿಟ್ಟಿದ್ದ. ಅವನ ಹೆಸರು ಹಿಡಿದು ಕೂಗುತ್ತ ಅವನನ್ನು ಸಮೀಪಿಸಲು ಪ್ರಯತ್ನಿಸುತ್ತಿದ್ದ. ಒಂದೆರಡು ನಿಮಿಷಗಳಲ್ಲಿಯೇ ಡೋರಿಯನ್ ಪಕ್ಕದಲ್ಲಿದ್ದ. ಅವನ ಹೆಗಲ ಮೇಲೆ ಕೈಯಿರಿಸಿ "ಡೋರಿಯನ್ ಎಂಥ ಯೋಗಾಯೋಗ, ನಿನಗಾಗಿ ನಿನ್ನ ಲೈಬ್ರರಿಯಲ್ಲಿ ಒಂಬತ್ತು ಗಂಟೆಯಿಂದ ಕಾಯುತ್ತಿದ್ದೆ, ಆದರೆ ನೀನು ಎಷ್ಟು ಹೊತ್ತಾದರೂ ಬರಲಿಲ್ಲ. ನಿನ್ನ ವಿಕ್ಟರ್ ಪಾಪ, ನನಗಾಗಿ ನಿದ್ದೆ ಮಾಡದೆ ಎದ್ದಿದ್ದ. ನನಗೇ ಅಯ್ಯೋ ಪಾಪ ಅಂತ ಅನಿಸಿ ಅವನಿಗೆ ನಿದ್ದೆ ಮಾಡಲು ಹೋಗಲು ಹೇಳಿ ನಾನು ಹೊರಟು ಬಂದೆ. ಈ ದಿನ ಮಧ್ಯರಾತ್ರಿ ಟ್ರೈನ್ ಹಿಡಿದು ಪ್ಯಾರಿಸ್‌ಗೆ ಹೋಗುತ್ತಿದ್ದೇನೆ. ಹೋಗೋ ಮೊದಲು ನಿನ್ನನ್ನು ನೋಡಿ ಹೋಗೋಣ ಎಂದು ಬಂದೆ. ಇಲ್ಲಿ ನೀನು ಎದುರಾದೆ. ಕೂಡಲೇ ನಿನ್ನ ಫರ್ ಕೋಟನ್ನು ಗುರುತಿಸಿದೆ. ನೀನು ನನ್ನನ್ನು ಗಮನಿಸಲಿಲ್ಲವೇನು?"

"ಮಂಜು ಕವಿದಿದ್ದ ಈ ಸಮಯದಲ್ಲಿ ಗುರುತಿಸಲು ಆಗಲಿಲ್ಲ. ನಾನು ಎಲ್ಲಿದ್ದೀನಿ ಅನ್ನೋದು ಗೊತ್ತಾಗಲಿಲ್ಲ ನನ್ನ ಮನೇನೇ ಯಾವ ಕಡೆ ಇದೇಂತ ಹುಡುಕಬೇಕಾಗಿ ಬಂದಿದೆ. ನೀನು ಹೋಗ್ತಾ ಇರೋದು ಕೇಳಿ ಬೇಸರ ಆಗಿದೆ. ಅಲ್ದೆ ಎಷ್ಟೋ ದಿನದಿಂದ ನಿನ್ನನ್ನು ನೋಡೋಕೆ ಆಗಲಿಲ್ಲ."

"ನಾನೇನು ಅಲ್ಲಿಯೇ ಉಳೀಬೇಕಂತ ಹೋಗ್ತಿಲ್ಲ. ಒಂದು ಆರುತಿಂಗಳು ಅಲ್ಲಿದ್ದು ಇಂಗ್ಲೆಂಡಿಗೆ ಹಿಂತಿರುಗಿ ಬಂದು ಬಿಡ್ತೀನಿ. ಅಲ್ಲಿ ಸ್ಟುಡಿಯೋ ಒಂದು ಬಾಡಿಗೆಗೆ ತಗೊಂಡು ನನ್ನ ತಲೆಯಲ್ಲಿ ಮೂಡಿರುವ ಒಂದು ಅದ್ಭುತವಾದ ಚಿತ್ರಕೃತಿಯನ್ನು ರಚಿಸಬೇಕೆಂದಿದ್ದೇನೆ. ಇರಲಿ ನಾನು ನನ್ನ ಬಗ್ಗೆ ಹೇಳೋಕೆ ಬಂದಿಲ್ಲ. ನಿನಗೆ ನಾನೇನೋ ಒಂದು ವಿಷಯ ಹೇಳಬೇಕೆಂದಿದ್ದೇನೆ ಮನೆ ಒಳಗೆ ಹೋಗೋಣವೇ?"

"ನೀನು ಬರ್ತೀನಿ ಅಂದದ್ದು ನನಗೆ ತುಂಬ ಸಂತೋಷವೇ. ಆದರೆ ನಿನ್ನ ಟ್ರೈನಿಗೆ ಹೊತ್ತಾಗುವುದಿಲ್ಲವೇ?" ಎಂದು ಪ್ರಶ್ನಿಸುತ್ತಲೇ ಮನೆ ಬೀಗ ತೆಗೆದ. ಹಾಲ್ ವಾರ್ಡ್ ವಾಚ್ ನೋಡಿಕೊಂಡ. "ಏನೂ ತೊಂದರೆ ಇಲ್ಲ. ಬೇಕಾದಷ್ಟು ಸಮಯ ಇದೆ. ನನ್ನ ಟ್ರೈನ್ ಇರೋದು ಹನ್ನೆರಡೂ ಕಾಲಿಗೆ. ಈಗಿನ್ನೂ ಹನ್ನೊಂದು. ಜೊತೆಗೆ ನನ್ನ ಭಾರಿ ಲಗ್ಗೇಜನ್ನು ಮೊದಲೇ ಕಳಿಸಿಬಿಟ್ಟಿದ್ದೇನೆ. ಕೈಯಲ್ಲಿರುವ ಈ ಚೀಲವೊಂದೇ ನನ್ನ ಲಗೇಜು" ಡೋರಿಯನ್ ನಗುತ್ತಾ ಹೇಳಿದ "ಬೇಗ ಒಳಗೆ ಬಾ, ಇಲ್ಲವಾದರೆ ಮಂಜುಗಾಳಿ ಮನೆ ಒಳಗೂ ನುಗ್ಗುತ್ತೆ."

ಇಬ್ಬರೂ ಒಳನಡೆದರು. ದೀಪಗಳು ಉರಿಯುತ್ತಿದ್ದವು. ಒಂದು ಕಡೆ ವಿಶಾಲವಾದ ಬೆಂಕಿಗೂಡಿನಲ್ಲಿ ಬೆಂಕಿ ಉರಿಯುತ್ತಿತ್ತು.

"ಡೋರಿಯನ್ ನಿನ್ನ ಸೇವಕ ನನ್ನನ್ನು ಬಹಳ ಚೆನ್ನಾಗಿ ನೋಡಿಕೊಂಡ. ನನಗೆ ಬೇಕಾದ್ದನ್ನೆಲ್ಲ ಹೊಂದಿಸಿಕೊಡುತ್ತಿದ್ದ. ತುಂಬಾ ಒಳ್ಳೆಯವನು. ನನಗೆ ನಿನ್ನ ಹಿಂದೆ ಇದ್ದ ಸೇವಕರಿಗಿಂತ ಬಹಳ ಒಳ್ಳೆಯವನು ಎನಿಸಿದೆ."

"ನನಗೆ ಆ ಥರ ಏನೂ ಅನಿಸುತ್ತಿಲ್ಲ. ಆದರೆ ನನಗೆ ಅವನ ಬಗ್ಗೆ ಯಾವ ದೂರೂ ಇಲ್ಲ" ಬ್ರ್ಯಾಂಡಿ ಗೀಂಡಿ ಕುಡೀತೀಯಾ ಹೇಗೆ? ಬೇಡ. ಮತ್ತೇನೂ ತಗೊಳ್ಳೊ ಅಗತ್ಯ ಇಲ್ಲ. ಎಂದು ಹೇಳುತ್ತಾ, ಹ್ಯಾಟ್ ಮತ್ತು ಕೋಟನ್ನು ತೆಗೆದು ತನ್ನ ಬ್ಯಾಗ್ ಮೇಲೆ ಇರಿಸಿದ. "ಗೆಳೆಯಾ ನಾನು ನಿನ್ನ ಜೊತೆ ಸ್ವಲ್ಪ ಸೀರಿಯಸ್ಸಾಗಿ ಮಾತಾಡೋದಿದೆ. ಸಿಡುಕಬೇಡ. ಹಾಗಾದರೆ ನನಗೆ ಮಾತಾಡೋದು ತುಂಬ ಕಷ್ಟ ಅಂತ ಅನಿಸುತ್ತೆ."

"ಏನು ಮಾತಾಡಬೇಕಿದೆ? ಎಂದು ಸೋಫಾದ ಮೇಲೆ ಧೊಪ್ಪನೆ ಕುಳಿತ. ನೀನು ಮಾತಾಡೋದು ನನ್ನ ಬಗ್ಗೆ ಅಲ್ಲ ತಾನೇ? ನನಗೆ ಇವತ್ತು ಸಾಕಾಗಿದೆ. ಇವತ್ತಾದರೂ ನಾನು ಎನ್ನುವ ನೆನಪಿನಿಂದ ದೂರ ಇರಬಯಸುತ್ತೇನೆ"

"ನಿನ್ನ ಬಗ್ಗೇನೇ ಮಾತಾಡಬೇಕಿದೆ ಎಂದು ಗಂಭೀರವಾಗಿ ಹೇಳಿದ "ನಿನಗೆ ಹೇಳಲೇ ಬೇಕು ಒಂದರ್ಧ ಗಂಟೆ ಮಾತ್ರ."

ಡೋರಿಯನ್ ದೀರ್ಘವಾಗಿ ಉಸಿರೆಳೆದುಕೊಂಡ. ಸಿಗರೇಟು ಹಚ್ಚಿದ "ಅರ್ಧಗಂಟೆ ಅಂದರೆ ಅರ್ಧಗಂಟೆ!" ಗೊಣಗುತ್ತಾ ಹೇಳಿದ. "ನಿನ್ನಿಂದ ನಾನೇನೂ ನಿರೀಕ್ಷಿಸುತ್ತಿಲ್ಲ. ನಿನ್ನ ಒಳ್ಳೇದಕ್ಕಾಗಿ ಹೇಳ್ತಿದ್ದೀನಿ. ನಿನ್ನ ಬಗ್ಗೆ ಲಂಡನ್ ಜನ ಏನೆಲ್ಲ ಕೆಟ್ಟ ಕೆಟ್ಟ ಮಾತು ಆಡಿಕೊಳ್ಳುತ್ತಿದ್ದಾರೆ. ಅದೆಲ್ಲಾ ನಿನಗೆ ಗೊತ್ತಿದೆಯೇನು?"

"ಅವರು ಏನು ಮಾತಾಡಿಕೊಳ್ತಾರೆ ಅನ್ನೋದು ನನಗೆ ಬೇಕಿಲ್ಲ. ಬೇರೆಯವರ ಬಗ್ಗೆ ಇಂಥಾದ್ದನ್ನೆಲ್ಲ ಕೇಳಿಸಿಕೊಳ್ಳೋಕೆ ನನಗೆ ಇಷ್ಟ ಇದೆಯೇ ಹೊರತಾಗಿ ನನ್ನ ಬಗ್ಗೆ ಏನು ಮಾತಾಡಿದರು ಅನ್ನೋದರಲ್ಲಿ ಆಸಕ್ತಿಯಿಲ್ಲ. ಅದರಿಂದೇನೂ ಖುಷಿ ಸಿಗೊಲ್ಲ.

"ಇಲ್ಲ ಅದು ನಿನಗೆ ಇಷ್ಟ ಆಗುತ್ತೆ, ಪ್ರತಿಯೊಬ್ಬರೂ ತಮ್ಮ ಒಳ್ಳೇದನ್ನು ಕೇಳೋಕೆ ಇಷ್ಟಪಡ್ತಾರೆಯೇ ಹೊರತು, ಕೆಟ್ಟದ್ದನ್ನು ಅಪವಾದಗಳನ್ನು ಕೇಳೋಕೆ ಮಾತ್ರ ಇಷ್ಟ ಪಡೊಲ್ಲ. ನಿನಗೇನು ಹೆಸರಿದೆ. ರೂಪ ಇದೆ, ಬೇಕಾದಷ್ಟು ಹಣ ಇದೆ. ಅಧಿಕಾರ, ಹಣ ಇವಿಷ್ಟೇ ಎಲ್ಲಾ ಅಲ್ಲ. ನಿನ್ನ ಬಗ್ಗೆ ಇರುವ ವದಂತಿಗಳನ್ನು ನಾನೇನು ನಂಬೋದಿಲ್ಲ ಅನ್ನುವುದು ನಿನಗೇ ಗೊತ್ತಿದೆ. ಅದರಲ್ಲೂ ನಿನ್ನ ಎದುರಿಗೆ ಇದ್ದರಂತೂ ಇಲ್ಲವೇ ಇಲ್ಲ. ಪಾಪ ಅನ್ನೋದು ಮನುಷ್ಯನ ಮುಖದಲ್ಲೇ ಕಾಣಿಸಿಬಿಡುತ್ತೆ. ಅದನ್ನು ಮುಚ್ಚಿಡೋಕೆ ಸಾಧ್ಯಾನೇ ಇಲ್ಲ. ಯಾರಿಗೂ ಗೊತ್ತಿಲ್ಲದ ರಹಸ್ಯ ಪಾಪಗಳ ಬಗ್ಗೆ ಜನ ಮಾತಾಡ್ತಾರೆ. ಆದರೆ ಪಾಪಗಳಲ್ಲಿ ರಹಸ್ಯ ಅನ್ನೋದು ಇಲ್ಲವೇ ಇಲ್ಲ. ಕೆಟ್ಟವನು ಮಾಡುವ ಕೇಡು ಅವನ ಮುಖದಲ್ಲಿಯೇ ಕಾಣಿಸಿಕೊಂಡು ಬಿಡುತ್ತದೆ. ಹೋದ ವರ್ಷ ಯಾರೋ ಒಬ್ಬರು ನನ್ನ ಹತ್ತಿರ ಬಂದಿದ್ದರು. ಯಾರೂಂತ ನಾನು ಹೇಳೋದಿಲ್ಲ. ನಿನಗೆ ಗೊತ್ತಿದೆ. ಅವರ ಭಾವಚಿತ್ರ ಬರೆದು ಕೊಡಬೇಕೆಂತ ಕೇಳಿದರು. ಎಷ್ಟು ಬೇಕಾದರೂ ಹಣ ಕೊಡಬಲ್ಲೆ ಎಂದು ಹೇಳಿದರು. ಆದರೆ ನಾನು ಸುತರಾಂ ಒಪ್ಪಲಿಲ್ಲ. ಅವನ ಬೆರಳುಗಳ ಆಕಾರಾನೇ ನನಗೆ ಅಸಹ್ಯವಾಯಿತು. ಅವನ ಬಗ್ಗೆ ನಾನು ಏನು ಯೋಚಿಸಿದ್ದೆ, ಅದು ನಿಜವೇ ಆಗಿತ್ತು. ಅವನ ಬದುಕು ಭಯಂಕರವಾದದ್ದಾಗಿತ್ತು. ಆದರೆ ಡೋರಿಯನ್ ನಿನ್ನ ಮುಖದಲ್ಲಿನ ಮುಗ್ಧತೆ, ಆಕರ್ಷಣೆ, ಹುರುಪು, ಉತ್ಸಾಹ ಉಲ್ಲಾಸಗಳಿಂದ ತುಂಬಿದ ನಿನ್ನ ಯವ್ವನ ಯಾರನ್ನೂ ನಂಬುವಂತೆ, ಎಷ್ಟೇ ಕೆಟ್ಟದ್ದಾಡಿದರೂ, ಮಾಡುವುದಿಲ್ಲ. ಅಂಥಾದ್ದರಲ್ಲಿ ನಾನು ಹೇಗೆ ನಂಬಲು ಸಾಧ್ಯ? ಆದರೂ ನೀನು ನನ್ನ ಸ್ಟುಡಿಯೋಗೆ ಬರುವುದನ್ನೇ ನಿಲ್ಲಿಸಿಬಿಟ್ಟಿದ್ದೀಯ. ಗುಟ್ಟು ಗುಟ್ಟಾಗಿ ಜನ ನಿನ್ನ ಬಗ್ಗೆ ಏನೇನೊ ಮಾತಾಡುತ್ತಿದ್ದಾರೆ ಅನ್ನೋದು ನನಗೆ ಗೊತ್ತು. ಹೀಗಿರುವಾಗ ನನ್ನನ್ನೇಕೆ ದೂರ ಮಾಡ್ತಿದ್ದೀ. ಆದರೆ ಲಂಡನ್ನಿನ ಪ್ರತಿಷ್ಠಿತ ವ್ಯಕ್ತಿಗಳು, ನಿನ್ನ ಬಗ್ಗೆ ಕೇವಲವಾಗಿ ಮಾತಾಡುತ್ತಾರೆ. ಹೆಂಗಸರು ನಿನ್ನ ಜೊತೆ ಕುಳಿತುಕೊಳ್ಳಲು ಹಿಂಜರಿಯುತ್ತಾರೆ. ನಾನು ನಿನ್ನ ಗೆಳೆಯ ಎಂದಾಗ ನನ್ನ ಬಗ್ಗೆಯೂ ಗುಮಾನಿಯ ನೋಟ ಬೀರುತ್ತಾರೆ. ನಿನ್ನಿಂದಾಗಿ ಯಾರೋ ಒಬ್ಬ ಯುವಕ ಆತ್ಮಹತ್ಯೆ ಮಾಡಿಕೊಂಡನಂತೆ. ಯಾಕೆ ಡೋರಿಯನ್. ನಿನ್ನ ಸ್ನೇಹವೇಕೆ ಯುವಕರಿಗೆ ಮಾರಕವಾಗಿ ಪರಿಣಮಿಸುತ್ತಿದೆ. ಸತ್ತವನು ನಿನಗೆ ತುಂಬ ಹತ್ತಿರದ ಗೆಳೆಯನಾಗಿದ್ದನಂತೆ. ಒಬ್ಬರೇ ಇಬ್ಬರೇ ಎಷ್ಟೊಂದು ಮಂದಿ ಸ್ನೇಹಿತರು ಕೆಟ್ಟು ಹಾಳಾಗಿ ಹೋದರಂತೆ. ಯಾಕಿದನ್ನೆಲ್ಲ ಮಾಡುತ್ತಿದ್ದೀಯ? "ಸಾಕು ನಿಲ್ಲಿಸು ಬೇಸಿಲ್. ಇನ್ನು

ಮಾತಾಡಿದ್ದು ಸಾಕು. ನೀನು ಮಾತಾಡ್ತಿರೋದು ಏನೂಂತ ಗೊತ್ತಿಲ್ಲ. ಅವರೆಲ್ಲ ನನ್ನನ್ನು ಕಂಡು ದೂರ ಆಗ್ತಿರೋದು ನಾನು ಕೆಟ್ಟವನೂಂತಲ್ಲ. ಅವರ ಗುಟ್ಟುಗಳೆಲ್ಲ ನನಗೆ ಗೊತ್ತಿದೆ ಅಂತ ಹೆದರಿ ಮುಖ ಮರೆಸಿಕೊಳ್ಳುತ್ತಿದ್ದಾರೆ. ಬೆರ್‌ವಿಕ್, ಆಸ್ಟನ್ ಆಡ್ರಿಯನ್, ಕೆಂಟ್ ಇವರು ಒಬ್ಬೊಬ್ಬರೂ ಎಷ್ಟು ಮಹಾನ್ ಘಾಟಿಗಳು ಅಂತ ನಿನಗೆ ಗೊತ್ತೇನು? ನಯವಂಚಕರು ಆಷಾಢಭೂತಿಗಳು. ತಾವು ಬದುಕುವುದೇ ಒಂದು, ಕಾಣಿಸಿಕೊಳ್ಳುವುದೇ ಒಂದು. ಇವೆರಡಕ್ಕೂ ಸಂಬಂಧವೇ ಇಲ್ಲ. ಶಿಷ್ಟ ಸಮಾಜದಲ್ಲಿ ಎಲ್ಲರೂ ನೀತಿವಂತರಾಗಿಯೇ ಕಾಣಿಸಿಕೊಳ್ಳುತ್ತಾರೆ. ಆದರೆ ಹಾಗೇ ಬಾಳುತ್ತಾರೇನು ಗೆಳೆಯಾ ನಾವು ಬದುಕುತ್ತಿರುವುದು ಹಿಪೋಕ್ರೆಸಿಯ ನಾಡಿನಲ್ಲಿ."

"ಡೋರಿಯನ್, ಎಂದು ಹಾಲ್ ವಾರ್ಡ್ ಎತ್ತರದ ದನಿಯಲ್ಲಿ ಮಾತು ಮುಂದುವರೆಸಿದ" ಪ್ರಶ್ನೆ ಅದಲ್ಲ. ಇಂಗ್ಲೆಂಡ್ ಹಾಳಾಗಿಹೋಗಿದೆ. ಕುಲಗೆಟ್ಟು ಹೋಗಿದೆ ಅದು ನನಗೂ ಗೊತ್ತು. ಇಂಗ್ಲಿಷ್ ಸಮಾಜ ದಾರಿ ತಪ್ಪಿದೆ. ಅದಕ್ಕಾಗಿಯೇ ನೀನು ಮಾತ್ರ ಅಂಥ ಸಮಾಜದ ಭಾಗವಾಗಿ ಇರಬೇಡ ಎಂದು ಹೇಳುತ್ತಿರುವುದು. ಎಂದಿನಿಂದಲೂ ಇದ್ದಂತೆ ಒಳ್ಳೆಯವನಾಗಿರು. ವ್ಯಕ್ತಿಯನ್ನು ಅಳೆಯುವುದು ಅವನು ಎಂಥವರ ಸಹವಾಸದಲ್ಲಿ ಇರುತ್ತಾನೆ ಎನ್ನುವುದರ ಆಧಾರದ ಮೇಲೆ. ನೀನು ಇರುತ್ತಿರುವ ಪರಿಸರ, ಗೆಳೆಯರ ಸಹವಾಸ ಒಳ್ಳೆಯದಲ್ಲ. ಅದರಿಂದ ನಿನ್ನ ಗೌರವ, ಪ್ರತಿಷ್ಠೆ, ಕೀರ್ತಿ ಹಾಳಾಗುತ್ತಿದೆ ಎಂದು ತಿಳಿಸಲು ಪ್ರಯತ್ನಿಸುತ್ತಿದ್ದೇನೆ. ಆ ಗೆಳೆಯರನ್ನು ವಿಲಾಸೀ ಬದುಕಿನೆಡೆಗೆ ಎಳೆದೊಯ್ದಿರುವೆ. ಆದರೆ ಅವರು ಅದರ ಮೂಲಕ ಅಧಃಪಾತಾಳಕ್ಕೆ ಇಳಿದಿದ್ದಾರೆ. ಅವರು ಹಾಗಾಗಲು ಒಂದು ರೀತಿ ನೀನೇ ಕಾರಣ. ನೀನು ಅಂಥ ಸ್ಥಿತಿಯಲ್ಲಿದ್ದರೂ ನಗಬಲ್ಲೆ. ಅದೇ ಈಗ ನಗುತ್ತಿದ್ದೀಯಲ್ಲ ಹಾಗೆ! ನೀನು ಹ್ಯಾರಿ ಇಬ್ಬರೂ ಗಳಸ್ಯ ಕಂಠಸ್ಯ ಸ್ನೇಹಿತರು. ನಿಮ್ಮನ್ನು ಬೇರ್ಪಡಿಸಲು ಸಾಧ್ಯವೇ ಇಲ್ಲ. ಆದರೆ ಅವನ ಸೋದರಿಯ ಹೆಸರು ಅಡ್ಡಾಡತೊಡಗಿದೆ.

"ಬೇಸಿಲ್" ಅಬ್ಬರಿಸಿದ. "ನಿನ್ನದು ತೀರಾ ಅತಿಯಾಯಿತು."

"ನೋಡು ಇವತ್ತು ನಾನು ಮಾತಾಡಲೇ ಬೇಕು. ನೀನು ಕೇಳಿಸಿಕೊಳ್ಳಲೇಬೇಕು. ಇಲ್ಲಿವರೆಗೆ ಆಕೆಯ ಬಗ್ಗೆ ಒಂದು ಅಡ್ಡಮಾತು ಹರಿದಾಡಿದ್ದಿಲ್ಲ. ಆದರೆ ಈಗ ಯಾವ ಮರ್ಯಾದಸ್ಥ ಹೆಣ್ಣೂ ಅವಳ ಜೊತೆ ಹೋಗಲು ಹಿಂಜರಿಯುತ್ತಾಳೆ. ಕಡೆಗೆ ಅವಳ ಮಕ್ಕಳನ್ನೂ ಅವಳ ಜೊತೆ ಇರೋಕೆ ಬಿಡ್ತಾ ಇಲ್ಲ. ಇನ್ನೂ ಒಂದು ವಿಷಯ ಕೇಳಿದೆ, ಬೆಳಗಿನ ಜಾವದಲ್ಲಿ ದರಿದ್ರ ಕೊಂಪೆಗಳ ಒಳಗಿಂದ ಹೊರ ಬರುತ್ತೀಯ ಎಂದು. ಹೇಳು ಇದೆಲ್ಲ ನಿಜವೇನು? ಮೊದಲ ಸಲ ಕೇಳಿದಾಗ ಸುಮ್ಮನೆ ನಕ್ಕು ಬಿಟ್ಟೆ. ಈಗ ಕೇಳಿದರೆ ನಡುಗುವಂತಾಗುತ್ತದೆ. ನಾನು ನಿನಗೆ ಉಪದೇಶ ಮಾಡ್ತಿಲ್ಲ. ನೀನು ಹೇಗೆ ಬದುಕಬೇಕೆಂದರೆ ಜಗತ್ತೇ ನಿನ್ನನ್ನು ಗೌರವಿಸಬೇಕು. ಕೆಟ್ಟವರ ಕೊಳಕರ ಧೂರ್ತರ ಸಹವಾಸದಿಂದ ದೂರವಿರು. ನಾನು ಹೇಳುತ್ತಿರುವುದನ್ನು ಹಗುರವಾಗಿ ಪರಿಗಣಿಸಬೇಡ. ಯಾರನ್ನಾದರೂ ಸುಲಭವಾಗಿ ಪ್ರಭಾವಿಸಬಲ್ಲೆ. ಆದರೆ ಒಳ್ಳೆಯ ರೀತಿಯ ಪ್ರಭಾವವಾಗಬೇಕೇ ಹೊರತು ಕೆಟ್ಟ ರೀತಿಯದ್ದಲ್ಲ. ನೀನು ಯಾವುದೂ ಒಂದು ದೊಡ್ಡ ಅಪರಾಧದಲ್ಲಿ ಸಿಕ್ಕಿಕೊಂಡಿದ್ದೀಯ ಎಂದು ಕೇಳಿಬಂತು.

ಆದರೆ ಅದು ನಿಜವೋ ಸುಳ್ಳೋ ಎಂಬುದು ನನಗೆ ಗೊತ್ತಿಲ್ಲ. ನಿನ್ನಿಂದ ಅಂತಹ ಕೆಲಸ ಸಾಧ್ಯವೇ ಇಲ್ಲ ಎಂದು ನಾನು ವಾದಿಸಿದೆ. ನೀನು ಎಷ್ಟೋ ಕಾಲದಿಂದ ನನ್ನ ಗೆಳೆಯನಾಗಿದ್ದೀಯ. ನಿನ್ನ ವಿಚಾರವೆಲ್ಲಾ ನನಗೆ ಗೊತ್ತು. ಕನಸಿನಲ್ಲಿಯೂ ಇಂಥ ಅಪರಾಧ ಮಾಡುವುದಿಲ್ಲ ಎಂದು ನಿನ್ನನ್ನು ಸಮರ್ಥಿಸಿ ಮಾತನಾಡಿದೆ. ಈಗ ನನಗೆ ಆಶ್ಚರ್ಯವಾಗುತ್ತೆ. ಖಂಡಿತ ನಿನ್ನನ್ನು ಪೂರ್ತಿಯಾಗಿ ಅರಿತಿದ್ದೇನೆಯೇ? ಈ ಪ್ರಶ್ನೆಗೆ ಉತ್ತರವನ್ನು, ನಿನ್ನಾತ್ಮವನ್ನು ಪರೀಕ್ಷಿಸಿದ ಮೇಲೆಯೇ ಕೊಡಲು ಸಾಧ್ಯ."

"ನನ್ನಾತ್ಮವನ್ನು ನೋಡಬೇಕೆಂದಿರುವೆಯಾ?" ಎಂದು ಕಿರುಚಿ, ದಿಢೀರನೆ ಸೋಫಾದಿಂದ ಮೇಲೆದ್ದ. ಮುಖ ಬಿಳುಚಿಕೊಂಡಿತ್ತು. "ಹೌದು" ನಿನ್ನಾತ್ಮವನ್ನು ಪರೀಕ್ಷಿಸಲೇ ಬೇಕು" ಎಂದು ಗಂಭೀರವಾಗಿ ಹೇಳಿದ "ಆದರೆ ಅದು ಸಾಧ್ಯವಾಗುವುದೋ ಇಲ್ಲವೋ ದೇವರೊಬ್ಬನಿಗೆ ಮಾತ್ರವೇ ಸಾಧ್ಯವಾಗಬಹುದು" ಡೋರಿಯನ್ ವಿಕಟನಾಗಿ ನಕ್ಕ! "ನೋಡುವಿಯಂತೆ ಈ ದಿನ ರಾತ್ರಿ ನಿನಗೆ ನನ್ನ ಆತ್ಮ ದರ್ಶನ ಮಾಡಿಸುತ್ತೇನೆ" ಎಂದು ಹೇಳುತ್ತಾ ಮೇಜಿನ ಮೇಲಿದ್ದ ಲ್ಯಾಂಪನ್ನು ಕೈಗೆತ್ತಿಕೊಂಡು "ಬಾ ನೀನೇ ನಿನ್ನ ಕೈಯಾರೆ ಸೃಷ್ಟಿಸಿದ್ದನ್ನು ನೋಡುವಿಯಂತೆ. ಹೌದು ನೀನ್ಯಾಕೆ ನೋಡಬಾರದು. ನೋಡಲೇಬೇಕು! ನೋಡಿದ ಮೇಲೆ ಅದರ ಬಗ್ಗೆ, ನೀನು ನೋಡಿದ್ದೆಲ್ಲವನ್ನೂ ನೀನು ಇಷ್ಟಪಟ್ಟಲ್ಲಿ ಎಲ್ಲಿರಿಗೂ ವಿವರಿಸಿ ಹೇಳಬಹುದು ಕೂಡಾ! ನೀನು ಹೇಳಿದರೂ ಯಾರೂ ನಂಬುವುದಿಲ್ಲ. ಹಾಗೆ ನೋಡಿದರೆ, ನನ್ನನ್ನು ಇನ್ನಷ್ಟು ಇಷ್ಟಪಡುತ್ತಾರೆ: ಪ್ರೀತಿಸುತ್ತಾರೆ. ಈ ಕಾಲ ಎಂಥಾದ್ದು ಅಂತ ನಿನಗಿಂತ ನನಗೇ ಚೆನ್ನಾಗಿ ಗೊತ್ತು. ತುಂಬಾ ಮಾತಾಡಿದ್ದೀಯ, ದಣಿದಿದ್ದೀಯ ಭ್ರಷ್ಟತೆಯ ಬಗ್ಗೆ ದೊಡ್ಡ ಉಪನ್ಯಾಸವನ್ನೇ ಕೊಟ್ಟಿದ್ದೀಯ. ಸಾಕು. ಈಗ ಅದನ್ನು ಮುಖಾಮುಖಿ ನೋಡುವಿಯಂತೆ."

ಅವನ ಒಂದೊಂದು ಮಾತಿನಲ್ಲಿಯೂ ಅಹಂಕಾರ ಎದ್ದು ಕಾಣುತ್ತಿತ್ತು. ಉದ್ಧಟನಂತೆ ನೆಲಕ್ಕೆ ಕಾಲು ಝಾಡಿಸಿದ. ಅವನಿಗೆ ಎಲ್ಲಿಲ್ಲದ ಸಂತೋಷವುಂಟಾಯಿತು. ಇಲ್ಲಿಯವರೆಗೆ ಭಾವಚಿತ್ರದ ರಹಸ್ಯವನ್ನು ತಾನೊಬ್ಬನೇ ಅರಿತು ಅನುಭವಿಸಿದ್ದು, ಈಗ ಮತ್ತೊಬ್ಬರ ಜೊತೆ ಹಂಚಿಕೊಳ್ಳುತ್ತಿರುವುದು ಇನ್ನಷ್ಟು ಸಂತೋಷಕ್ಕೆ ದಾರಿಮಾಡಿತು. ಇದೆಲ್ಲಕ್ಕೂ ಕಾರಣ ಈ ಕಲಾವಿದನೇ! ಪಾಪದ ಹೊರೆಯ ಯಾತನೆಯ ಕ್ಷಣಗಳು ನೆನಪಾದವು. ಬೇಸಿಲ್‌ನ ತೀರಾ ಹತ್ತಿರಕ್ಕೆ ಬಂದ. ಕಣ್ಣು ಮಿಟುಕಿಸದೆ, ಅವನ ಕಣ್ಣಲ್ಲಿ ಕಣ್ಣಿಟ್ಟು ನೋಡಿದ. ನನ್ನ ಆತ್ಮವನ್ನು ತೋರಿಸುತ್ತೇನೆ. ದೇವರಿಗೆ ಮಾತ್ರ ನೋಡಲು ಸಾಧ್ಯವೆಂದದ್ದನ್ನು ಈಗ ನೀನೇ ಖುದ್ದಾಗಿ ನೋಡುವಿಯಂತೆ. ಬೇಸಿಲ್ ಬೆಚ್ಚಿದ "ನೀನು ಮಾಡುತ್ತಿರುವುದು ಮೂರ್ಖ ಕೆಲಸ. ಹೀಗೆಲ್ಲ ಮಾತಾಡಬಾರದು. ಅವು ಕೇಳುವಂತಹ ಮಾತುಗಳೇ ಅಲ್ಲ. ಅವುಗಳಿಗೆ ಅರ್ಥವೂ ಇಲ್ಲ."

"ಹಾಗಂತ ನೀನು ಭಾವಿಸುತ್ತೀಯೇನು?" ಎಂದು ವಿಕಟವಾಗಿ ನಕ್ಕ.

"ನನಗೂ ಗೊತ್ತು. ಇವತ್ತು ರಾತ್ರಿ ನಾನು ಹೇಳಿದ್ದೆಲ್ಲವೂ ನಿನ್ನ ಒಳ್ಳೆದಕ್ಕಾಗಿ. ಯಾವಾಗಲೂ ನಾನು ನಿನ್ನ ಆತ್ಮೀಯ ಗೆಳೆಯ"

"ನನ್ನನ್ನು ಮುಟ್ಟಬೇಡ"

"ನಿನಗೆ ಏನು ಹೇಳಬೇಕೆಂದಿದೆಯೋ ಹೇಳಿ ಮುಗಿಸು."

ಬೇಸಿಲ್‌ನ ಮೊಗದಲ್ಲಿ ನೋವಿನ ಎಳೆ ಕಾಣಿಸಿತು. ಅಸಹನೀಯ ಮರುಕ ಉಕ್ಕಿ ಹರಿಯಿತು. ಇಷ್ಟಕ್ಕೂ ಅವನ ಬದುಕಿನಲ್ಲಿ ಅತಿಕ್ರಮ ಪ್ರವೇಶ ಮಾಡುವ ಹಕ್ಕು ನನಗೇನಿದೆ. ಅಲ್ಲದೆ ಪಾಪ! ಅವನ ಬಗ್ಗೆ ನಡೆದ ಅಪಪ್ರಚಾರದಿಂದ ಅವನೆಷ್ಟು ನೊಂದಿರಬೇಕು! ಎಂದುಕೊಳ್ಳುತ್ತಾ ನೇರಾಗಿ ಬೆಂಕಿಗೂಡಿನ ಮುಂದೆ ಹೋಗಿ ನಿಂತು, ಉರಿಯತ್ತಿರುವ ಕಟ್ಟಿಗೆ ತುಂಡುಗಳನ್ನು ನೋಡುತ್ತಿದ್ದ.

"ನಿನಗಾಗಿ ಕಾಯುತ್ತಿದ್ದೇನೆ ಬೇಸಿಲ್" ಬೇಸರದಿಂದ ಹೇಳಿದ.

ಬೇಸಿಲ್ ಅವನತ್ತ ತಿರುಗಿ "ನೋಡು ನಾನು ನಿನಗೆ ಹೇಳೋದೇನೊಂದ್ರೆ, ನಿನ್ನ ಬಗ್ಗೆ ಹರಿದಾಡಿದ ಆರೋಪಗಳು ಸತ್ಯ ಅಲ್ಲ ಅನ್ನುವುದನ್ನು ನನಗೆ ನಿರೂಪಿಸು. ಏನೇನಾಯ್ತು ಅನ್ನೋದನ್ನೆಲ್ಲ ಮೊದಲಿಂದ ಕಡೆತನಕ ವಿವರಿಸು. ನಾನು ನಿನ್ನನ್ನು ನಂಬುತ್ತೇನೆ. ಅದನ್ನೆಲ್ಲ ನಿರಾಕರಿಸು ಡೋರಿಯನ್! ನಿರಾಕರಿಸು! ನಾನು ಎಷ್ಟು ಸಂಕಟಪಡುತ್ತಿದ್ದೇನೆ, ಕಾಣಿಸುತ್ತಿಲ್ಲವೇನು? ನಿನ್ನ ದಮ್ಮಯ್ಯ ಅಂತೀನಿ, ನೀನು ಕೆಟ್ಟವನು, ಭ್ರಷ್ಟ, ನಾಚಿಕೆಗೆಟ್ಟವನು ಎಂಬುದನ್ನು ಮಾತ್ರ ಒಪ್ಪಿಕೊಳ್ಳಬೇಡ"

ಡೋರಿಯನ್ ಗ್ರೇ ಮುಗುಳ್ನಕ್ಕ ತುಟಿಯ ಮೇಲೆ ತಿರಸ್ಕಾರದ ಛಾಯೆ ಇತ್ತು. "ಮೇಲೆ ಹೋಗೋಣ ಬಾ. ಅಲ್ಲಿ ನನ್ನ ದಿನಚರಿ ಇದೆ. ಒಂದೊಂದು ದಿನವೂ ಒಂದೊಂದು ಕ್ಷಣವೂ ನನ್ನ ಬದುಕಿನಲ್ಲಿ ನಡೆದದ್ದನ್ನೆಲ್ಲಾ ಬರೆದಿರಿಸಿದ್ದೇನೆ. ಆ ಕೋಣೆಯಿಂದ ಅದು ಹೊರಗೆ ಬರೋದೇ ಇಲ್ಲ – ನೀನು ಬೇಕಾದರೆ ಅದನ್ನು ನೋಡಬಹುದು. ನನ್ನ ಜೊತೆ ಬಾ ತೋರಿಸುತ್ತೇನೆ."

"ನೀನು ಬಾ ಎಂದರೆ ಬರುತ್ತೇನೆ ಡೋರಿಯನ್, ನನ್ನ ಟ್ರೈನ್ ತಪ್ಪಿ ಹೋಗಿದೆ. ಇರಲಿ ಬಿಡು. ಅದೇನು ದೊಡ್ಡ ಸಮಸ್ಯೆಯಲ್ಲ, ನಾಳೆ ಬೇಕಾದರೂ ಹೋಗಬಹುದು. ಆದರೆ ಈ ರಾತ್ರಿ ನನ್ನ ಕೈಯಲ್ಲಿ ಏನನ್ನೂ ಓದಿಸಬೇಡ. ಏನಿದ್ದರೂ ನನ್ನ ಪ್ರಶ್ನೆಗೆ ಉತ್ತರ ಮಾತ್ರ ಕೊಡು ಸಾಕು."

ಮೇಲೆ ಹೋದ ಮೇಲೆ ಉತ್ತರ ಸಿಗುತ್ತೆ ಇಲ್ಲಿ ಕೊಡೋಕೆ ಆಗೊಲ್ಲ. ನೀನು ತುಂಬಾ ಓದಬೇಕಾಗೋದು ಇಲ್ಲ."

❖

# ಅಧ್ಯಾಯ - 13

ಇಬ್ಬರೂ ಮೆಟ್ಟಿಲೇರಿ ನಿಧಾನ ಹೆಜ್ಜೆಗಳನ್ನಿಡುತ್ತಾ ಸಾಗಿದರು. ಕೈಯಲ್ಲಿದ್ದ ಲಾಂದ್ರ ಗೋಡೆಗಳ ಮೇಲೆ ಮೆಟ್ಟಿಲುಗಳ ಮೇಲೆ ನೆರಳಿನ ಬಿಂಬಗಳನ್ನು ಚೆಲ್ಲುತ್ತಿತ್ತು. ಗಾಳಿಯಿಂದಾಗಿ ಕಿಟಕಿ ಬಾಗಿಲುಗಳು ಸದ್ದುಮಾಡುತ್ತಿದ್ದವು.

ಮೇಲಿನ ಕಡೆಯ ಮೆಟ್ಟಿಲನ್ನು ಏರಿ ಕೋಣೆಯಿದ್ದಲ್ಲಿಗೆ ಹೋದರು. ಡೋರಿಯನ್ ಗ್ರೇ ಜೇಬಿನಿಂದ ಬೀಗದ ಕೈ ತೆಗೆದು ಬೀಗದೊಳಗೆ ಇರಿಸಿ ತಿರುಗಿಸಿದ. "ಬೇಸಿಲ್ ನೋಡಲೇ ಬೇಕೆಂಬ ಹಠವೇ ನಿನ್ನದು?"

"ಹೌದು"

"ನನಗೆ ಖುಷಿಯಾಯಿತು" ನಗುತ್ತಾ ಉತ್ತರಿಸಿದ. "ಪ್ರಪಂಚದಲ್ಲಿ ನನ್ನ ಬಗ್ಗೆ ಎಲ್ಲವನ್ನೂ ತಿಳಿದುಕೊಳ್ಳಬೇಕೆನ್ನುವವನು ನೀನೊಬ್ಬನೇ. ನನ್ನ ಇಷ್ಟೊಂದೆಲ್ಲ ಆಲೋಚಿಸುವುದಕ್ಕೆ ಬದಲಾಗಿ, ನನ್ನ ಜೊತೆ ಏನೆಲ್ಲ ಮಾಡಬಹುದಿತ್ತು" ಎಂದು ಮಾತನ್ನು ಮುಂದುವರೆಸಿ ಹೇಳಿದ. ಕೈಯಲ್ಲಿ ಲಾಂದ್ರ ಹಿಡಿದು ಕೋಣೆಯೊಳಗೆ ಪ್ರವೇಶಿಸಿದ. ಗಾಳಿ ಒಳನುಗ್ಗಿದ್ದರಿಂದ ಲಾಂದ್ರದಲ್ಲಿ ಉರಿಯುತ್ತಿದ್ದ ಜ್ವಾಲೆ ಫಡಫಡಿಸಿತು. ಒಂದು ಕ್ಷಣ ಹೆದರಿದ. ನೀನು ಒಳಗೆ ಬಂದು ಬಾಗಿಲು ಮುಚ್ಚು ಎಂದು ಹೇಳಿ ಲಾಂದ್ರವನ್ನು ಮೇಜಿನ ಮೇಲೆ ಇರಿಸಿದ.

ಬೇಸಿಲ್ ತಬ್ಬಿಬ್ಬಾಗಿ ಕೋಣೆಯ ಸುತ್ತ ಕಣ್ಣಾಡಿಸಿದ. ಎಷ್ಟೋ ವರ್ಷಗಳಿಂದ ಯಾರೂ ಬಳಸಿದಂಗೆ ಕಾಣಿಸಲಿಲ್ಲ. ಹಳೆಯದಾದ ಕಸೂತಿ ಮಾಡಿದ ಪರದೆಗಳು, ಪರದೆಯಿಂದ ಮುಚ್ಚಿದ್ದ ದೊಡ್ಡ ಸೈಜಿನ ಚಿತ್ರಪಟ, ಖಾಲಿ ಖಾಲಿಯಾಗಿ ಬಿದ್ದಿದ್ದ ಪುಸ್ತಕಗಳ ಬೀರು ಹರಡಿ

ಕೊಂಡು ಬಿದ್ದಿದ್ದವು. ಡೋರಿಯನ್ ಗ್ರೇ ಅರ್ಧಂಬರ್ಧ ಉರಿದಿದ್ದ ಕ್ಯಾಂಡಲನ್ನು ಹಚ್ಚುತ್ತಿರುವಾಗ, ಬೇಸಿಲ್‌ನ ಕಣ್ಣಿಗೆ ಎಲ್ಲೆಲ್ಲು ಧೂಳು ತುಂಬಿದ್ದ ಕೋಣೆ ತೂತುಗಳಿಂದ ತುಂಬಿದ್ದ ಹಳೆಯದಾದ ನೆಲಹಾಸು ಕಾಣಿಸಿತು. ಒಂದು ಇಲಿ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡುತ್ತಿತ್ತು.

"ಹೂಂ. ಹಾಗಾದರೆ, ದೇವರೇ ಆತ್ಮವನ್ನು ನೋಡುತ್ತಾನೆ ಎನ್ನುತ್ತೀಯಾ? ಹಾಗಾದರೆ ಪರದೆಯನ್ನು ಸರಿಸು, ನನ್ನಾತ್ಮ ನಿನಗೇ ಕಾಣಿಸುತ್ತದೆ."

ಅವನ ದನಿಯಲ್ಲಿ ಏಕಕಾಲಕ್ಕೆ ವ್ಯಂಗ್ಯ, ಕ್ರೌರ್ಯ ಎರಡೂ ಬೆರೆತಿದ್ದವು.

"ನೀನೊಬ್ಬ ಹುಚ್ಚ! ನನ್ನ ಜೊತೆ ಆಟವಾಡುತ್ತಿದ್ದೀಯ ಹೇಗೆ?" ಎಂದು ಸಿಟ್ಟಿನಿಂದ ಹೇಳಿದ.

"ನಾನು ಹೇಳಿದ ಹಾಗೆ ನೀನು ಮಾಡುವುದಿಲ್ಲ. ಹೌದಲ್ಲ? ಹಾಗಾದರೆ ನಾನೇ ಪರದೆಯನ್ನು ಸರಿಸುತ್ತೇನೆ" ಎಂದು ಹೇಳಿ ಡೋರಿಯನ್ ಮೇಲೆ ಕಬ್ಬಿಣದ ಸರಪಳಿಯಿಂದ ಇಳಿ ಬಿಟ್ಟಿದ್ದ ಭಾವಚಿತ್ರದ ಮೇಲಿನ ಪರದೆಯನ್ನು ಗಟ್ಟಿಯಾಗಿ ಹಿಡಿದೆಳೆದ. ಪರದೆಯನ್ನು ನೆಲದ ಮೇಲೆ ಒಗೆದ. ಚಿತ್ರವನ್ನು ನೋಡಿದ ಕ್ಷಣದಲ್ಲಿಯೇ ಭಯಾಶ್ಚರ್ಯಗಳ ಉದ್ಗಾರ, ಕಲಾವಿದನ ಬಾಯಿಂದ ಹೊಮ್ಮಿತು. ಮಂದ ಬೆಳಕಿನಲ್ಲಿ ಭಾವಚಿತ್ರದಲ್ಲಿನ ಮುಖ ತನ್ನತ್ತ ದುರುಗುಟ್ಟಿ ನೋಡುತ್ತಿತ್ತು. ಆ ಮುಖದಲ್ಲಿ ವ್ಯಕ್ತವಾದ ಭಾವ ನೋಡುತ್ತಿದ್ದಂತೆ ಅಸಹ್ಯವೆನಿಸಿತು. ದೇವರೇ ನಾನು ನೋಡುತ್ತಿರುವುದು ನಿಜವಾಗಿಯೂ ಡೋರಿಯನ್ನನ ಮುಖವೇ? ಅಲ್ಲಿ ಕಾಣಿಸಿದ ಬೀಭತ್ಸತೆ ಪೂರ್ತಿಯಾಗಿ ಸೌಂದರ್ಯವನ್ನು ಹಾಳು ಮಾಡಿರಲಿಲ್ಲ. ಕೂದಲಿನ ಚಿನ್ನದ ಬಣ್ಣ ತುಟಿಗಳ ಮೇಲಿನ ಗುಲಾಬಿ ಬಣ್ಣ ಕಣ್ಣಲ್ಲಿನ ಮೋಹಕ ನೀಲಿ ಬಣ್ಣ, ಮೂಗು ಕತ್ತು ಮುಂತಾದೆಡೆಗಳಲ್ಲಿನ ರೇಖೆಗಳು – ಹೆಚ್ಚು ಕಡಿಮೆ ಹಾಗೇ ಉಳಿದಿದ್ದವು. ನಿಜ ಅವನು ಡೋರಿಯನ್ ಎಂಬುದರಲ್ಲಿ ಸಂದೇಹವಿರಲಿಲ್ಲ. ಇದನ್ನು ಯಾರು ಮಾಡಿದ್ದು! ತಾನೇ ಅಲ್ಲವೇ! ಅದಕ್ಕೆ ಫ್ರೇಮು ಹಾಕಿದ್ದು ತಾನೇ ಅಲ್ಲವೇ?... ಡೋರಿಯನ್ ಗ್ರೇ ನ ಕೈಲಿದ್ದ ಲಾಂದ್ರವನ್ನು ಸೆಳೆದುಕೊಂಡು ಚಿತ್ರಪಟದಲ್ಲಿನ ಮುಖಕ್ಕೆ ಹಿಡಿದ. ಉದ್ದಕ್ಕೂ ಪರಿಶೀಲಿಸಿದ. ಚಿತ್ರಪಟದ ಕೆಳಗೆ ಮೂಲೆಯೊಂದರಲ್ಲಿ ಕೆಂಪು ಅಕ್ಷರಗಳಲ್ಲಿ ತನ್ನದೇ ಹೆಸರು! ಇದೆಂಥ ವ್ಯಂಗ್ಯ! ಈಗ ಕಾಣುತ್ತಿರುವಂತೆ ತಾನು ಮಾಡಿದಾಗ ಇರಲಿಲ್ಲ. ಆದರೂ ಅದು ತಾನು ಮಾಡಿದ್ದೇ. ಅವನಿಗೆ ಗೊತ್ತು. ತನ್ನಲ್ಲಿ ಹರಿಯುತ್ತಿದ್ದ ಬೆಚ್ಚನೆಯ ರಕ್ತ ಹೆಪ್ಪುಗಟ್ಟುತ್ತಿರುವ ಅನುಭವವಾಯಿತು. ಏನಿದರ ಅರ್ಥ? ಅದೇಕೆ ಬದಲಾಗಿದೆ. ಖಾಯಿಲೆ ಬಿದ್ದವನಂತೆ, ಡೋರಿಯನ್ ಗ್ರೇಯನ್ನು ನೋಡಿದ. ಗಂಟಲು ಒಣಗಿತ್ತು. ಮಾತೇ ಬರುತ್ತಿರಲಿಲ್ಲ. ಹಣೆ ಮೇಲೆ ಮುಟ್ಟಿ ನೋಡಿಕೊಂಡ. ಅಂಟಂಟಾದ ತಣ್ಣನೆಯ ಬೆವರು!

ಡೋರಿಯನ್ ಗ್ರೇ ಬೀರುವಿಗೆ ಒರಗಿಕೊಂಡು ಮುಸಿ ಮುಸಿ ನಗುತ್ತ, ಬೇಸಿಲ್ ನನ್ನು ನಾಟಕದಲ್ಲಿ ಪಾತ್ರವೊಂದು ಅಭಿನಯಿಸುವದನ್ನು ಏಕಾಗ್ರತೆಯಿಂದ ನೋಡುವಂತೆ ನೋಡುತ್ತಿದ್ದ. ಕಣ್ಣುಗಳಲ್ಲಿ ದಃಖದ ಛಾಯೆಯಾಗಲಿ, ಗೆಲುವಿನ ಛಾಯೆಯಾಗಲಿ ಇರಲಿಲ್ಲ. ಆದರೆ ವಿಜಯಗರ್ವದ ನೆರಳಿತ್ತು ತನ್ನ ಕೋಟಿಗೆ ಸಿಕ್ಕಿಸಿದ್ದ ಗುಲಾಬಿಯನ್ನು ತೆಗೆದುಕೊಂಡು ಅದರ ಸುಗಂಧವನ್ನು ಆಸ್ವಾದಿಸುತ್ತಿದ್ದಂತೆ ನಟಿಸಿದ.

"ಏನಿದೆಲ್ಲದರ ಅರ್ಥ ಡೋರಿಯನ್" ಎಂದು ತೀಕ್ಷ್ಣ ಧ್ವನಿಯಲ್ಲಿ ಪ್ರಶ್ನಿಸಿದ. ಆ ಧ್ವನಿ ಕೀರಲು ಧ್ವನಿಯಾಗಿ ಅವನ ಕಿವಿಗಳಲ್ಲಿ ಅನುರಣಿಸಿತು.

"ವರ್ಷಗಳ ಹಿಂದೆ ಮೊದಲ ಬಾರಿ ನಿನ್ನನ್ನು ಭೇಟಿಯಾದಾಗ ನಾನು ಹುಡುಗನಾಗಿದ್ದೆ," ಎಂದು ಹೇಳುತ್ತಾ ಕೈಲಿದ್ದ ಗುಲಾಬಿಯನ್ನು ಹೊಸಕಿ ಎಸೆದ. ನೀನು ನನ್ನನ್ನು ಅತಿಯಾಗಿ ಹೊಗಳಿ ಹೊಗಳಿ ರೂಪಗರ್ವಿಯಾಗುವಂತೆ ಮಾಡಿದೆ. ಅದೇ ಸಮಯದಲ್ಲಿ ನಿನ್ನ ಗೆಳೆಯನೊಬ್ಬನಿಗೆ ನನ್ನ ಪರಿಚಯ ಮಾಡಿಸಿದೆ. ಅವನು ಯವ್ವನದ ಅದ್ಭುತಗಳನ್ನು ವಿವರಿಸಿ ತಿಳಿಸಿದ. ನೀನು ನನ್ನ ಭಾವಚಿತ್ರ ಮಾಡಿ ನನ್ನ ಅದ್ಭುತ ಸೌಂದರ್ಯವನ್ನು ನನಗೇ ತೋರಿಸಿಕೊಟ್ಟೆ. ಯಾವುದೋ ಹುಚ್ಚು ಆವೇಶದ ಕ್ಷಣಗಳಲ್ಲಿ, ಅದು ಸರಿಯೋ ತಪ್ಪೊ ನನ್ನಲ್ಲಿ ಒಂದು ಬಯಕೆ ಮೂಡಿತು.... ನೀನು ಅದನ್ನು ಪ್ರಾರ್ಥನೆಯೆಂದಾದರೂ ಕರೆ.....

"ನೆನಪಿದೆ ಬಹಳ ಚೆನ್ನಾಗಿ ನೆನಪಿದೆ ಇಲ್ಲ. ಅದು ಮಾತ್ರ ಸಾಧ್ಯವಿಲ್ಲ. ಈ ಕೋಣೆ ಮಂಜಿನಿಂದಾಗಿ ತೇವಗೊಂಡಿದೆ. ನಾನು ಬಳಸಿದ ಬಣ್ಣಗಳಲ್ಲಿನ ರಾಸಾಯನಿಕಗಳಲ್ಲಿ ಏನೋ ಬದಲಾವಣೆಯಾಗಿದೆ. ಇಲ್ಲದಿದ್ದರೆ ಹೀಗೆಲ್ಲ ಆಗುವುದು ಸಾಧ್ಯವೇ ಇಲ್ಲ.

"ಯಾವುದು ತಾನೇ ಅಸಾಧ್ಯ" ಎಂದು ಹೇಳುತ್ತಾ ಕಿಟಕಿಯ ಬಳಿ ನಡೆದು ತಣ್ಣನೆಯ ಗಾಜಿನ ಬಾಗಿಲುಗಳಿಗೆ ಆತುಕೊಂಡು ನಿಂತ.

"ಚಿತ್ರಪಟವನ್ನು ಹಾಳು ಮಾಡಿದೆ ಎಂದು ಹೇಳಿದ್ದೆಯಲ್ಲ?"

"ಇಲ್ಲ. ನಾನು ಅದನ್ನು ಹಾಳು ಮಾಡಲಿಲ್ಲ. ಆದರೆ ಅದೇ ನನ್ನನ್ನು ಹಾಳು ಮಾಡಿತು."

"ಇದು ನಾನು ಮಾಡಿದ್ದು ಅಂತ ಅನಿಸುತ್ತಿಲ್ಲ"

"ನಿನ್ನ ವಿಚಾರಗಳು ಅದರಲ್ಲಿ ಕಾಣಿಸುತ್ತಿಲ್ಲವೇ?"

"ನನ್ನ ವಿಚಾರಗಳು?"

"ಹೌದು ನೀನು ಹೇಳಿದ್ದೇ"

"ನನ್ನ ವಿಚಾರಗಳಲ್ಲಿ ಯಾವುದೇ ಕೇಡು ಇರಲಿಲ್ಲ. ನಾಚಿಕೆಪಡುವಂಥಾದ್ದೂ ಇರಲಿಲ್ಲ. ನೀನು ನನಗೆ ಅತ್ಯಂತ ಸೂಕ್ತ ವ್ಯಕ್ತಿ ಎನಿಸಿದ್ದೆ. ಇಂಥವನನ್ನು ಹಿಂದೆಂದೂ ಕಂಡಿರಲಿಲ್ಲ ಎನಿಸಿತ್ತು. ಈ ಮುಖ ಒಂದು ವ್ಯಂಗ್ಯ ವಿಡಂಬನೆ ಎಂಬಂತೆ ಕಾಣಿಸುತ್ತಿದೆ."

"ಇದು ನನ್ನ ಮುಖವಲ್ಲ ನನ್ನಾತ್ಮ"

"ದೇವರೇ! ನಾನೆಂಥದ್ದನ್ನು ಆರಾಧಿಸಿದ್ದೇನೆ. ಇದರಲ್ಲಿ ಕಾಣುತ್ತಿರುವುದು ದುಷ್ಟಶಕ್ತಿಯ ಕಣ್ಣುಗಳು!"

"ಪ್ರತಿಯೊಬ್ಬರಲ್ಲಿಯೂ ಸ್ವರ್ಗ ನರಕಗಳು ಇರುತ್ತವೆ ಬೇಸಿಲ್" ಎಂದು ವಿಷಾದದ ದನಿಯಲ್ಲಿ ಹೇಳಿದ.

ಹಾಲ್ ವಾರ್ಡ್ ಮತ್ತೆ ಚಿತ್ರಪಟದತ್ತ ತಿರುಗಿ ಸೂಕ್ಷ್ಮವಾಗಿ ಗಮನಿಸಿದ. "ಓ ದೇವರೇ! ಇದೆಲ್ಲ ನಿಜ! ಅಚ್ಚರಿಯಿಂದ ಉದ್ಗರಿಸಿದ. ನಿನ್ನ ಜೀವನದಲ್ಲಿ ಹೀಗೆಲ್ಲ ಆಗಿದೆಯೇ? ನನಗನಿಸುತ್ತೆ ಜನ ನಿನ್ನ ಬಗ್ಗೆ ಆಡಿಕೊಳ್ಳುವುದಕ್ಕಿಂತ ಹೆಚ್ಚಾಗಿ ನೀನು ಅಧಃಪತನಕ್ಕಿಳಿದಿದ್ದೀಯ?" ಮತ್ತೆ ಭಾವಚಿತ್ರದ ಮುಖಕ್ಕೆ ಬೆಳಕು ಹಿಡಿದು ನೋಡಿದ. ಸಣ್ಣ ಸಣ್ಣ ಸೂಕ್ಷ್ಮ ಬದಲಾವಣೆಗಳನ್ನೂ ಗಮನಿಸಿದ. ಮೇಲುನೋಟಕ್ಕೆ ಎಲ್ಲವೂ ಇದ್ದಂತೆ ಇತ್ತಾದರೂ ಒಳಗಿನಿಂದ ವಿಕೃತಿ ಮತ್ತು ಬೀಭತ್ಸತೆಗಳು ಹೊಮ್ಮುತ್ತಿದ್ದವು. ಪಾಪದ ಕುಷ್ಠರೋಗಗಳು ಕ್ರಮೇಣ ಒಳಗಿನಿಂದ ತಿಂದು ತಿಂದು ಟೊಳ್ಳು ಮಾಡುತ್ತಿದ್ದವು. ನೀರಿನಲ್ಲಿ ಬಿದ್ದು ಕೊಳೆತುನಾರುವ ಶವಕ್ಕಿಂತಲೂ ಹೆಚ್ಚಾಗಿ ಕೊಳೆತುಹೋಗಿತ್ತು ಆತ್ಮ.

ಅವನ ಕೈ ನಡುಗಿತ್ತು. ಕೈಲಿದ್ದ ದೀಪ ಕೆಳಗೆ ಬಿದ್ದು ಫಡಫಡಿಸಿತು. ಕಾಲಿನಿಂದ ಉಜ್ಜಿ ಆರಿಸಿದ. ನಂತರ ಕುರ್ಚಿಯಲ್ಲಿ ಧಸಕ್ಕೆಂದು ಕುಕ್ಕರಿಸಿದ. ಎರಡೂ ಕೈಗಳಲ್ಲಿ ಮುಖ ಮುಚ್ಚಿಕೊಂಡ.

"ಡೋರಿಯನ್ ಎಂಥ ಪಾಠ! ಎಂಥ ಭಯಂಕರ ಪಾಠ!"

ಅದಕ್ಕೆ ಉತ್ತರ ಬರಲಿಲ್ಲ. ಆದರೆ ಕಿಟಕಿ ಕಡೆ ಮುಖ ಮಾಡಿಕೊಂಡು ಡೋರಿಯನ್ ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಕೇಳಿಸಿತು. "ಪ್ರಾರ್ಥಿಸು! ಪ್ರಾರ್ಥಿಸು ಡೋರಿಯನ್. ಹುಡುಗತನದಲ್ಲಿ ನಮಗೆ ಕಲಿಸಿದ ಪಾಠವಾದರೂ ಏನು?" ಪ್ರಲೋಭನೆಗಳಿಗೆ ದೂಡಬೇಡ? ನಮ್ಮ ಪಾಪಗಳನ್ನು ಕ್ಷಮಿಸು ಎಂದಲ್ಲವೆ? ಬಾ ಇದನ್ನು ನಾವಿಬ್ಬರೂ ಮತ್ತೊಮ್ಮೆ ಈ ವಾಕ್ಯಗಳನ್ನು ಒಟ್ಟಿಗೆ ಹೇಳೋಣ. ನಿನ್ನ ಪಶ್ಚಾತ್ತಾಪಕ್ಕೆ ಉತ್ತರ ಸಿಗುತ್ತೆ. ನಿನ್ನನ್ನು ಬಹಳವಾಗಿ ಆರಾಧಿಸಿದೆ. ಅದಕ್ಕಾಗಿ ನನಗೆ ಶಿಕ್ಷೆಯಾಯಿತು. ನೀನು ನಿನ್ನನ್ನೇ ಆರಾಧಿಸಿಕೊಂಡೆ. ಇಬ್ಬರಿಗೂ ಸರಿಯಾದ ಶಿಕ್ಷೆ ಆಗಿದೆ."

ಡೋರಿಯನ್ ನಿಧಾನವಾಗಿ ತಿರುಗಿದ, ಕಂಬನಿ ತುಂಬಿದ ಕಣ್ಣುಗಳಿಂದ ಬೇಸಿಲ್ ನನ್ನು ನೋಡಿದ.

"ತುಂಬಾ ತಡವಾಯಿತು ಬೇಸಿಲ್" ಎಂದು ತಡವರಿಸಿ ಹೇಳಿದ.

"ಇಲ್ಲ ಡೋರಿಯನ್, ಇನ್ನೂ ಸಮಯವಿದೆ. ಮೊಣಕಾಲೂರಿ ಪ್ರಾರ್ಥಿಸೋಣ, ಪ್ರಾರ್ಥನೆ ನೆನಪಿಲ್ಲವೆಂದರೆ, ಎಲ್ಲೋ ಒಂದು ಕಡೆ ಓದಿದ ಸಾಲುಗಳನ್ನಾದರೂ ಹೇಳಿಕೊಳ್ಳೊಣ.

"ನಿನ್ನ ಪಾಪಗಳು ಕಪ್ಪಗಿದ್ದರೂ ನಾನು ಅವುಗಳನ್ನು ಮಂಜಿನಷ್ಟು ಬಿಳುಪಾಗಿಸುತ್ತೇನೆ"

ಎಂದು. "ಆ ಶಬ್ದಗಳೆಲ್ಲ ಈಗ ನನಗೆ ಅರ್ಥಹೀನ" "ಶ್ಯ್" ಹಾಗೆಲ್ಲ ಹೇಳ ಬೇಡ. ನಿನ್ನ ಬದುಕಿನಲ್ಲಿ ನೀನು ಸಾಕಷ್ಟು ಕೆಟ್ಟದ್ದನ್ನು ಮಾಡಿದ್ದೀಯ ಆದರೆ ಅವು ನಿನಗೆ ಕಾಣಿಸುತ್ತಲ್ಲವೇ?"

ಡೋರಿಯನ್ ಗ್ರೇ ಚಿತ್ರಪಟದತ್ತ ಕಣ್ಣು ಹಾಯಿಸಿದ. ಇದ್ದಕ್ಕಿದ್ದಂತೆ ಅಸಹನೀಯ ದ್ವೇಷ ಬೇಸಿಲ್ ಹಾಲ್ ವಾರ್ಡ್‌ನತ್ತ ತಿರುಗಿತು. ಚಿತ್ರಪಟ ಅವನ ಕಿವಿಯಲ್ಲಿ ಉಸಿರಿದಂತೆ ಕಾಣಿಸಿದ.

ಒಮ್ಮಲೇ ಅವನೊಳಗೆ ಬೇಟೆಗೆ ಗುರಿಯಾದ, ಪ್ರಾಣಿಯೊಂದು ತನ್ನೆಲ್ಲ ಸಿಟ್ಟನ್ನು ಹೊರ ಚೆಲ್ಲುವಂತೆ ಡೋರಿಯನ್ ಗ್ರೇ ಬೇಸಿಲ್ ಮೇಲೆ ಸೇಡಿನ ಭಾವ ತೋರಿದ. ಅವನ ಬಗ್ಗೆ ಅಸಹ್ಯ ಪಟ್ಟ. ಕ್ರೂರವಾಗಿ ಸುತ್ತಲೂ ನೋಡಿದ. ಪೈಂಟಿಂಗ್ ಮಾಡಿದ್ದ ಬೀರುವಿನ ಮೇಲೆ ಒಂದು ಚಾಕು ಕಾಣಿಸಿತು. ನೆನಪಾಯಿತು ಕೆಲದಿನಗಳ ಹಿಂದೆ ಹಗ್ಗವನ್ನು ತುಂಡು ಮಾಡಲೆಂದು ತಾನೆ ತಂದು ಇರಿಸಿದ್ದ. ಆಮೇಲೆ ಅದನ್ನು ತೆಗೆದುಕೊಂಡು ಹೋಗುವುದನ್ನು ಮರೆತಿದ್ದ. ಹಾಲ್ ವಾರ್ಡ್‌ನನ್ನು ದಾಟಿ ಕೊಂಡು ಮೆಲ್ಲಗೆ ಹೆಜ್ಜೆ ಇಡುತ್ತ ಅದರ ಬಳಿಗೆ ನಡೆದ. ಮೆಲ್ಲಗೆ ಅದನ್ನು ಕೈಗೆತ್ತಿಕೊಂಡು ಬೇಸಿಲ್‌ನ ಹಿಂದಿನಿಂದ ಅವನ ಮೇಲೆ ಆಕ್ರಮಣ ಮಾಡಲು ಮುಂದಾದ. ಬೇಸಿಲ್ ಏನೆಂದು ತಿಳಿಯವಷ್ಟರಲ್ಲಿಯೇ ಡೋರಿಯನ್ ಚಾಕುವನ್ನು ಕಿವಿಯ ಹಿಂಭಾಗಕ್ಕೆ ಚುಚ್ಚಿದ. ತಲೆಯನ್ನು ಟೇಬಲ್ಗೆ ಡಿಕ್ಕಿ ಹೊಡೆಸಿದ. ಮತ್ತೆ ಮತ್ತೆ ಚೂರಿಯಿಂದ ಇರಿಯುತ್ತಲೇ ಹೋದ.

ಕ್ಷೀಣವಾಗಿ ಮುಲುಗಾಟ ಕೇಳಿಸಿತು ಮೂರು ಸಲ ಕೈಯೆತ್ತಿ ತಡೆಯುವಂತೆ ಹೇಳಲು ಪ್ರಯತ್ನಿಸಿದ. ಮತ್ತೆ ಎರಡು ಬಾರಿ ತಿವಿದ. ಆಗ ಬೇಸಿಲ್ ನಲ್ಲಿ ಕದಲಿಕೆ ಕಾಣಿಸಲಿಲ್ಲ. ಆದರೆ ರಕ್ತ ಮೆಲ್ಲಗೆ ಹನಿಸತೊಡಗಿತು. ಇಷ್ಟಾದರೂ ಅವನು ತಲೆಯನ್ನು ಮೇಜಿಗೆ ಒತ್ತಿ ಹಿಡಿದ್ದ. ಚಾಕುವನ್ನು ಮೇಜಿನ ಮೇಲೆ ಎಸೆದ. ಏನನ್ನೋ ಕೇಳಿಸಿ ಕೊಳ್ಳುವಂತೆ ಕಾಣಿಸಿದ. ರಕ್ತ ತೊಟ್ಟಿಕ್ಕುವ ಸದ್ದು ಬಿಟ್ಟರೆ ಬೇರೇನೂ ಕಾಣಿಸಲಿಲ್ಲ. ಬಾಗಿಲು ತೆಗೆದು ಹೊರ ನಡೆದ. ಮನೆ ಬಣಗುಡುತ್ತಿತ್ತು. ಯಾರೂ ಕಾಣಿಸಲಿಲ್ಲ. ಮತ್ತೆ ಕೋಣೆಯೊಳಕ್ಕೆ ಬಂದ, ಕುರ್ಚಿಯಲ್ಲಿ ಕುಳಿತ. ಶವ ಇದ್ದ ಹಾಗೇ ಇತ್ತು. ನೋಡಿದವರಿಗೆ ನಿದ್ದೆ ಮಾಡುತ್ತಿರುವಂತೆ ಕಾಣಿಸುತ್ತಿದ್ದ. ಯಾಕೆಂದರೆ ಕಿವಿಯ ಹಿಂದೆ ಮಾಡಿದ ಗಾಯ, ಒಂದಷ್ಟು ಮಡುಗಟ್ಟಿದ ರಕ್ತ ಬಿಟ್ಟರೆ ಬೇರೆ ಯಾವ ಕುರುಹುಗಳೂ ಇರಲಿಲ್ಲ.

ಎಲ್ಲವೂ ಕ್ಷಣಾರ್ಧದಲ್ಲಿ ಮುಗಿದುಹೋಯಿತು. ಬಾಲ್ಕನಿಯಲ್ಲಿ ಅಡ್ಡಾಡತೊಡಗಿದ. ಕೆಳಗೆ ರಸ್ತೆಯ ಕಡೆ ನೋಡಿದ. ಪೊಲೀಸರು ಗಸ್ತು ತಿರುಗುತ್ತಿದ್ದರು. ಲಾಂದ್ರದ ಬೆಳಕನ್ನು ಹರಿಸಿ, ಶಾಂತವಾಗಿದ್ದ ಮನೆಗಳನ್ನು ಗಮನಿಸಿದ. ಒಬ್ಬಳು ಹೆಂಗಸು ಮಾತ್ರ ಹೊರಗೆ ಬರುತ್ತಾ, ಮತ್ತೆ ಮತ್ತೆ ಹಿಂತಿರುಗಿ ನೋಡುತ್ತಿದ್ದಳು. ಅವಳು ಕರ್ಕಶ ಧ್ವನಿಯಲ್ಲಿ ಹಾಡಲು ಶುರುಮಾಡಿದಾಗ, ಪೊಲೀಸಿನವನು ಅವಳ ಬಳಿಗೆ ಬಂದು ಕಿವಿಯಲ್ಲಿ ಏನೋ ಹೇಳಿದ. ಅವಳು ನಗುತ್ತ ಹೆಜ್ಜೆಹಾಕಿದಳು.

ಮತ್ತೆ ಒಳಬಂದು ನಿಂತನಾದರೂ ಶವದ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಆದದ್ದರ ರಹಸ್ಯ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದರಲ್ಲಿ ಪ್ರಯೋಜನ ಇಲ್ಲವೆಂದು ಅವನಿಗೆ ಅನಿಸಿತು. ಜೀವನದ ಸಂಕಟಗಳು ಎಲ್ಲಾ ಮುಗಿದಂತೆ ಅನಿಸಿ ನಿರಾಳವಾದ. ಅಷ್ಟು ಸಾಕು! ದೀಪ ನೆನಪಾಯಿತು. ನಾಳೆ ಸೇವಕ ಅದರ ಬಗ್ಗೆ ವಿಚಾರಿಸಬಹುದು. ಒಂದು ಕ್ಷಣ ಹಿಂಜರಿದ. ನಂತರ ಸತ್ತವನ ಹಿಂಬದಿಯಿಂದ ಹೋಗಿ ತೆಗೆದುಕೊಂಡ. ಹೆಣವನ್ನು ನೋಡಲೇ ಬಾರದೆಂದುಕೊಂಡರೂ ನೋಡದೆ ಇರಲು ಸಾಧ್ಯವಾಗಲಿಲ್ಲ

ಕೋಣೆಗೆ ಬೀಗ ಹಾಕಿ. ಮೆಲ್ಲನೆ ಇಳಿದುಹೋದ. ಮರದ ಮೆಟ್ಟಿಲಾಗಿದ್ದರಿಂದ ಹೆಜ್ಜೆಯಿಟ್ಟಾಗಲೆಲ್ಲ ನೋವಿನಿಂದ ಮುಲುಗಿದಂತೆ ಕೇಳಿಸಿತು. ಒಂದೆರಡು ಕ್ಷಣ ನಿಂತು ಕೇಳಿಸಿಕೊಂಡ. ಎಲ್ಲವೂ ಪ್ರಶಾಂತವಾಗಿಯೇ ಇತ್ತು. ಅವನಿಗೆ ಕೇಳಿಸಿದ್ದು ಅವನ ಚಪ್ಪಲಿ ಸದ್ದು.

ಲೈಬ್ರರಿ ತಲುಪಿದಾಗ, ಕೋಟು ಮತ್ತು ಹ್ಯಾಟು ಕುರ್ಚಿಯಲ್ಲಿ ಬಿದ್ದಿರುವುದು ಕಾಣಿಸಿತು. ಇವುಗಳನ್ನು ಎಲ್ಲಿಯಾದರೂ ಬಚ್ಚಿಡಬೇಕು ಎಂದುಕೊಂಡ. ತನ್ನ ತರತರಾವರಿ ವೇಷದ ಉಡುಪುಗಳನ್ನು ಇರಿಸಿದ್ದ ಜಾಗದಲ್ಲಿ ಸದ್ಯಕ್ಕೆ ಇರಿಸಿ, ನಂತರ ಸಮಯ ನೋಡಿ ಸುಟ್ಟುಹಾಕಬೇಕು ಎಂದು ಯೋಚಿಸಿದ. ಗಡಿಯಾರ ನೋಡಿಕೊಂಡ. ಎರಡು ಗಂಟೆಗೆ ಇನ್ನೂ ಎರಡು ನಿಮಿಷ ಇತ್ತು.

ಕುಳಿತು ಯೋಚಿಸಲು ತೊಡಗಿದ. ಪ್ರತಿವರ್ಷ ಪ್ರತಿ ತಿಂಗಳು ಇಂಗ್ಲೆಂಡಿನಲ್ಲಿ ಎಷ್ಟೊಂದು ಜನರನ್ನು, ತಾನು ಮಾಡಿದಂಥ ಕೆಲಸಗಳಿಗೆ ನೇಣುಹಾಕುತ್ತಿದ್ದರು. ಯಾಕೋ ಇತ್ತೀಚೆಗೆ ಸಾಲು ಸಾಲು ಕೊಲೆಗಳು ಸಂಭವಿಸುತ್ತಿದ್ದವು. ಧೂಮಕೇತುವೇನಾದರೂ ಭೂಮಿಗೆ ಅಪ್ಪಳಿಸಿರಬೇಕು. ... ಇನ್ನು ತಾನು ಮಾಡಿದ ಕೊಲೆ? ಆಧಾರ ಏನಿದೆ? ಬೇಸಿಲ್ ರಾತ್ರಿ ಹನ್ನೊಂದು ಗಂಟೆಗೆ ಮನೆ ಬಿಟ್ಟಿದ್ದಾನೆ. ಅವನು ಹಿಂತಿರುಗಿ ಬಂದಿರುವುದನ್ನು ಯಾರೂ ನೋಡಿಲ್ಲ. ತುಂಬಾ ಜನ ಕೆಲಸದವರು ಸೆಲ್ಬಿರಾಯಲ್‌ನಲ್ಲಿದ್ದರು. ಅವನ ಸೇವಕ ಪಟ್ಟಾಗಿ ನಿದ್ದೆ ಮಾಡುತ್ತಿದ್ದ.... ಪ್ಯಾರಿಸ್... ಹೌದು ಅವನು ಪ್ಯಾರಿಸಿಗೆ, ಹೊರಟಿದ್ದ. ಅದೂ ಮಧ್ಯರಾತ್ರಿ ಟ್ರೈನಿನಲ್ಲಿ? ಅವನ ಕುತೂಹಲಕಾರಿ ಅಭ್ಯಾಸಗಳಿಂದಾಗಿ, ತಿಂಗಳುಗಳು ಕಳೆದಲ್ಲದೆ ಯಾರಿಗೂ ಅವನ ಬಗ್ಗೆ ಕುತೂಹಲ – ಅನುಮಾನಗಳು ಉಂಟಾಗುವುದಿಲ್ಲ. ತಿಂಗಳುಗಳೇ ಕಳೆಯುವಷ್ಟರಲ್ಲಿ ಇದಕ್ಕೇನಾದರೂ ಒಂದು ವ್ಯವಸ್ಥೆ ಮಾಡಿದರಾಯಿತು. ಇಲ್ಲಿ ಕುರುಹುಗಳೇ ಇಲ್ಲದಂತೆ, ನಾಶಮಾಡಿದರೂ ಆಯಿತು.

ತಕ್ಷಣ ಅವನಿಗೆ ಒಂದು ಉಪಾಯ ಹೊಳೆಯಿತು. ಫರ್ ಕೋಟು ಹ್ಯಾಟು ಧರಿಸಿ ಹಜಾರದೊಳಕ್ಕೆ ಬಂದ. ಅಲ್ಲಿ, ಪೊಲೀಸನ ಹೆಜ್ಜೆ ಸದ್ದು ಕೇಳಿಬಂತು. ಅವನ ಗೃದ್ರ ದೃಷ್ಟಿ ಕಿಟಕಿಗಾಜಿನೊಳಗಿಂದ ಕಾಣಿಸಿತು. ಉಸಿರು ಬಿಗಿ ಹಿಡಿದುಕೊಂಡು, ಅವನು ಹೋಗುವುದನ್ನೇ ಕಾಯುತ್ತಿದ್ದ.

ನಂತರ ಚಿಲಕ ತೆಗೆದು ಮೆಲ್ಲಗೆ ಸದ್ದಾಗದಂತೆ ಕಳ್ಳ ಹೆಜ್ಜೆಗಳಲ್ಲಿ ಹೊರಗೆ ಬಂದ. ಬಾಗಿಲು ಎಳೆದುಕೊಂಡ. ಒಂದೆರಡು ಕ್ಷಣಗಳ ನಂತರ ಕರೆಗಂಟೆ ಬಾರಿಸಿದ. ಒಂದೈದು ನಿಮಿಷದ ನಂತರ ಅವನ ಸೇವಕ ನಿದ್ದೆಗಣ್ಣಿನಲ್ಲಿದ್ದು ಎದ್ದು ಬಂದಾಗ,

"ಸಾರಿ ಫ್ರಾನ್ಸಿಸ್. ನಿನ್ನನ್ನು ವಿನಾಕಾರಣ ಎಬ್ಬಿಸಿ ನಿನ್ನ ನಿದ್ದೆ ಹಾಳುಮಾಡಿದೆ. ಎಂದು ಒಳಗೆ ಹೆಜ್ಜೆಯಿರಿಸುತ್ತ ನಾನು ಬೀಗದ ಕೈ ಮರೆತುಬಿಟ್ಟಿದ್ದೆ. ಈಗ ಸಮಯ ಎಷ್ಟಾಗಿದೆ?"

"ಎರಡು ಗಂಟೆ ಹತ್ತು ನಿಮಿಷ" ಎಂದು ಪಿಳಿ ಪಿಳಿ ಕಣ್ಣು ಬಿಡುತ್ತಾ ಗೋಡೆಗಡಿಯಾರ ನೋಡಿ ಹೇಳಿದ. ಏನು ಎರಡು ಗಂಟೇನೂ ದಾಟಿದೆ? ತುಂಬ ತಡವಾಗಿ ಹೋಯಿತು. ನಾಳೆ ಬೆಳಿಗ್ಗೆ ನೀನು ನನ್ನನ್ನು ಒಂಬತ್ತು ಗಂಟೆಗೆ ಎಬ್ಬಿಸಬೇಕು."

"ಆಯ್ತು ಸಾರ್"

"ಇವತ್ತು ಯಾರಾದರೂ ಬಂದಿದ್ದರೆ?"

"ಮಿಸ್ಟರ್ ಹಾಲ್ ವಾರ್ಡ್ ಸಾರ್. ಅವರು ಹನ್ನೊಂದು ಗಂಟೆ ತನಕ ನಿಮ್ಮ ದಾರಿ ಕಾಯುತ್ತಿದ್ದರು. ನಂತರ ಟ್ರೈನ್‌ಗೆ ಹೊತ್ತಾಯ್ತು ಅಂತ ಹೊರಟುಬಿಟ್ಟರು.

"ಅರೆರೆ ನಾನು ಅವರನ್ನು ನೋಡಲೇ ಇಲ್ಲ. ನನಗೇನಾದರೂ ಸಂದೇಶ ಇದೆಯೇ?"

"ಇಲ್ಲ ಸಾರ್. ಪ್ಯಾರಿಸಿನಿಂದಲೇ ನಿಮಗೆ ಕಾಗದ ಬರೆಯುತ್ತೇನೆ ಎಂದಷ್ಟೇ ಹೇಳಿದರು."

"ಆಯ್ತು ಬಿಡು. ನಾಳೆ ಬೆಳಿಗ್ಗೆ ಎಬ್ಬಿಸುವುದನ್ನು ಮರೆಯಬೇಡ."

"ಮರೆಯೊಲ್ಲ, ಖಂಡಿತ ಎಬ್ಬಿಸುತ್ತೇನೆ"

ಡೋರಿಯನ್ ಕೋಟು ಹ್ಯಾಟು ತೆಗೆದಿರಿಸಿ ಲೈಬ್ರರಿ ಕಡೆ ಹೋದ. ಒಂದು ಕಾಲು ಗಂಟೆ ಹಲ್ಲು ಕಚ್ಚುತ್ತ, ಯೋಚಿಸುತ್ತ ಶತಪಥಿಸಿದ. ನಂತರ ಬ್ಲೂ ಬುಕ್ಕನ್ನು ತೆಗೆದುಕೊಂಡು ಪುಟಗಳನ್ನು ತಿರುವಿ ಹಾಕಿದ.

"ಆ್ಯಲೆನ್ ಕ್ಯಾಂಪ್‌ಬೆಲ್, 152, ಹೆರ್ಟ್‌ಫೋರ್ಡ್ ಸ್ಟ್ರೀಟ್, ಮೇಫೇರ್" ಹೌದು. ಇದೇ ವಿಳಾಸದಲ್ಲಿನ ವ್ಯಕ್ತಿಯೇ ನನಗೆ ಬೇಕಾಗಿದ್ದು.

❖

## ಅಧ್ಯಾಯ – 14

ಮರುದಿನ ಬೆಳಿಗ್ಗೆ ಅವನ ಸೇವಕ, ಒಂದು ಕಪ್ಪು ಚಾಕಲೇಟನ್ನು ಟ್ರೇನಲ್ಲಿ ಇರಿಸಿಕೊಂಡು ತಂದು ಡೋರಿಯನ್‌ನ ಹಾಸಿಗೆ ಪಕ್ಕದ ಮೇಜಿನ ಮೇಲಿರಿಸಿ ಮುಚ್ಚಿದ್ದ ಬಾಗಿಲುಗಳನ್ನು ತೆರೆದಿರಿಸಿದ. ಆದರೆ ಡೋರಿಯನ್ ಇನ್ನೂ ನಿದ್ದೆಯ ಮತ್ತಿನಲ್ಲಿದ್ದ. ಏಳುವ ಮನಸ್ಸಿದ್ದಂತೆ ಕಾಣಲಿಲ್ಲ. ಎರಡು ಬಾರಿ ಮೆಲ್ಲಗೆ ತಟ್ಟಿದ. ಎದ್ದು ಕಣ್ಣು ಬಿಟ್ಟು, ತಿಳಿಯಾದ ನಗೆ ಚೆಲ್ಲಿದ. ಯಾವುದೋ ಸಿಹಿಕನಸನ್ನು ನೆನಪಿಸಿಕೊಳ್ಳುತ್ತಿದ್ದಂತೆ ಕಾಣಿಸಿದ. ಆದರೆ ನಿಜವಾಗಿ ಯಾವುದೇ ಕನಸು ಅವನಿಗೆ ಬಿದ್ದಿರಲಿಲ್ಲ. ನೆಮ್ಮದಿಯಾಗಿ ನಿದ್ದೆ ಮಾಡಿದ್ದ ಅಷ್ಟೆ. ಕಾರಣವಿಲ್ಲದೆಯೂ ನಗುವುದು ಆ ಪ್ರಾಯದಲ್ಲಿರುವವರ ಲಕ್ಷಣ.

ಎದ್ದು ಚಾಕಲೇಟಿನ ಸ್ವಾದವನ್ನು ಒಂದೊಂದು ಗುಟುಕಿನಲ್ಲಿಯೂ ಅನುಭವಿಸುತ್ತಿದ್ದ. ಎಳೆ ಬಿಸಿಲು ಕಿಟಕಿಯಿಂದ ಪ್ರವೇಶಿಸುತ್ತಿತ್ತು.

ಕ್ರಮೇಣ ಹಿಂದಿನ ರಾತ್ರಿ ನಡೆದ ಘಟನೆಗಳೆಲ್ಲ ಅವನ ನೆನಪಿಗೆ ಬರುತ್ತಿದ್ದವು. ಮತ್ತೊಮ್ಮೆ ಒಂದೊಂದೇ ಘಟನೆಯನ್ನು ಅನುಕ್ರಮದಲ್ಲಿ ಪೋಣಿಸತೊಡಗಿದ. ಅಲ್ಲಿವರೆಗೆ ಅನುಭವಿಸಿದ ಯಾತನೆಯನ್ನು ಮೆಲುಕು ಹಾಕತೊಡಗಿದ. ಒಂದು ಕ್ಷಣ, ಬೇಸಿಲ್ ನನ್ನು ಕೊಲ್ಲುವ ಮಟ್ಟಕ್ಕೆ ತನ್ನಲ್ಲಿ ದ್ವೇಷ, ಅಸಹ್ಯ ಹುಟ್ಟಿಸಿದ ಅವನ ಮೇಲೆ ಎಲ್ಲಿಲ್ಲದ ಕೋಪ ನುಸುಳಿ ಬಂತು. ಸತ್ತ ಅವನ ಶವ ಇನ್ನೂ ಅಲ್ಲೇ ಕೂತಿತ್ತು. ಸೂರ್ಯನ ಬೆಳಕಿನಲ್ಲಿ ಇನ್ನಷ್ಟು ಸ್ಪಷ್ಟವಾಗಿ ಗೋಚರಿಸಿತು. ಅಬ್ಬಬ್ಬ ಎಷ್ಟು ಭಯಂಕರ?

ಇಂಥವೆಲ್ಲ ರಾತ್ರಿಗಳಲ್ಲಿ ಸರಿ, ಬೆಳಗಿನ ಹೊತ್ತಿನಲ್ಲಲ್ಲ.

ಇನ್ನೂ ನಡೆದದ್ದನ್ನೆಲ್ಲಾ ನೆನಪಿಸಿಕೊಳ್ಳುತ್ತಾ ಇದ್ದಲ್ಲಿ ಅವನು ಹುಚ್ಚನಾಗಿ ಬಿಡುತ್ತಿದ್ದ. ಕೆಲವು ಅಪರಾಧಗಳು, ಪಾಪಗಳು ಮಾಡುವುದಕ್ಕಿಂತ ನೆನಪುಗಳಲ್ಲಿ ಹಿತವಾಗಿರುತ್ತವೆ. ವಿಚಿತ್ರವಾದ ವಿಜಯಗರ್ವ. ಭಾವನೆಗಳಿಗಿಂತ ಹೆಚ್ಚಿನ ಸಂತೋಷ ನೀಡುತ್ತದೆ.

ಅರ್ಧಗಂಟೆಯ ನಂತರ ಎದ್ದು, ಎಂದಿಗಿಂತಲೂ ಚೆನ್ನಾಗಿ ಡ್ರೆಸ್ ಮಾಡಿಕೊಂಡ. ಕೋಟು ನೆಕ್ ಟೈ ಕಾಲರ್ ಪಿನ್ ಇತ್ಯಾದಿಗಳ ಬಗ್ಗೆಯೂ ಗಮನ ಹರಿಸಿದ. ಉಪಹಾರದ ರುಚಿಯನ್ನು ಚಪ್ಪರಿಸುತ್ತಾ ನಿಧಾನವಾಗಿ ತಿನ್ನುತ್ತಿದ್ದ. ಒಂದೊಂದು ತಿಂಡಿ ಪದಾರ್ಥವನ್ನೂ ಉತ್ಸಾಹದಿಂದ ರುಚಿನೋಡುತ್ತಿದ್ದ. ಸೇವಕರಿಗೆಲ್ಲಾ ಹೊಸ ಬಟ್ಟೆಕೊಡಿಸಲು ಆಲೋಚಿಸಿದ. ಬಂದ ಪತ್ರಗಳನ್ನೆಲ್ಲ ಬಿಡಿಸಿ ನೋಡಿದ. ಬೇಡವಾದ್ದನ್ನು ಹರಿದು ಹಾಕಿದ. ಬ್ಲ್ಯಾಕ್ ಕಾಫಿಕುಡಿದ. ತುಟಿಗಳನ್ನು ಒರೆಸಿಕೊಂಡ. ಸೇವಕನಿಗೆ ಸ್ವಲ್ಪ ಇರುವಂತೆ ಸನ್ನೆಮಾಡಿ ಹೇಳಿದ. ಮೇಜಿನ ಬಳಿ ಹೋಗಿ ಕುಳಿತು ಎರಡು ಪತ್ರಗಳನ್ನು ಬರೆದ. ಒಂದನ್ನು ಜೇಬಿನಲ್ಲಿರಿಸಿ ಕೊಂಡು, ಮತ್ತೊಂದನ್ನು ಸೇವಕನ ಕೈಗೆ ಕೊಟ್ಟು, "ಹರ್ಟ್ ಫೋರ್ಡ್ ಸ್ಟ್ರೀಟ್‌ನಲ್ಲಿರುವ 152 ನೇ ನಂಬರ್ ಮನೆಗೆ ಹೋಗಿ ಇದನ್ನು ಕೊಡು. ಕ್ಯಾಂಪ್‌ಬೆಲ್ ಮನೆಯಲ್ಲಿ ಇಲ್ಲದಿದ್ದ ಪಕ್ಷದಲ್ಲಿ ಅವನಿರುವ ವಿಳಾಸವನ್ನು ಕೇಳಿ ತೆಗೆದುಕೊಂಡು ಬಾ."

ಅವನು ಒಬ್ಬನೇ ಇದ್ದಾಗ ಒಂದು ತುಂಡು ಕಾಗದದ ಮೇಲೆ ಚಿತ್ರಗಳನ್ನು ಬಿಡಿಸ ತೊಡಗಿದ. ಹೂಗಳನ್ನು ಬರೆದ, ಕಟ್ಟಡಗಳನ್ನು ಬರೆದ, ನಂತರ ಮನುಷ್ಯರ ಚಹರೆಗಳನ್ನು ಬರೆದ, ತಕ್ಷಣ ಅವನಿಗೆ ಹೊಳೆಯಿತು. ಎಲ್ಲ ಚಹರೆಗಳೂ ಬೇಸಿಲ್ ಹಾಲ್ ವಾರ್ಡ್‌ನನ್ನೇ ಹೋಲುತ್ತಿದ್ದವು. ಮುಖ ಗಂಟಿಕ್ಕಿಕೊಂಡ, ಎದ್ದು ಹೋಗಿ ಯಾವುದೋ ಒಂದು ಪುಸ್ತಕವನ್ನು ಎಳೆದುಕೊಂಡ. ಏನಾದರಾಗಲೀ ಅಗತ್ಯ ಬೀಳದ ಹೊರತು ನಡೆದದ್ದನ್ನು ನೆನಪಿಸಿಕೊಳ್ಳ ಬಾರದು ಎಂದು ನಿರ್ಧರಿಸಿದ.

ಸೇವಕನನ್ನು ಕಳಿಸಿಕೊಟ್ಟು, ಕಾಯುತ್ತಾ ಕುಳಿತ. ಹೊತ್ತು ಕಳೆಯುವುದು ಕಷ್ಟವಾಗುತ್ತಿತ್ತು. ತಲೆಯಲ್ಲಿ ಏನೇನೋ ಯೋಚನೆಗಳು. ಎಷ್ಟು ಪ್ರಯತ್ನಿಸಿದರೂ ಅನಿಷ್ಟ ನೆನಪುಗಳು ಸಾಯುತ್ತಿರಲಿಲ್ಲ. ಪ್ರತಿ ಸಲವೂ ಬಾಗಿಲ ಕಡೆ, ಗಡಿಯಾರದ ಕಡೆ ನೋಡುತ್ತಾ ನಿಟ್ಟುಸಿರು ಬಿಡುತ್ತಿದ್ದ.

ಅಂತೂ ಕೊನೆಗೆ ಬಾಗಿಲು ತೆರೆದುಕೊಂಡಿತು. ಅವನ ಸೇವಕ ಪ್ರವೇಶಿಸಿದ. "ಮಿಸ್ಟರ್ ಕ್ಯಾಂಪ್‌ಬೆಲ್ ಬಂದಿದ್ದಾರೆ ಯಜಮಾನರೇ" ನೆಮ್ಮದಿಯ ನಿಟ್ಟುಸಿರು ಬಿಟ್ಟ. "ಫ್ರಾನ್ಸಿಸ್ ಕೂಡಲೇ ಅವರನ್ನು ಬರಹೇಳು" ಮತ್ತೊಮ್ಮೆ ಒಂಟಿತನ ಅಪ್ಪಳಿಸಿತು. ಹೆದರಿಕೆ ಸ್ವಲ್ಪ ಕಡಿಮೆಯಾಗಿತ್ತು.

ಸೇವಕ ಹಿಂತಿರುಗಿದ. ಕೆಲ ನಿಮಿಷಗಳಲ್ಲೇ ಕ್ಯಾಂಪ್‌ಬೆಲ್ ಒಳಗೆ ಬಂದ, ಕಪ್ಪು ಕೂದಲು, ದಟ್ಟವಾದ ಹುಬ್ಬುಗಳು, ಬಿಳುಚಿಕೊಂಡಿದ್ದಂತ ಮುಖದ ಹಿನ್ನೆಲೆಯಲ್ಲಿ ಇನ್ನೂ ಢಾಳಾಗಿ ಕಾಣುತ್ತಿತ್ತು. "ಅಲಾನ್‌ಕ್ಯಾಂಪ್ ಬೆಲ್, ನೀನು ಬಂದದ್ದು ಸಂತೋಷವಾಯಿತು. ಬಂದದ್ದಕ್ಕೆ ಧನ್ಯವಾದಗಳು.

"ನಿನ್ನ ಮನೆ ಹೊಸ್ತಿಲು ತುಳಿಯಲೇ ಬಾರದೆಂದು ನಿರ್ಧರಿಸಿದ್ದೆ. ಆದರೆ ಸಾವು ಬದುಕಿನ

ಸಮಸ್ಯೆ ಎಂದದ್ದಕ್ಕೆ ಬಂದೆ" ಅವನ ಧ್ವನಿ ಸ್ವಲ್ಪ ಗಡುಸಾಗಿಯೇ ಇತ್ತು. ಡೋರಿಯನ್ ಕಡೆ ನೋಡುವ ನೋಟದಲ್ಲಿ ಒಂದು ರೀತಿಯ ತಿರಸ್ಕಾರವಿತ್ತು. ಅವನನ್ನು ಬರಮಾಡಿಕೊಂಡ ರೀತಿಯನ್ನು ಅಷ್ಟಾಗಿ ಗಮನಿಸಿರಲಿಲ್ಲ.

"ಹೌದು ಸಾವು ಬದುಕಿನ ಪ್ರಶ್ನೆ. ಕೇವಲ ಒಬ್ಬನದು ಮಾತ್ರವೇ ಅಲ್ಲ" ಕುಳಿತುಕೋ

ಕ್ಯಾಂಪ್‌ಬೆಲ್ ಡೋರಿಯನ್‌ಗೆ ಎದುರಾಗಿ ಕುರ್ಚಿಯಲ್ಲಿ ಕುಳಿತ. ಇಬ್ಬರ ಕಣ್ಣುಗಳು ಸಂಧಿಸಿದವು. ಡೋರಿಯನ್‌ನ ನೋಟದಲ್ಲಿ ಮರುಕವಿತ್ತು. ಅವನಿಗೆ ಗೊತ್ತಿತ್ತು, ತಾನು ಎಂತಹ ಕೆಲಸ ಮಾಡಲು ಹೊರಟಿದ್ದಾನೆಂಬುದು. ಇಬ್ಬರ ನಡುವಿನ ಬಿಗು ಮೌನದ ನಂತರ ಮಾತಾಡಲು ಆರಂಭಿಸಿದ. ತನ್ನ ಮಾತಿನ ಪರಿಣಾಮ ಎದುರಿದ್ದವನ ಮೇಲೆ ಹೇಗಿದೆ ಎನ್ನುವುದನ್ನು ಗಮನಿಸುತ್ತಲೇ,

"ಅಲಾನ್, ಮಹಡಿ ಮೇಲೆ ಒಂದು ಕೋಣೆಯಿದೆ. ನಾವು ಯಾರೂ ಸಾಮಾನ್ಯವಾಗಿ ಅಲ್ಲಿಗೆ ಹೋಗುವುದೇ ಇಲ್ಲ. ಹೋದರೆ, ನಾನು ಒಬ್ಬ ಮಾತ್ರ ಅಪರೂಪಕ್ಕೆ ಹೋಗ್ತೀನಿ, ಅಲ್ಲಿ ಒಬ್ಬ ವ್ಯಕ್ತಿಯ ಹೆಣ ಕುರ್ಚಿಯಲ್ಲಿ ಮೇಜಿನ ಮುಂದೆ ಕೂತಿದೆ. ಹತ್ತು ಗಂಟೆಗಳ ಹಿಂದೆ ಪ್ರಾಣ ಹೋಗಿದೆ. ಕದಲಬೇಡ. ನನ್ನನ್ನು ಹಾಗೆ ನೋಡಬೇಡ. ಅವನು ಯಾರು? ಯಾಕೆ ಸತ್ತ? ಹೇಗೆ ಸತ್ತ? – ಎನ್ನುವ ವಿಚಾರಗಳಾವುದನ್ನೂ ಕೇಳಬೇಡ. ಅವು ನಿನಗೆ ಸಂಬಂಧಪಟ್ಟಿದ್ದಲ್ಲ. ನೀನು ಮಾಡ ಬೇಕಾದ್ದು ಏನೆಂದರೆ...

"ಸಾಕು ನಿಲ್ಲಿಸು ಡೋರಿಯನ್. ಮುಂದೆ ನೀನು ಏನೂ ಹೇಳಬೇಕಾದ್ದಿಲ್ಲ, ನಾನು ತಿಳಿಯಬೇಕಾದ್ದಿಲ್ಲ. ನೀನು ಹೇಳುವುದು ನಿಜವೋ ಸುಳ್ಳೋ.... ನನಗೆ ಬೇಕಾಗಿಲ್ಲ. ನಿನ್ನ ವ್ಯವಹಾರಗಳಲ್ಲಿ ನಾನು ಭಾಗಿಯಾಗಲು ಒಪ್ಪುವುದಿಲ್ಲ. ನಿನ್ನ ಗುಟ್ಟುಗಳನ್ನು ನೀನೇ ಇಟ್ಟುಕೊ. ನನಗೆ ಕೇಳಿಸಿಕೊಳ್ಳಲು ಆಸಕ್ತಿಯಿಲ್ಲ.

"ಇಲ್ಲ ನೀನು ಇಂಟರೆಸ್ಟ್ ತಗೊಳ್ಳಲೇಬೇಕು. ನನಗೆ ನಿನ್ನ ಬಗ್ಗೆ ಅಯ್ಯೋ ಎನಿಸುತ್ತೆ ಆದರೆ ನನಗೆ ಏನೂ ಮಾಡೋಕೆ ಆಗೊಲ್ಲ. ಇದ್ದರೆ, ನೀನೊಬ್ಬನೇ ನನಗೆ ಸಹಾಯ ಮಾಡಬಲ್ಲೆ. ನನ್ನ ಸಮಸ್ಯೆ ಜೊತೆಗೆ ನಿನ್ನನ್ನು ಸೇರಿಸಿಕೊಳ್ಳಲೇಬೇಕು. ನಿನ್ನ ಬಿಟ್ಟರೆ ನನಗೆ ಬೇರೆ ದಾರಿ ಇಲ್ಲ. ನೀನು ಸೈಂಟಿಫಿಕ್ ಆಗಿ ಯೋಚನೆ ಮಾಡಬಲ್ಲೆ. ಕೆಮಿಸ್ಟ್ರಿ ಬಗ್ಗೆ ಚೆನ್ನಾಗಿ ನೀನು ಬಲ್ಲೆ. ಪ್ರಯೋಗಗಳನ್ನು ಮಾಡಿ ಅಭ್ಯಾಸ ಇದೆ. ಮೇಲೆ ಒಂದು ಶವ ಇದೆ. ಅದನ್ನು ನೀನು ನಾಶ ಪಡಿಸಲೇಬೇಕು. ಒಂದು ಚೂರೂ ಗುರುತು ಸಿಗದಂತೆ ನೋಡಿಕೊಳ್ಳಬೇಕು. ಈ ವ್ಯಕ್ತಿ ಮನೆ ಒಳಗೆ ಬರೋದನ್ನು ಯಾರೂ ನೋಡಿಲ್ಲ. ಹಾಗೆ ನೋಡಿದರೆ ಅವನು ಈ ಸಮಯದಲ್ಲಿ ಪ್ಯಾರಿಸಿನಲ್ಲಿ, ಬಹುಶಃ ಇರಬೇಕು. ತಿಂಗಳುಗಟ್ಟಲೆ ಅವನು ಅಲ್ಲಿ ಇರಬೇಕೂಂತಲೇ ಜನರ ನಂಬಿಕೆ. ಆದ್ದರಿಂದ ಯಾರಿಗೂ ಅವನ ಅನುಪಸ್ಥಿತಿ ಬಗ್ಗೆ ಅನುಮಾನ ಬರೊಲ್ಲ. ಆಮೇಲೆ ಏನಾದರೂ ಗೊತ್ತಾದರೆ, ಗೊತ್ತಾಗೋ ಮುಂಚೆ ಅವನು, ಅವನಿಗೆ ಸಂಬಂಧ ಪಟ್ಟದ್ದೆಲ್ಲವೂ ಒಂದು ಹಿಡಿ ಬೂದಿಯಾಗಿರ ಬೇಕು ಅದನ್ನು ನಾನು ಗಾಳಿಯಲ್ಲಿ ತೇಲಿ ಬಿಡುತ್ತೇನೆ.

"ನೀನೊಬ್ಬ ಹುಚ್ಚ ಡೋರಿಯನ್"

"ಆಹಾ! ನೀನು ನನ್ನನ್ನು ಹಾಗೆ ಕರೀಬೇಕಂತಲೇ ಬಯಸಿದ್ದೆ"

"ನೀನು ಹುಚ್ಚ ನಾನು ನೀನು ಹೇಳಿದ್ದನ್ನೆಲ್ಲ ಕೇಳ್ತೀನಿ, ನಿನ್ನ ತಪ್ಪೊಪ್ಪಿಗೆಯಿಂದ ಕರಗಿ ಹೋಗ್ತೀನಿ, ನಾನು ನಿನಗೆ ಸಹಾಯ ಮಾಡ್ತೀನಿ ಅಂತ ತಿಳಿದಿದ್ದರೆ ಅದು ನಿನ್ನ ಹುಚ್ಚುತನ. ಎಳ್ಳಷ್ಟೂ ಸಹಾಯ ಮಾಡೋಕೆ ನಾನೊಪ್ಪೊಲ್ಲ. ನಿನ್ನ ಈ ಪಾಪದ ಕೆಲಸಕ್ಕೂ ನನಗೂ ಸಂಬಂಧ ಇಲ್ಲ. ನಿನಗೆ ಸಹಾಯ ಮಾಡಿ ನನ್ನ ಪ್ರತಿಷ್ಠೆ, ಗೌರವಗಳನ್ನು ಹಾಳು ಮಾಡಿಕೊಳ್ಳುವಷ್ಟು ಮೂರ್ಖನಲ್ಲ – ನೀನು ಎಂಥ ದರಿದ್ರ ಕೆಲಸ ಮಾಡಿದರೇನು?

"ಅದು ಆತ್ಮಹತ್ಯೆ ಅಲಾನ್"

"ಒಳ್ಳೇದೆ. ಆದರೆ ಆತ್ಮಹತ್ಯೆ ಮಾಡಿಕೊಳ್ಳೊ ಹಾಗೆ ಮಾಡಿದವರು ಯಾರು?

"ನಾನೇ!?"

"ಈಗಲೂ ನನ್ನ ಕೆಲಸ ಮಾಡೋದಿಲ್ವೇನು"

"ಖಂಡಿತ ಮಾಡೊಲ್ಲ ಅದಕ್ಕೂ ನನಗೂ ಸಂಬಂಧ ಇಲ್ಲ. ನಿನಗೆ ಏನು ಕೆಟ್ಟ ಹೆಸರು ಬಂದರೆ ನನಗೇನು? ನಿನಗೆ ಅದೆಲ್ಲಾ ಆಗಲೇ ಬೇಕು. ಸಮಾಜದಲ್ಲಿ ನಿನ್ನ ಪ್ರತಿಷ್ಠೆ ಗೌರವಗಳು ಹಾಳಾದರೇನು, ನನಗಂತೂ ಒಂದಿಷ್ಟೂ ಅಯ್ಯೋ ಅಂತ ಅನಿಸೊಲ್ಲ. ಎಲ್ಲರನ್ನೂ ಬಿಟ್ಟು ನನ್ನನ್ನು ಇಂಥ ಕೆಲಸಕ್ಕೆ ಎಳೆಯೋದರಲ್ಲಿ ಎಷ್ಟು ಧೈರ್ಯ ನಿನಗೆ? ನೀನು ಏನೇ ಮಾಡಿದರೂ ನಾನಂತು ನಿನಗೆ ಸಹಾಯ ಮಾಡೊಲ್ಲ. ಬೇಕಾದರೆ ಹೋಗಿ ನಿನ್ನ ಸ್ನೇಹಿತರನ್ನು ಕೇಳಿಕೊ. ಆದರೆ ನನ್ನ ಹತ್ತಿರ ಮಾತ್ರ ಬರಬೇಡ."

"ಅಲಾನ್ ಅದು ಕೊಲೆ, ನಾನು ಮಾಡಿದ್ದು. "ನಿನಗೆ ಗೊತ್ತಿಲ್ಲ, ನಾನೆಷ್ಟು ದುಃಖ ಅನುಭವಿಸಿದೇಂತ. ನನಗೆ ಒಳ್ಳೇದು ಮಾಡಿದ್ದು ಕೆಟ್ಟದ್ದು ಮಾಡಿದ್ದು ಎಲ್ಲವೂ ಆ ಹ್ಯಾರಿಯಿಂದಲೇ. ಆದರೆ ಅದೆಲ್ಲ ಉದ್ದೇಶಪೂರ್ವಕ ಅಲ್ಲ. ಆದರೂ ಆಗಬೇಕಾದ್ದೆಲ್ಲ ಆಗಿಹೋಯಿತು. "ಕೊಲೆ! ದೇವರೇ! ನೀನು ಇಂಥ ನೀಚ ಕೆಲಸಕ್ಕೆ ಇಳಿದುಬಿಟ್ಟೆಯಾ ಡೋರಿಯನ್! ಆದರೆ ನಾನೇನೂ ಈ ವಿಚಾರ ಯಾರಿಗೂ ಹೇಳೊಲ್ಲ. ಅದು ನನ್ನ ಕೆಲಸವೂ ಅಲ್ಲ. ಯಾರು ಯಾರಿಗೂ ಹೇಳದಿದ್ದರೂ ಒಂದಂತು ನಿಜ – ನಿನ್ನನ್ನು ಪೊಲೀಸರು ಬಂಧಿಸುತ್ತಾರೆ. ಸುಮ್ಮ ಸುಮ್ಮನೆ ಯಾರೂ ಕೊಲೆ ಮಾಡೊಲ್ಲ. ಏನಾದರೂ ಮಾಡಬಾರದ್ದನ್ನು ಮಾಡಿರಲೇಬೇಕು ಅಂತ ಅನಿಸುತ್ತೆ. ಆದರೂ ಅದರ ಗೊಡವೆ ನನಗಿಲ್ಲ."

"ಇಲ್ಲ ಅಲಾನ್. ಏನಾದರೂ ನೀನು ಮಾಡಲೇ ಬೇಕು. ಏನಾದರೂ ಪ್ರಯೋಗ ಮಾಡು. ಆಸ್ಪತ್ರೆಯ ಶವಾಗಾರಗಳಿಗೆ ಹೋಗ್ತೀಯ, ಮತ್ತೆಲೆಲ್ಲೋ ಹೆಣಗಳಿದ್ದೆಡೆಗೆ ಹೋಗ್ತೀಯಾ ಆಗೆಲ್ಲ ನಿನಗೆ ಏನೂ ಅನಿಸೋದಿಲ್ಲ. ಈಗ್ಯಾಕೆ ಇಷ್ಟು ಹಿಂದೇಟು ಹಾಕ್ತಿದ್ದೀಯ? ಹಾಗಿರುವಾಗ ಕುರ್ಚಿಯಲ್ಲಿ ಮಲಗಿದಂತೆ ಬಿದ್ದಿರುವ ಶವವನ್ನು ನೋಡುವಾಗ, ಅದಕ್ಕೊಂದು ದಾರಿ ಕಾಣಿಸುವಾಗ, ನೀನು ಪಾಪ, ಅಥವಾ ತಪ್ಪು ಮಾಡ್ತಿದ್ದೀನಿ ಅನಿಸೋಕಿಂತ ಮನುಷ್ಯ ಸಮಾಜಕ್ಕೆ ಸಹಾಯ ಮಾಡ್ತಿದ್ದೀಯ ಅನಿಸುತ್ತೆ.! ಈಗ ನಿನ್ನನ್ನು ಕೇಳ್ತಿರೋದೇನು? ಹಿಂದೆ

ನೀನು ಮಾಡಿದ ಕೆಲಸವನ್ನೇ ಈಗ ಮಾಡೂಂತ. ನಾನೂಂತ ಗೊತ್ತಾದರೆ ನನ್ನ ಭವಿಷ್ಯವೇ ಹಾಳಾಗುತ್ತೆ. ನೀನು ನನಗೆ ಸಹಾಯ ಮಾಡಲಿಲ್ಲಾಂದ್ರೆ, ನಾನು ಸಿಕ್ಕಿಹಾಕಿ ಕೊಳ್ಳೋದಂತು ಗ್ಯಾರಂಟಿ.

"ನಿನಗೆ ಸಹಾಯ ಮಾಡೋ ಬಯಕೆಯಿಲ್ಲ. ಅದನ್ನು ನೀನು ಮರೆತುಬಿಡು. ಏನಾಯ್ತು ಅನ್ನೋದು ಕೂಡಾ ನನಗೆ ಬೇಕಿಲ್ಲ. ನಾನು ಏನನ್ನೂ ಮಾಡೋದಿಲ್ಲ"

"ಅಲಾನ್ ನಿನ್ನ ಕಾಲು ಹಿಡ್ಕೋತೀನಿ ನಾನೆಂಥ ಸ್ಥಿತಿಯಲ್ಲಿ ಇದ್ದೇನೆ ಅನ್ನೋದನ್ನು ಯೋಚನೆ ಮಾಡು. ನೀನು ಬರುವುದಕ್ಕೆ ಸ್ವಲ್ಪ ಮುಂಚೆ ಭಯದಿಂದ ಮೂರ್ಛೆ ಹೋಗಿದ್ದೆ. ಭಯ, ಭಯಾನಕ ಅನ್ನುವುದರ ಅರ್ಥ ಒಂದು ದಿನ ನಿನಗೇ ಗೊತ್ತಾಗುತ್ತೆ ಆದರೆ ಅದು ಬೇಡ. ನೀನೊಬ್ಬ ವಿಜ್ಞಾನಿ ಅಂತ ತಿಳ್ಕೊಂಡು ಮಾಡು. ಪ್ರಯೋಗದ ವಸ್ತು ಯಾವುದು ಎಲ್ಲಿಂದ ಬಂತು ಅನ್ನುವ ವಿವರಗಳನ್ನು ಕೇಳಬೇಡ. ಈಗಾಗಲೇ ಹೇಳ ಬೇಕೂಂತ ಅಂದುಕೊಂಡದ್ದಕ್ಕಿಂತ ಹೆಚ್ಚಾಗಿ ಹೇಳಿ ಬಿಟ್ಟಿದ್ದೀನಿ, ಮತ್ತೊಂದು ಸಲ ಕೇಳ್ಕೊತೀನಿ. ನನ್ನ ಕೆಲಸ ಮಾಡಿಕೊಡು. ನಾವು ಬಹಳ ಸ್ನೇಹಿತರಾಗಿದ್ದೆವು."

"ಆ ದಿನಗಳ ಬಗ್ಗೆ ಮಾತಾಡಬೇಡ ಡೋರಿಯನ್. ಅದೆಲ್ಲ ಮುಗಿದ ಕತೆ"

"ಸತ್ತವನು ಸುಳಿದಾಡ್ತಾನೆ ಇರ್ತಾನೆ. ಕುರ್ಚಿ ಮೇಲೆ ಕೂತಿರೋನು ಹೋಗೋದೇ ಇಲ್ಲ. ಅಲಾನ್! ಅಲಾನ್ ನೀನು ಸಹಾಯ ಮಾಡದಿದ್ದರೆ ನನ್ನ ಸರ್ವನಾಶ ಖಂಡಿತ. ನನ್ನನ್ನು ನೇಣಿಗೆ ಏರಿಸಿ ಬಿಡ್ತಾರೆ. ಅರ್ಥ ಆಗೋದಿಲ್ಲವೆ? ನಿಜ ನಾನು ಮಾಡಿರುವ ಕೆಲಸಕ್ಕೆ ನನಗೆ ನೇಣುಹಾಕ್ತಾರೆ."

"ಸುಮ್ಮನೆ ಇದನ್ನೆಲ್ಲಾ ಎಳ್ಕೊಂಡು ಹೋಗೋದರಿಂದ ಏನೂ ಒಳ್ಳೇದು ಆಗೊಲ್ಲ. ನಾನಂತು ಸಹಾಯ ಮಾಡೋದಿಲ್ಲ ಅಂತ ಖಡಾಖಂಡಿತವಾಗಿ ಹೇಳಿ ಬಿಡ್ತಿದ್ದೀನಿ. ನನ್ನ ಸಹಾಯ ಕೇಳೋಕೆ ನಿನಗೆಲ್ಲೊ ತಲೆಕೆಟ್ಟಿರಬೇಕು"

"ಮಾಡೊಲ್ಲಾಂತೀಯ?"

"ಹೌದು"

"ಪ್ರಾರ್ಥನೆ ಮಾಡ್ಕೊಳ್ತೀನಿ"

"ಪ್ರಯೋಜನ ಇಲ್ಲ"

ಡೋರಿಯನ್‌ನ ಕಣ್ಣುಗಳು ದೈನ್ಯತೆಯಿಂದ ಕೂಡಿದ್ದವು. ನಂತರ ಒಂದು ತುಂಡು ಪೇಪರನ್ನು ಎಳೆದುಕೊಂಡು ಅದರಲ್ಲೇನೋ ಬರೆದ. ಎರಡು ಬಾರಿ ಬರೆದಿದ್ದನ್ನು ಓದಿಕೊಂಡು, ಅದನ್ನು ಮಡಚಿ ಮೇಜಿನ ಮೇಲೆ ಇರಿಸಿದ. ಕಿಟಕಿಯ ಬಳಿ ನಡೆದ. ಕ್ಯಾಂಪ್ ಬೆಲ್‌ಗೆ ಆಶ್ಚರ್ಯವಾಯಿತು. ಮೇಜಿನ ಮೇಲಿದ್ದ ಕಾಗದ ತೆಗೆದುಕೊಂಡು ಬಿಡಿಸಿದ. ಓದಿದ್ದೇ ಮುಖ ಬಿಳಿಚಿಕೊಂಡಿತು. ಸಣ್ಣಗೆ ಭಯವೂ ಆಯಿತು. ಕುರ್ಚಿಯಲ್ಲಿ ಧಸಕ್ಕೆಂದು ಕುಕ್ಕರಿಸಿದ. ಒಳಗೊಳಗೇ ಏನೋ ಆಗುತ್ತಿರುವಂತೆ ಭಾಸವಾಯಿತು. ಹೃದಯದ ಬಡಿತ ಇಮ್ಮಡಿಸಿತು.

ಸಾಯುತ್ತೇನೇನೋ ಎಂದುಕೊಂಡ. ಒಂದೆರಡು ನಿಮಿಷಗಳ ನಂತರ ಡೋರಿಯನ್ ಕಿಟಕಿ ಕಡೆಯಿಂದ ಬಂದು ಕ್ಯಾಂಪ್‌ಬೆಲ್‌ನ ಹಿಂದೆ ನಿಂತು ತನ್ನೆರಡೂ ಕೈಗಳನ್ನು ಅವನ ಭುಜಗಳ ಮೇಲಿರಿಸಿದ.

"ಕ್ಷಮಿಸು ಅಲಾನ್" ಗೊಣಗುವ ದನಿಯಲ್ಲಿ ಹೇಳಿದ. ನನಗೆ ಬೇರೆ ದಾರೀನೇ ಇಲ್ಲದಂತೆ ಆಗಿದೆ. ಒಂದು ಕಾಗದವನ್ನು ಆಗಲೇ ಬರೆದು ಇರಿಸಿದ್ದೇನೆ. ಇಗೋ ಇಲ್ಲಿದೆ. ಅಡ್ರೆಸ್ಸನ್ನೂ ನೋಡು, ನನಗೆ ನೀನು ಸಹಾಯ ಮಾಡಲಿಲ್ಲಾಂದ್ರೆ ಇದನ್ನು ಈ ಅಡ್ರೆಸ್‌ಗೆ ಕಳಿಸಿಬಿಡ್ತೇನೆ, ಪರಿಣಾಮ ಏನಾಗುತ್ತೇಂತ ನಿನಗೇ ಗೊತ್ತಿದೆ. ನೀನು ನನಗೆ ಸಹಾಯ ಮಾಡಿಯೇ ಮಾಡ್ತಿ. ಈಗ ನೀನು ಸಹಾಯ ಮಾಡೊಲ್ಲ ಅಂತ ಹೇಳೋಕೆ ಆಗೋದಿಲ್ಲ, ನಿನಗೇನೂ ತೊಂದರೆ ಮಾಡಬಾರದು ಅಂದುಕೊಂಡಿದ್ದೆ. ಆದರೆ ಈಗ... ನೀನು ನನ್ನ ಜೊತೆ ಎಷ್ಟು ಅಸಹ್ಯವಾಗಿ, ಕ್ರೂರವಾಗಿ ಒರಟಾಗಿ ನಡೆದುಕೊಂಡೆ ಇಲ್ಲೀವರೆಗೆ ಯಾರೂ ನನ್ನ ಜೊತೆ ವರ್ತಿಸದ ರೀತಿಯಲ್ಲಿ ವರ್ತಿಸಿದೆ. ಎಲ್ಲ ಸಹಿಸಿಕೊಂಡೆ. ಈಗ ನೀನು ನಾನು ಹೇಳಿದಂತೆ ಕೇಳಲೇಬೇಕು. ಕ್ಯಾಂಪ್ ಬೆಲ್ ಹೆದರಿಕೆಯಿಂದ ಮುಖ ಮುಚ್ಚಿಕೊಂಡು ನಡುಗಿದ.

"ನಾನು ಹೇಳಿದಂಗೆ ಕೇಳು ಅಲಾನ್. ನನ್ನ ಷರತ್ತುಗಳೇನು ಅನ್ನೋದು ಗೊತ್ತಿದೆ. ಕೆಲಸ ಬಹಳ ಸುಲಭ. ಇನ್ನೂ ಯೋಚನೆ ಮಾಡ್ತಾ ಹೆದರ್‍ಕೋತ ಕುಳಿತುಕೊಳ್ಳಬೇಡ. ಎದ್ದೇಳು ಕೆಲಸ ಮುಗಿಸು. ಮುಲುಗುವುದು ಕೇಳಿಸಿತು. ತತ್ತರಿಸಿ ನಡುಗುತ್ತಿದ್ದ, ಡೋರಿಯನ್‌ನ ಮಾತುಗಳಲ್ಲಿನ ಬೆದರಿಕೆ ಆಗಲೇ ತನ್ನ ಮೇಲೆ ಪರಿಣಾಮ ಬೀರಿದಂತೆನಿಸಿತು. ಹೆಗಲ ಮೇಲಿರಿಸಿದ ಅವನ ಕೈಗಳು ಕಬ್ಬಿಣದ ತುಂಡುಗಳಂತೆ ಭಾರವಾಗಿತ್ತು. ಅದರಡಿಯಲ್ಲಿ ಭುಜದ ಎಲುಬುಗಳು ಪುಡಿ ಪುಡಿಯಾಗುತ್ತಿರುವಂತೆನಿಸಿತು.

"ಏಳು ಕ್ಯಾಂಪ್ ಬೆಲ್ ಬೇಗ ನಿರ್ಧಾರ ತಿಳಿಸು"

"ನನಗೆ ಸಾಧ್ಯವಿಲ್ಲ"

"ಸಾಧ್ಯವಾಗುವ ಹಾಗೆ ಮಾಡಲೇ ಬೇಕು ನಿನಗೆ ಬೇರೆದಾರಿಯಿಲ್ಲ. ತಡಮಾಡಬೇಡ.

ಒಂದುಕ್ಷಣ ಹಿಂದುಮುಂದು ನೋಡಿದ. "ಮಹಡಿ ಮೇಲೆ ಬೆಂಕಿ ವ್ಯವಸ್ಥೆ ಇದೆಯೇ?"

"ಇದೆ."

"ನಾನು ಮನೆಗೆ ಹೋಗಿ ಕೆಲವು ವಸ್ತುಗಳನ್ನು ತರಬೇಕಾಗಿದೆ."

"ಇಲ್ಲ ಅಲಾನ್ ಮನೆಯಿಂದ ಹೊರಗೆ ಹೋಗಲು ಬಿಡುವುದಿಲ್ಲ. ಏನೇನು ವಸ್ತುಗಳು ಬೇಕೋ ಈ ಕಾಗದದ ಮೇಲೆ ಬರಿ" ಕ್ಯಾಂಪ್ ಬೆಲ್ ಡೋರಿಯನ್ ಕಡೆ ಆಶ್ಚರ್ಯದಿಂದ ನೋಡಿ ಕಾಗದ ತೆಗೆದುಕೊಂಡು ಅದರ ಮೇಲೆ ಬೇಕಾದ ವಸ್ತುಗಳನ್ನು ಬರೆದ. ಡೋರಿಯನ್ ಅದನ್ನು ಓದಿದ ನಂತರ ಕರೆಗಂಟೆ ಮಾಡಿದ, ಕೂಡಲೇ ಬಂದ ಸೇವಕನ ಕೈಗೆ ಕೊಟ್ಟು ಆದಷ್ಟು ಬೇಗ ಹಿಂತಿರುಗಿ ಬರುವಂತೆ ಆದೇಶಿಸಿದ. ಬರುವಾಗ ಇದರಲ್ಲಿ ಸೂಚಿಸಿದ ಎಲ್ಲ ವಸ್ತುಗಳನ್ನು ಕ್ಯಾಂಪ್‌ಬೆಲ್‌ನ ಸಹಾಯಕನಿಂದ ಖಚಿತಪಡಿಸಿಕೊಂಡು ತರಲು

ಆದೇಶಿಸಿದ. ಕ್ಯಾಂಪ್‌ಬೆಲ್ ಕುರ್ಚಿಯಿಂದ ಎದ್ದು ಚಿಮ್ನಿಪೀಸ್ ಇದ್ದ ಕಡೆ ಹೋದ. ಡೋರಿಯನ್ ಗ್ರೇನತ್ತ ದೃಷ್ಟಿ ಹಾಯಿಸಿದಾಗ ಅವನ ಕಣ್ಣು ತುಂಬಿ ಬಂದದ್ದನ್ನು ಗಮನಿಸಿದ. ಅವನಿಗೆ ಮತ್ತಷ್ಟು ಸಿಟ್ಟು ಬಂತು. ಕೆಟ್ಟ ಹೆಸರು! ಎಂಥಕೆಟ್ಟ ಹೆಸರು ತಗೊಂಡೆ!"ಎಂದು ಗುಣುಗುಣಿಸಿದ. "ಹುಷ್‌ಅಲಾನ್ ನನ್ನ ಪ್ರಾಣ ಉಳಿಸಿದೆ"

"ನಿನ್ನ ಪ್ರಾಣ! ಎಂಥ ಪ್ರಾಣ ಇದು! ದಿನ ದಿನಕ್ಕೂ ಅಧಃ ಪಾತಾಳಕ್ಕೆ ಇಳಿದು ಹೋದೆ. ಕಡೆಗೆ ಕೊಲೆ ಮಾಡುವ ಮಟ್ಟಕ್ಕೂ ಹೋದೆ. ಈಗ ನಾನು ಮಾಡ ಹೊರಟಿರುವುದು, ಮಾಡಲು ನೀನು ಬಲಾತ್ಕರಿಸಿದ್ದು, ನಿನ್ನ ಪ್ರಾಣ ಉಳಿಸುವ ಕಳಕಳಿಯಿಂದಲ್ಲ."

"ಅಲಾನ್" ಒಂದು ನಿಟ್ಟುಸಿರು ಬಿಟ್ಟು ಮುಂದುವರೆಸಿದ. ನಿನ್ನ ಬಗ್ಗೆ ತೋರಿದ ಮರುಕದಲ್ಲಿ ಎಳ್ಳಷ್ಟಾದರೂ ನನಗೆ ನೀನು ತೋರಿರಬೇಕಿತ್ತು" ಎಂದು ಹೇಳಿ ಮುಖ ಬೇರೆ ಕಡೆ ಮಾಡಿ ನಿಂತ. ಒಂದು ಹತ್ತು ನಿಮಿಷಗಳ ನಂತರ ಬಾಗಿಲು ತಟ್ಟಿದ ಸದ್ದಾಯಿತು. ಡೋರಿಯನ್ ಸೇವಕ, ದೊಡ್ಡ ಪೆಟ್ಟಿಗೆಯೊಂದರಲ್ಲಿ ಬೇಕಾಗಿದ್ದ ಕೆಮಿಕಲ್ಸ್ ಪ್ಲಾಟಿನಮ್ ವೈರ್, ಕಬ್ಬಿಣದ ಕ್ಲ್ಯಾಂಪಗಳನ್ನು ತುಂಬಿ ತಂದಿದ್ದ.

"ಇವುಗಳನ್ನೆಲ್ಲ ಇಲ್ಲಿ ಇಡಲಾ ಯಜಮಾನರೇ" ಕ್ಯಾಂಪ್‌ಬೆಲ್‌ನನ್ನು ಕೇಳಿದ.

"ಅಲ್ಲೇ ಇಡು."ಎಂದು ಡೋರಿಯನ್ ಉತ್ತರಿಸಿದ. ಫ್ರಾನ್ಸಿಸ್, ಈಗ ನೀನು ನನಗೆ ಇನ್ನೊಂದು ಕೆಲಸ ಮಾಡಿಕೊಡಬೇಕಾಗಿದೆ. ಅದೇ ಆ ರಿಚ್‌ಮಂಡ್‌ನಲ್ಲಿ ಹೂಗಳನ್ನು ಮಾರುತ್ತಾನಲ್ಲ ಅವನ ಹೆಸರೇನು?"

"ಹಾರ್ಡನ್ ಸರ್"

"ಸರಿ ಹಾಗಾದರೆ ಅವನ ಬಳಿ ಹೋಗಿ ಒಂದಷ್ಟು ಆರ್ಕಿಡ್‌ಗಳನ್ನು ತೆಗೆದುಕೊಂಡು ಬಾ" ಡೋರಿಯನ್ ಕ್ಯಾಂಪ್‌ಬೆಲ್‌ನತ್ತ ನೋಡುತ್ತಾ, "ನಿನ್ನ ಪ್ರಯೋಗಗಳಿಗೆ ಇನ್ನೂ ಎಷ್ಟು ಸಮಯ ಬೇಕಾಗಬಹುದು" ಎಂದು ಸಮಾಧಾನದ ದನಿಯಲ್ಲಿ ವಿಚಾರಿಸಿದ.

ಕ್ಯಾಂಪ್‌ಬೆಲ್ ಬುಸುಗುಟ್ಟುತ್ತಾ ಸಿಟ್ಟಿನಿಂದ

"ಇನ್ನೂ ಐದಾರುಗಂಟೆ ಆಗಬಹುದು" ಎಂದ. "ಫ್ರಾನ್ಸಿಸ್, ತೊದರೆಯೇನಿಲ್ಲ. ಸಾಕಷ್ಟು ಸಮಯ ಇದೆ. ಏಳೂವರೆ ಅಷ್ಟು ಹೊತ್ತಿಗೆ ಬಂದರೆ ಆಯಿತು. ನೀನು ನನ್ನ ಬಟ್ಟೆಗಳನ್ನು ತೆಗೆದು ಇರಿಸಿಬಿಡು.. ಊಟಕ್ಕೂ ನಾನು ಇರುವುದಿಲ್ಲವಾದ ಕಾರಣ, ನನ್ನ ಯೋಚನೆ ಮಾಡದೆ ನಿನ್ನ ಪಾಡಿಗೆ ಹಾಯಾಗಿ ಇರು" ಧನ್ಯವಾದಗಳು ಯಜಮಾನರೇ" ಕೋಣೆಯಿಂದ ಹೊರಹೋಗುತ್ತಾ ಹೇಳಿದ.

"ಅಲಾನ್ ಈಗ ಕೆಲಸಕ್ಕೆ ಶುರುಮಾಡು ನಮ್ಮ ಹತ್ತಿರ ಹೆಚ್ಚು ಸಮಯ ಇಲ್ಲ. ಅಬ್ಬಬ್ಬ ಈ ಪೆಟ್ಟಿಗೆ ಎಷ್ಟು ಭಾರವಾಗಿದೆ. ನಾನು ಇದನ್ನು ಮೇಲೆ ಹೊತ್ತೊಯ್ಯುತ್ತೇನೆ. ಉಳಿದ ವಸ್ತುಗಳನ್ನು ನೀನು ತೆಗೆದುಕೊಂಡು ಬಾ" ಅಧಿಕಾರವಾಣಿಯಿಂದ ಹೇಳಿದ ಕ್ಯಾಂಪ್‌ಬೆಲ್ ಸಿಟ್ಟಿನಿಂದ ಕುದಿಯುತ್ತಿದ್ದ. ಇಬ್ಬರೂಶ ಮೇಲಿನ ಮಹಡಿಯತ್ತ ಹೊರಟರು.

ಹತ್ತಿಹೋದ ಮೇಲೆ ಡೋರಿಯನ್ ಶವವಿದ್ದ ಕೋಣೆಯ ಬಾಗಿಲನ್ನು ತೆರೆದ. ಆದರೆ ಒಳಗೆ ಹೋಗದೆ ನಿಂತ. ಅಸ್ವಸ್ಥನಾದ. ಕಂಪಿಸಿದ.

"ಅಲಾನ್ ಒಳಗೆ ಬರಲು ನನ್ನಿಂದಾಗುತ್ತಿಲ್ಲ"

"ನನಗೇನೂ ಅಭ್ಯಂತರ ಇಲ್ಲ. ಅಲ್ಲದೆ ನೀನು ಬೇಕಾಗಿಯೂ ಇಲ್ಲ" ತಣ್ಣಗೆ ಹೇಳಿದ.

ಡೋರಿಯನ್ ಬಾಗಿಲನ್ನು ಅರ್ಧ ತೆರೆದ. ತೆಗೆಯುವಾಗ ಅವನ ಭಾವಚಿತ್ರದಲ್ಲಿನ ಮುಖ ಸೂರ್ಯ ಬೆಳಕಿನಲ್ಲಿ ಕಾಣಿಸಿತು. ಅದರ ಮುಂದೆ ಪರದೆ ಕೆಳಗೆ ಬಿದ್ದಿತ್ತು. ಮೊಟ್ಟ ಮೊದಲ ಬಾರಿಗೆ ಭಾವಚಿತ್ರವನ್ನು ಮರೆ ಮಾಡಿ ಇಡುವುದನ್ನು ಮರೆತಿದ್ದುದರ ನೆನಪು ಬಂತು ಕೂಡಲೇ ಓಡಿದ. ಆದರೆ ಮುಂದೆ ಹೋಗಲಾಗದೆ ಎರಡು ಹೆಜ್ಜೆ ಹಿಂದೆ ಉಳಿದ. ಮೈಕಂಪಿಸಿತು.

ಅದೇನದು ಹೇಸಿಗೆಯೆನಿಸುವ ಕೆಂಪು ಬಿಂದು ಕೈ ಮೇಲೆ ಕಾಣಿಸಿಕೊಂಡಿದೆ. ಕ್ಯಾನ್‌ವಾಸೇ ರಕ್ತವನ್ನು ಬೆವರುತ್ತಿದ್ದೆಯೇನೊ ಎನ್ನುವ ಅನುಮಾನ!

ತಣ್ಣಗೆ ಕುರ್ಚಿಯ ಮೇಲಿಂದ ಮೇಜಿನ ಮೇಲೆ ತಲೆಯಿರಿಸಿಕೊಂಡು ಬಿದ್ದಿರುವ ಶವ, ಕದಲದೆ ಇದ್ದಂತೆ ಇದೆ. ಆದರೆ ಕ್ಯಾನ್ ವಾಸ್ ಮೇಲಿನ ಚಿತ್ರ ಅತ್ಯಂತ ಭಯಾನಕ ಎನಿಸುತ್ತಿದೆ. ನೋಡಿದರೆ ಹೆದರಿ ಸಾಯುವಂತಾಗುತ್ತಿದೆ.

ದೀರ್ಘವಾಗಿ ಉಸಿರೆಳೆದು, ಅರ್ಧ ಕಣ್ಣು ಮುಚ್ಚಿಕೊಂಡು ವೇಗವಾಗಿ ಒಳನುಗ್ಗಿದ. ಶವದ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಹೋದವನೆ, ಪರದೆ ತೆಗೆದು ಭಾವಚಿತ್ರದ ಮೇಲೆ ಎಸೆದ. ಅಲ್ಲಿ ನಿಂತುಕೊಂಡ, ಒಳಗೊಳಗೇ ಭಯ ಆತಂಕ. ತಿರುಗಿ ನೋಡಲೂ ಹೆದರುತ್ತಿದ್ದ . ಅಷ್ಟರಲ್ಲಿ ಕ್ಯಾಂಪ್ ಬೆಲ್ ಭಾರವಾದ ಪೆಟ್ಟಿಗೆಯನ್ನು ಹೊತ್ತು ತರುತ್ತಿದ್ದ ಸದ್ದು ಕೇಳಿಸಿತು.

"ಈಗ ನನ್ನನ್ನು ಬಿಡು" ಗಡಸುಧ್ವನಿ ಕೇಳಿ ಬಂತು.

ತಿರುಗಿ ನೋಡಿ, ಬೇಗ ಬೇಗನೆ ಅಲ್ಲಿಂದ ಕಾಲುತೆಗೆದ. ಈಗ ಕ್ಯಾಂಪ್ ಬೆಲ್ ಶವವನ್ನು ನೋಡಿರಬಹುದೆ ಅವರಿಬ್ಬರೂ ಎಂದಾದರೂ ಭೇಟಿಯಾಗಿದ್ದಿರಬಹುದೆ? ಎಂದೆಲ್ಲಾ ಊಹಿಸಿಕೊಳ್ಳುತ್ತಿದ್ದ. ಮೆಟ್ಟಿಲು ಇಳಿಯುತ್ತಿದ್ದಂತೆ, ಬೀಗ ತೆಗೆಯುತ್ತಿದ್ದ ಸದ್ದು ಕೇಳಿಸಿತು.

ಏಳು ಗಂಟೆಯ ನಂತರ ಎಷ್ಟೋ ಹೊತ್ತಿಗೆ ಕ್ಯಾಂಪ್ ಬೆಲ್ ಲೈಬ್ರರಿ ಕೋಣೆಗೆ ಬಂದ. "ನನ್ನ ಕೆಲಸ ಎಲ್ಲ ಮುಗಿಯಿತು. ಗುಡ್ ಬೈ" ಇನ್ನೆಂದೂ ನನ್ನನ್ನು ಭೇಟಿಯಾಗಲು ಯತ್ನಿಸಬೇಡ."

ಕ್ಯಾಂಪ್ ಬೆಲ್ ಹೊರಟ ಸ್ವಲ್ಪ ಹೊತ್ತಿಗೆ ಶವವಿದ್ದ ಕೋಣೆಗೆ ಹೋದ, ಶವದ ಕುರುಹೂ ಇರಲಿಲ್ಲ. ಆದರೆ ನೈಟ್ರಿಕ್ ಆಸಿಡ್ ವಾಸನೆ ಕೋಣೆಯಲ್ಲೆಲ್ಲ ವ್ಯಾಪಿಸಿತ್ತು.

❖

# ಅಧ್ಯಾಯ - 15

ಆ ಸಂಜೆ ಎಂಟೂವರೆಗೆ ಚೆನ್ನಾಗಿ ಶೃಂಗಾರ ಮಾಡಿಕೊಂಡು ಲೇಡಿ ನರ್‌ಬರೋ ಮನೆಗೆ ತೆರಳಿದ. ಹಣೆಯ ಮೇಲಿನ ನರಗಳು ಬಿಗಿಗೊಳ್ಳುತ್ತಿದ್ದವು. ಎದೆ ಹೊಡೆದು ಕೊಳ್ಳುತ್ತಿತ್ತು. ಆದರೆ ತನ್ನ ಅತಿಥೇಯಳ ಕೈ ಚುಂಬಿಸಿದಾಗ ಯಾವುದೇ ಭಾವಾವೇಶಕ್ಕೆ ಒಳಗಾಗದೆ ಮಾಮೂಲಿನಂತೆ ಪ್ರಶಾಂತವಾಗಿದ್ದ. ನೋಡಿದವರ್‍ಯಾರಿಗೂ ಆ ರಾತ್ರಿ ಡೋರಿಯನ್ ಭಯಾನಕ ಪರಿಸ್ಥಿತಿಯ ಮೂಲಕ ಹಾದು ಬಂದಿದ್ದಾನೆಂದು ಊಹಿಸಲೂ ಸಾಧ್ಯವಿರಲಿಲ್ಲ. ಸುಕೋಮಲ ಕೈಗಳು. ಸದಾ ಹಸನ್ಮುಖಿಯಾಗಿ ಇರುವ ಮುಖ, ಪಾಪದ ಕೆಲಸಗಳು, ಘೋರ ಕೃತ್ಯಗಳು ಎಸಗಬಲ್ಲವೇ? ಆ ಸಮಯದಲ್ಲಿ ತಾನೂ ಕೂಡಾ ಸಮಾಧಾನವಾಗಿ ಇದ್ದುದು ಅವನಿಗೆ ಆಶ್ಚರ್ಯವೆನಿಸಿತ್ತು. ಹೇಗೆ ಸಾಧ್ಯ? ಎಂಬ ಸಂದೇಹವೂ ಮೂಡಿತು.

ನಾರ್‌ಬರೋ ಕರೆದಿದ್ದ ಪಾರ್ಟಿಗೆ ಡೋರಿಯನ್ ವಿಶೇಷ ಅತಿಥಿಯಾಗಿ ಬಂದಿದ್ದ. ಸದ್ಯ ತಾನು ಡೋರಿಯನ್‌ನನ್ನು ಪ್ರಾಯದಲ್ಲಿದ್ದಾಗ ಮೊದಲೇ ನೋಡಲಿಲ್ಲವಲ್ಲ? ಇಲ್ಲವಾದರೆ ಅವನನ್ನು ಹುಚ್ಚು ಪ್ರೀತಿಯಲ್ಲಿ ಮುಳುಗಿಸಿ ಬಿಡುತ್ತಿದ್ದ ಎಂದು ತಮಾಷೆಯಾಗಿ ಹೇಳಿದಳೂ ಕೂಡಾ.

ಪಾರ್ಟಿಗೆ ಸುಮಾರು ಜನ ಬಂದಿದ್ದರು. ಪ್ಯಾಷನಬಲ್ ಆದ ಹೆಂಗಸರು. ಪರಸ್ಪರ ಕಥೆಗಳನ್ನು ಹೇಳಿಕೊಂಡು ನಗುತ್ತಿದ್ದರು. ತಮ್ಮ ತಮ್ಮಲ್ಲೇ ಒಬ್ಬೊಬ್ಬರನ್ನೂ ಕುರಿತು ತಮಾಷೆಯಾಗಿ ಮಾತಾಡಿಕೊಳ್ಳುತ್ತಾ ವದಂತಿಗಳನ್ನೂ ಹುಟ್ಟು ಹಾಕುತ್ತಿದ್ದರು.

ಅವನಿಗೆ ಸ್ವಲ್ಪ ಬೇಸರವಾಯಿತು. ಈ ಹೆಂಗಸರ ಮಾತುಗಳು, ನಗು, ವಯ್ಯಾರ, ಎಲ್ಲವೂ ನೋಡಿದಾಗ ಸಾಕೆನಿಸಿತ್ತು. ಬಂದದ್ದೇ ತಪ್ಪಾಯಿತೆಂದುಕೊಳ್ಳುತ್ತಿರುವಷ್ಟರಲ್ಲಿ ಹ್ಯಾರಿ

ಬರುತ್ತಿರುವ ಸೂಚನೆಯಿಂದ ಸ್ವಲ್ಪ ನಿರಾಳವಾಗಿ ನಿಟ್ಟುಸಿರು ಬಿಟ್ಟ.

ಅವನಿಗೆ ಯಾಕೋ ಊಟ ಸೇರಲಿಲ್ಲ. ಲೇಡಿ ನಾರ್ ಬರೋ ಅದನ್ನು ಗಮನಿಸಿ, "ಇದೇನು? ನಿನಗಾಗಿ ವಿಶೇಷವಾಗಿ ಈ ಪದಾರ್ಥಗಳನ್ನು ಆರ್ಡರ್ ಮಾಡಿ ತರಿಸಿರುವಾಗ ಹೀಗೆ!" ಎಂದು ಕೇಳಿದಳು. ಲಾರ್ಡ್ ಮಧ್ಯೆ ಮಧ್ಯೆ ಇವನತ್ತ ಸುಮ್ಮನೆ ನೋಡುತ್ತಿದ್ದ. ಅವನ ಮೌನವನ್ನೂ ಗಮನಿಸುತ್ತಿದ್ದ. ಅಲ್ಲದೆ ಅವನ ನಡವಳಿಕೆಯಲ್ಲಿಯೂ ಸ್ವಲ್ಪ ಬದಲಾವಣೆಯನ್ನು ಗಮನಿಸಿದ. ವೈಟರ್ ಅವನ ಖಾಲಿಯಾದ ಗ್ಲಾಸಿಗೆ ಆಗಾಗ ಬಂದು ವೈನ್ ತುಂಬಿಸುತ್ತಿದ್ದ.

"ಡೋರಿಯನ್ ಏನಾಗಿದೆ ನಿನಗೆ? ಯಾಕೋ ಒಂದು ಥರಾ ಇದ್ದೀಯಲ್ಲ."

"ಬಹುಶಃ ಯಾರದೋ ಪ್ರೇಮದಲ್ಲಿ ಬಿದ್ದಿರಬೇಕು." ಎಂದಳು ನಾರ್‌ಬರೊ... ಹೇಳಿದರೆ ನನಗೆಲ್ಲಿ ಹೊಟ್ಟೆಕಿಚ್ಚಾಗುತ್ತೋ ಅಂತ ಹೆದರಿರಬೇಕು ಎಂದು ಮಾತು ಮುಂದುವರೆಸಿದಳು. "ಹಾಗೆ ಯೋಚಿಸುವುದು ಸರಿಯಾದ್ದೇ! ನಿಜ ನನಗೆ ಹೊಟ್ಟೆಕಿಚ್ಚು ಆಗಿಯೇ ಆಗಿತ್ತು". ಎಂದು ಕ್ಷಣ ಮೌನದ ನಂತರ ಮತ್ತೂ ಮುಂದುವರೆಸಿದಳು.

"ಡಿಯರ್ ಲೇಡಿ ನಾರ್ ಬರೋ, ಒಂದು ವಾರದಿಂದ ಪ್ರೇಮ ಮಾಡೋಕೆ ಸಾಧ್ಯವೇ ಆಗಿಲ್ಲ. ಯಾಕೆಂದರೆ ನಗುತ್ತಾ ಹೇಳಿದ, ಮೇಡಂ ಫೆರೋಲ್ ಊರಿನಲ್ಲಿಯೇ ಇಲ್ಲ" ಎಂದು. ನೀವು ಗಂಡಸರು ಹೋಗಿ ಹೋಗಿ ಆ ಹೆಂಗಸಿಗೆ ಯಾಕೆ ಸಾಯ್ತೀರೋ ನನಗಂತೂ ಅರ್ಥ ಆಗೊಲ್ಲ."

"ಯಾಕೇಂದ್ರೆ ಆಕೆ ನೀನು ಚಿಕ್ಕವಳಾಗಿದ್ದುದನ್ನು ಈಗಲೂ ನೆನಪಿಸಿಕೊಳ್ತಾಳೆ. ನಿನ್ನ ಮತ್ತು ನಮ್ಮ ನಡುವಿನ ಸಂಪರ್ಕ ಸೇತುವೆಯಾಗಿ ಉಳಿದಿರೋದು ಅವಳೊಬ್ಬಳೇ. ಮಂಡಿ ಮೇಲೆ ಧರಿಸಿಕೊಳ್ಳುತ್ತಿದ್ದ ನಿನ್ನ ಫ್ರಾಕ್‌ಗಳನ್ನು ಈಗಲೂ ನೆನಪಿಸಿಕೊಳ್ತಾಳೆ" ಎಂದು ಹೆನ್ರಿ ಮಧ್ಯೆ ಪ್ರವೇಶಿಸಿ ಹೇಳಿದ.

"ಅದೆಲ್ಲಾ ಸುಳ್ಳು ಅವಳಿಗೆ ಅದೆಲ್ಲಾ ನೆನಪಿಲ್ಲ, ಆದರೆ ಅವಳು ಮಾತ್ರ ಬಹಳ ಚೆನ್ನಾಗಿದ್ದಳು." "ಆಗೇನು ಈಗಲೂ ಹಾಗೇ ಸುಂದರವಾಗಿದ್ದಾಳೆ. ಫ್ರೆಂಚ್ ಕಾದಂಬರಿಯಲ್ಲಿ ಬರುವ ಕಥಾನಾಯಕಿಯಂತೆ, ನಿಜವಾಗಿಯೂ ಅವಳು ಅದ್ಭುತ ಸುಂದರಿ. ಅನೇಕ ಅಚ್ಚರಿಗಳನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡಿರುತ್ತಾಳೆ. ತನ್ನ ಕುಟುಂಬದ ಮೇಲೆ ತುಂಬಾ ಪ್ರೀತಿ. ತನ್ನ ಮೂರನೇ ಗಂಡ ತೀರಿಕೊಂಡಾಗ ನೋವಿನಿಂದ ಅವಳ ಕೂದಲು ಸಾಕಷ್ಟು ಹಣ್ಣಾಯಿತು."

"ಹೆನ್ರಿ ಯಾಕೆ ಹೀಗೆ ಮಾತಾಡ್ತೀ?" ಡೋರಿಯನ್ ಹೇಳಿದ.

"ಇದಕ್ಕಿಂತ ಚೆನ್ನಾಗಿ ಮಾತಾಡೋಕೆ ಸಾಧ್ಯವೇ ಇಲ್ಲ" ಎಂದು ನಾರ್ ಬರೋ ಹೇಳಿದಳು. ಮುಂದುವರೆಯುತ್ತಾ ಅವಳ ಮೂರನೇ ಗಂಡ ಅಂತಾ ಹೇಳಿದೆಯಲ್ಲವಾ? ಹಾಗಾದರೆ ಫೆರೋಲ್ ನಾಲ್ಕನೆಯವನೇನು?

"ಖಂಡಿತ ನಾರ್‌ಬರೋ"

"ನಾನಂತು ನಂಬೋದೇ ಇಲ್ಲ"

"ಹೋಗಲಿ ಡೋರಿಯನ್ ಗ್ರೇ ಯನ್ನು ಕೇಳಿ ನೋಡು"

"ನಿಜವೇ ಡೋರಿಯನ್?"

"ಅವಳು ಹಾಗಂತ ಹೇಳಿದಳು ಲೇಡಿ ನಾರ್‌ಬರೋ"

"ಅಬ್ಬ! ನಾಲ್ಕು ಜನ ಗಂಡಂದಿರೇ? ಪ್ರಚಂಡಳೇ ಇರಬೇಕು"

"ಓ ಅವಳಾ? ಯಾವುದಕ್ಕೂ ಹೆದರುವವಳಲ್ಲ ಇಷ್ಟಕ್ಕೂ ಆ ಫೆರಾರ್ ಎಂಥವನು? ಅವನ ಪರಿಚಯ ಇಲ್ಲ."

"ಅತ್ಯಂತ ಸುಂದರವಾದ ಹೆಂಗಸರ ಗಂಡಂದಿರು ಸಾಮಾನ್ಯವಾಗಿ ಕ್ರಿಮಿನಲ್ಸ್ ಆಗಿರ್ತಾರೆ" ಎಂದು ವೈನ್ ಹೀರುತ್ತಾ ಲಾರ್ಡ್ ಹೆನ್ರಿ ವಿವರಿಸಿದ.

ಲೇಡಿ ನಾರ್‌ಬರೋ ಕೈಲಿದ್ದ ಬೀಸಣಿಗೆಯಿಂದ ತಲೆಮೇಲೆ ಕುಟ್ಟಿ. "ಹೆನ್ರಿ ಜನ ಎಲ್ಲಾ ನಿನ್ನನ್ನು ಅದಕ್ಕೆ ದುಷ್ಟ ಅಂತ ಕರೆಯೋದು" ಎಂದಳು.

"ಯಾವ ಸೀಮೆ ಜನ ಹಾಗಂತಾರೆ? ನನಗಂತೂ ಗೊತ್ತಿಲ್ಲ. ಆದರೆ ನನ್ನ ಸಂಬಂಧ ಇರೋದು ಈ ಸೀಮೆಗೆ. ಇಲ್ಲಿ ನಾನು ಚೆನ್ನಾಗೇ ಇದ್ದೀನಿ"

ಆದರೆ ನಾರ್ ಬರೋ ಅವನ ಮಾತನ್ನು ಒಪ್ಪುವುದಿಲ್ಲವೆಂದು ತಲೆಯಾಡಿಸಿದಳು.

ಲಾರ್ಡ್ ಹೆನ್ರಿ ಗಂಭೀರವಾಗಿ ಒಂದೆರಡು ಕ್ಷಣ ಸುಮ್ಮನಿದ್ದು, "ಕೇಳೋಕೆ ಆಗದಿರುವಂಥಾದ್ದು! ಆದರೆ ಜನ ಒಬ್ಬರನ್ನು ಕುರಿತು, ಒಬ್ಬರ ಬೆನ್ನ ಹಿಂದೆ ಆಡಿ ಕೊಳ್ಳೋದಂತು ಸತ್ಯಸ್ಯ ಸತ್ಯ.

"ಅವನನ್ನು ಬದಲಾಯಿಸೋದು ಸಾಧ್ಯವೇ ಇಲ್ಲ" – ಡೋರಿಯನ್ ಕುರ್ಚಿಗೆ ಆತುಕೊಂಡು ಹೇಳಿದ "ಹಾಗೇ ಅನಿಸುತ್ತೆ.... ನೀವು ಹೀಗೆ ಮೇಡಂ ಫೆರಾಲ್ ಬಗ್ಗೆ ಕೆಲಸಕ್ಕೆ ಬಾರದ ಮಾತುಗಳನ್ನು ಆಡುವುದು ನೋಡಿದರೆ, ನಾನು ಇನ್ನೊಂದು ಮದುವೆ ಮಾಡ್ಕೊಬೇಕು ಅನಿಸುತ್ತೆ. ಆಗಲಾದರೂ ಮಾತಿನ ಚಲಾವಣೆಯಲ್ಲಿ ಇರ್ತೇನೆ."

"ಎಂದಿಗೂ ನೀನು ಇನ್ನೊಂದು ಮದುವೆ ಮಾಡಿಕೊಳ್ಳೋದಿಲ್ಲ. ಯಾಕೇಂದ್ರೆ ನೀನು ತುಂಬಾ ಸಂತೋಷವಾಗಿ, ಸಂತೃಪ್ತವಾಗಿದ್ದೆ. ಹೆಂಗಸೇನಾದರೂ ಎರಡನೆ ಮದುವೆ ಮಾಡಿಕೊಂಡಳೆಂದರೆ, ಅವಳಿಗೆ ಮೊದಲನೆ ಗಂಡನ ಮೇಲೆ ಪ್ರೀತಿ ಇರಲಿಲ್ಲಾಂತ ಅರ್ಥ. ಆದರೆ ಗಂಡಸು ಇನ್ನೊಂದು ಮದುವೆ ಮಾಡಿಕೊಂಡರೆ, ತನ್ನ ಮೊದಲನೆ ಹೆಂಡತಿಯನ್ನು ತುಂಬ ಪ್ರೀತಿಸುತ್ತಿದ್ದ ಅಂತ ಅರ್ಥ. ಹೆಂಗಸರು ಅದೃಷ್ಟ ಪರೀಕ್ಷೆ ಮಾಡಿಕೊಳ್ತಾರೆ. ಗಂಡಸರು ಗಂಡಾಂತರ ತಂದುಕೊಳ್ತಾರೆ.

"ನಾರ್ ಬರೋ ಏನೂ ಪರ್‌ಫೆಕ್ಟ್ ಮನುಷ್ಯ ಆಗಿರಲಿಲ್ಲ" ಗಟ್ಟಿಯಾಗಿ ಹೇಳಿದಳು ಲೇಡಿ ನಾರ್ ಬರೋ.

"ಅವನು ಪರ್‌ಫೆಕ್ಟ್ ಆಗಿದ್ದಿದ್ದರೆ, ನೀನು ಅವನನ್ನು ಪ್ರೀತಿಸುತ್ತಿರಲಿಲ್ಲ. ಪ್ರೀತಿಯ ಮೇಡಂ ಹೆಂಗಸರು ಗಂಡಸರನ್ನು ಅವರ ಕೊರತೆ ಅಥವಾ ದೋಷಗಳಿಗಾಗಿ ಪ್ರೀತಿಸುತ್ತಾರೆ – ಇವೆಲ್ಲ

ನಮ್ಮಲ್ಲಿ ದಂಡಿಯಾಗಿ ಇದ್ದಾಗ, ನಮ್ಮೆಲ್ಲ ತಪ್ಪುಗಳಿಗೂ ಕ್ಷಮೆ ಕೊಡುತ್ತಲೇ ಇರುತ್ತಾರೆ. ಇದೆಲ್ಲ ಹೇಳಿದೆ ಅಂತ ನೀನೆಂದೂ ನನ್ನನ್ನು ಡಿನ್ನರ್‌ಗಾಗಿ ಕರೆಯೋದೇ ಇಲ್ಲ. ನನಗೆ ಗೊತ್ತು ನಾನು ಹೇಳ್ತಿರೋದು ನಿಜ" ಲೇಡಿ ನಾರ್ ಬರೋ.

"ಹೌದು ಖಂಡಿತ ನಿಜವೇ ಹೆನ್ರಿ. ನಿಮ್ಮಲ್ಲಿನ ದೋಷಗಳಿಗಾಗಿ ಹೆಂಗಸರು ಪ್ರೀತಿಸದಿದ್ದರೆ, ನೀವೆಲ್ಲ ಎಲ್ಲಿ ಇರ್ತಿದ್ದಿರಿ? ನಿಮ್ಮಲ್ಲಿ ಯಾರೊಬ್ಬರಿಗೂ ಮದುವೇನೇ ಆಗುತ್ತಿರಲಿಲ್ಲ. ನೀವೆಲ್ಲಾ ಅವಿವಾಹಿತರಾಗಿ ಉಳಿದು ನಿಟ್ಟುಸಿರು ಬಿಡಬೇಕಾಗುತ್ತಿತ್ತು. ಆದರೆ ಅದರಿಂದ ಹೆಚ್ಚಿನ ವ್ಯತ್ಯಾಸವೇನೂ ಆಗೋದಿಲ್ಲ. ಈಗ ನಿಮ್ಮಲ್ಲೇ ಎಷ್ಟೋ ಮಂದಿ ಮದುವೆ ಆಗಿದ್ದರೂ ಕೂಡಾ ಅವಿವಾಹಿತರಂತೆಯೇ ಇದ್ದೀರಿ."

"ಪ್ರಪಂಚದ ಗಂಡಸರೆಲ್ಲ ಹಾಗಿದ್ದರೇನೇ ಒಳ್ಳೇದು ಅಂತ ಅನ್ನಿಸುತ್ತೆ. ಬದುಕು ಬರಿ ನಿರಾಶೆಗಳ ಸಂತೆ."

"ಹುಡುಗ, ಜೀವನವೇ ಮುಗಿದುಹೋಯಿತು ಅಂತ ನನ್ನ ಹತ್ತಿರ ಹೇಳಬೇಡ. ಲಾರ್ಡ್ ಹೆನ್ರಿ, ಅವನೊಬ್ಬ ಧೂರ್ತ. ಒಂದೊಂದು ಸಲ ನನಗೂ ಅವನ ಹಾಗೇ ಇರಬೇಕೂಂತ ಅನಿಸುತ್ತೆ ಆದರೆ ನೀನು ಬಹಳ ಒಳ್ಳೆಯವನು. ಒಳ್ಳೆಯವನಾಗಿರಬೇಕೂಂತಲೇ ಹುಟ್ಟಿದ್ದೀ ಅನಿಸುತ್ತೆ. ನಿನಗೆ ಒಬ್ಬ ಒಳ್ಳೆ ಸಂಗಾತಿಯನ್ನು ಹುಡುಕಿಕೊಡಬೇಕೂಂತ ಅನಿಸುತ್ತೆ. ಏನಂತೀಯ ಹೆನ್ರಿ, ಗ್ರೇ ಬೇಗ ಮದುವೆ ಆಗಿಬಿಡಬೇಕು."

"ನಾನೂ ಅದನ್ನೇ ಯಾವಾಗಲೂ ಹೇಳ್ತಾ ಇದ್ದೀನಿ"

"ಹಾಗಾದರೆ ಅವನಿಗೆ ಯೋಗ್ಯಳಾದ ಹೆಂಡತಿಯನ್ನು ಹುಡುಕಬೇಕು. ಇವತ್ತೇ ಸಂಜೆಯಿಂದ ಅಂಥ ಹೆಂಗಸರನ್ನು ಪತ್ತೆ ಮಾಡಿ ಒಂದು ಪಟ್ಟಿ ಮಾಡೋಕೆ ಪ್ರಯತ್ನಿಸ್ತೀನಿ."

"ಅವರ ವಯಸ್ಸನ್ನೂ ದೃಷ್ಟೀಲಿ ಇಟ್ಕೊಂಡು?" ಡೋರಿಯನ್ ಕೇಳಿದ.

"ಖಂಡಿತ. ಆದರೆ ಸ್ವಲ್ಪ ಹಾಗೂ ಹೀಗೂ ಮಾಡಿ. ಆದರೆ ಯಾವುದನ್ನೂ ಆತುರದಲ್ಲಿ ಮಾಡೋದು ಬೇಡ. ಡೋರಿಯನ್‌ಗೆ ಅನುರೂಪಳಾದ ಹೆಂಡತಿ ಬರಬೇಕು. ಅವನ ಬದುಕಿನಲ್ಲಿ ಸಂತೋಷ ತುಂಬಿರಬೇಕು ಅನ್ನೋದೆ ನನ್ನಾಸೆ."

"ಸಂತೋಷದ ಮದುವೆ! ಅಂತ ಜನ ಮಾತಾಡುವುದರಲ್ಲಿ ಅರ್ಥಾನೇ ಇಲ್ಲ." ಲಾರ್ಡ್ ಹೆನ್ರಿ ಉದ್ಗರಿಸಿದ "ಒಬ್ಬ ಗಂಡಸು ಯಾವ ಹೆಣ್ಣಿನ ಜೊತೆಗಾದರೂ, ಪ್ರೀತಿಸದೆ ಇದ್ದಲ್ಲಿ ಸಂತೋಷವಾಗಿಯೇ ಇರ್ತಾನೆ."

"ಆಹಾ! ಎಂಥ ಸಿನಿಕನಿದ್ದೀಯ" ಎಂದು ಲೇಡಿ ನಾರ್ ಬರೋ ಕುಳಿತಿದ್ದ ಕುರ್ಚಿಯನ್ನು ಓಂದಕ್ಕೆ ಸರಿಸಿಕೊಳ್ಳುತ್ತಾ ಹೇಳಿದಳು. ಪಕ್ಕದಲ್ಲಿದ್ದ ಲೇಡಿ ರುಕ್ಸ್‌ಟನ್‌ಳತ್ತ ತಿರುಗಿದಳು "ನೀನು ಬಂದು ನಮ್ಮ ಜೊತೆ ಊಟಮಾಡಿದರೆ ತುಂಬಾ ಖುಷಿಯಾಗುತ್ತೆ. ಹೇಳು ನಿನಗೆ ಎಂಥವರ ಕಂಪನಿ ಇಷ್ಟವಾಗುತ್ತೆ. ಅದೊಂದು ಉಲ್ಲಾಸ, ಸಂತೋಷಗಳ ಕೂಟ ಆಗಬೇಕು."

"ನನಗೋ ಯಾರಿಗೆ ಭವಿಷ್ಯ ಇರುತ್ತೋ ಅಂಥ ಗಂಡಸರು ಮತ್ತು ಭೂತಕಾಲವಿರುವ ಹೆಂಗಸರು ಇದ್ದರೆ ಚೆನ್ನಾಗಿರುತ್ತೆ" ಎಂದು ಹೆನ್ರಿ ಉತ್ತರಿಸಿದ. ಮತ್ತೆ "ಇಲ್ಲಾ ಆ ಪಾರ್ಟಿ ಬರೀ

ಕಿಟ್ಟೀ ಪಾರ್ಟಿಯಾಗಿಯೇ ಮಾಡಬೇಕೂಂತ ಅಂದುಕೊಂಡಿದ್ದೀಯ" ಎಂದು ಮುಂದುವರೆಸಿ ಹೇಳಿದ,

"ಬಹುಶಃ ಹಾಗೇ ಆಗುತ್ತೋ ಏನೋ" ಎಂದು ನಗುತ್ತಾ ಹೇಳಿ ಎದ್ದು ನಿಂತಳು. ನಂತರ "ರುಕ್ಸಟನ್ ಕ್ಷಮಿಸು. ನಿನ್ನ ಸಿಗರೇಟು ಇನ್ನೂ ಮುಗಿದಿಲ್ಲ ಅನ್ನೋದನ್ನು ಗಮನಿಸಲಿಲ್ಲ.

"ಪರವಾಗಿಲ್ಲ. ನಾನಂತು ತುಂಬಾ ಸ್ಮೋಕ್ ಮಾಡ್ತೀನಿ. ಆದರೆ ಇನ್ಮುಂದೆ ಆದಷ್ಟೂ ಕಡಿಮೆ ಮಾಡಲು ಪ್ರಯತ್ನಿಸ್ತೀನಿ."

"ಅಯ್ಯಯ್ಯೋ ಹಾಗೆ ಮಾಡಬೇಡ ಲೇಡಿ ರುಕ್ಸ್‌ಟನ್. ಕಡಿಮೆ ಮಾಡೋದು ಒಳ್ಳೇದಲ್ಲ ಸಾಕು ಅಂದ್ಕೊಳ್ಳೋದು ಕೆಟ್ಟದ್ದು ಬೇಕು ಅಂತ ಅನ್ನೋದು ಹಬ್ಬದಷ್ಟು ಸಂಭ್ರಮದ್ದು."

ಲೇಡಿ ರುಕ್ಸ್‌ಟನ್ ಕುತೂಹಲದಿಂದ ಅವನ ಕಡೆ ನೋಡಿದಳು. ನೀನು ಯಾವಾಗಾದರೂ ಒಂದು ದಿನ ಬಂದು ಅದು ಹೇಗೆ ಅನ್ನೋದನ್ನು ಸ್ವಲ್ಪ ವಿವರಿಸಿ ಹೇಳು. ಹೆನ್ರಿ, ತುಂಬ ಕುತೂಹಲಕರವಾದ ಸಿದ್ಧಾಂತ ಅಂತ ಅನಿಸುತ್ತೆ" ಎಂದು ಹೇಳುತ್ತಾ ಕೋಣೆಯಿಂದ ಹೊರಗೆ ಹೊರಟಳು.

"ನೋಡು, ಇನ್ನು ನಿನ್ನ ಪಾಲಿಟಿಕ್ಸ್. ಸ್ಕ್ಯಾಂಡಲ್ಸ್ ನಿಲ್ಲಿಸು. ಹೀಗೆ ನೀನು ಮಾಡ್ತಾ ಹೋದರೆ ನಾವು ಇಲ್ಲಿಂದ ಜಾಗಖಾಲಿಮಾಡಿ ಬೇರೆ ಕಡೆ ಹೋಗಬೇಕಾಗುತ್ತೆ."

ಗಂಡಸರೆಲ್ಲ ನಗುತ್ತಿದ್ದರು. ಡೋರಿಯನ್ ಗ್ರೇ ಎದ್ದು ಹೆನ್ರಿಯ ಪಕ್ಕಕ್ಕೆ ಬಂದ. ಹೆನ್ರಿಯ ತುಟಿಯ ಮೇಲೆ ತುಂಟ ನಗೆಯೊಂದು ಕಾಣಿಸಿಕೊಂಡಿತು.

"ಈಗ ಪರವಾಗಿಲ್ಲವೇ? ಊಟದ ಸಮಯದಲ್ಲಿ ಏನೋ ಬೇಸರದಲ್ಲಿ ಇದ್ದಂತೆ ಕಾಣಿಸಿತು. "ಏನಿಲ್ಲ ಚೆನ್ನಾಗಿಯೇ ಇದ್ದೀನಿ ಹೆನ್ರಿ. ಸ್ವಲ್ಪ ದಣಿವಾಗಿತ್ತು. ಅಷ್ಟೆ"

"ಅದು ಸರಿ ನಿನ್ನೆ ಯಾಕೆ ಅಷ್ಟೊಂದು ಆತುರದಲ್ಲಿ ಎದ್ದು ಹೋದೆ? ಇನ್ನೂ ಹನ್ನೊಂದು ಗಂಟೆ ಕೂಡಾ ಆಗಿರಲಿಲ್ಲ. ಅಷ್ಟು ಬೇಗ ಹೋಗಿ ಏನು ಮಾಡಿದೆ? ಮನೆಗೆ ತಾನೇ ಹೋದದ್ದು?"

ಡೋರಿಯನ್ ಒಂದು ಕ್ಷಣ ಅವನ ಕಡೆ ನೋಡಿದ. ಮುಖದಲ್ಲಿ ಸ್ವಲ್ಪ ಅಸಮಾಧಾನ ಇತ್ತು. "ಇಲ್ಲ ಹ್ಯಾರಿ" ಎಂದು ಕೊನೆಯಲ್ಲಿ ಹೇಳಿದ. ಬೆಳಗಿನ ಜಾವ ಮೂರುಗಂಟೆ ತನಕ ಮನೆಗೆ ಹೋಗಲೇ ಇಲ್ಲ.

"ಕ್ಲಬ್‌ಗೇನಾದರೂ ಹೋಗಿದ್ದೆಯಾ? "ಹೌದು" ಎಂದು ಹೇಳಿ ತುಟಿ ಕಚ್ಚಿ ಹಿಡಿದ. "ಅದರರ್ಥ ಅದಲ್ಲ. ನಾನು ಕ್ಲಬ್‌ಗೆ ಹೋಗಲೇ ಇಲ್ಲ. ಸುಮ್ಮನೆ ವಾಕ್ ಮಾಡಿದೆ. ನಾನು ಏನು ಮಾಡಿದೆ ಅನ್ನೋದೆ ಮರೆತು ಹೋಗಿದೆ. "ಅಬ್ಬ! ಅದೆಷ್ಟು ಪ್ರಶ್ನೆ ಕೇಳ್ತಿಯ? ಯಾವಾಗಲೂ ಬೇರೆಯವರು ಏನು ಮಾಡುತ್ತಾರೆ ಅನ್ನೋದರ ಬಗ್ಗೆಯೇ ನಿನ್ನ ಕಣ್ಣು ಕಿವಿ. ನಾನು ಮನೆ ತಲುಪಿದ ಸಮಯವನ್ನು ನಿರ್ದಿಷ್ಟವಾಗಿ ತಿಳಿದುಕೊಳ್ಳಬೇಕೆನ್ನುವ

ಕುತೂಹಲವಿದ್ದರೆ ಕೇಳಿಸಿಕೊ. ಸರಿಯಾಗಿ ಎರಡೂವರೆ ಆಗಿತ್ತು. ನಾನು ಹೊರಗಿನ ಕೀ ಮರೆತುಹೋಗಿದ್ದೆ. ನನ್ನ ಸೇವಕನೇ ಬಂದು ಬಾಗಿಲು ತೆಗೆದ. ಇನ್ನೂ ನಿನಗೆ ಅನುಮಾನ ಇದ್ದರೆ ಅವನ ಹತ್ತಿರ ವಿಚಾರಿಸ ಬಹುದು."

ಹೆನ್ರಿ ಭುಜ ಕುಣಿಸಿ ಹೇಳಿದ – ಗೆಳೆಯಾ ಅದೆಲ್ಲಾ ತಿಳಿದುಕೊಳ್ಳೋ ಉದ್ದೇಶ ನನಗಿಲ್ಲ. ಬಾ ಮೇಲೆ ಡ್ರಾಯಿಂಗ್ ರೂಂಗೆ ಹೋಗೋಣ ಹೇಳು ಡೋರಿಯನ್, ನಿನಗೆ ಏನೋ ಆಗಿದೆ, ಅದೇನೂಂತ ತಿಳಿಸು. ಇವತ್ತು ನೀನು ಯಾವಾಗಲೂ ಇರೋ ಹಾಗೆ ಇಲ್ಲ.

"ತಪ್ಪಾಗಿ ತಿಳ್ಕೋಬೇಡ, ನನ್ನ ಮೂಡ್ ಸರಿಯಾಗಿಲ್ಲ. ನನಗೆ ಸಿಟ್ಟು ಬರೋ ಹಾಗಿದೆ. ನಾಳೇನೋ ಅಥವಾ ನಾಳಿದ್ದೋ ನಾನೇ ಖುದ್ದಾಗಿ ಬರ್ತೀನಿ. ಲೇಡಿ ನಾರ್ ಬರೋಗೆ, ನಾನು ಕ್ಷಮೆ ಕೋರಿದೆ ಅಂತ ಹೇಳಿ ಬಿಡು. ನಾನೀಗ ಎಲ್ಲಿಗೂ ಬರೋ ಹಾಗೆ ಇಲ್ಲ. ನನಗೆ ಕೂಡಲೇ ಮನೆಗೆ ಹೋಗಬೇಕಾಗಿದೆ."

"ಆಯ್ತು ಡೋರಿಯನ್. ಪರವಾಗಿಲ್ಲ ಬಿಡು ನಾಳೆ ಅಂತು ಬರ್ತೀಯಾ ಅಲ್ವ?"

"ಆಯ್ತು. ಪ್ರಯತ್ನ ಮಾಡ್ತೀನಿ" ಅಂತ ಹೇಳಿ ಕೋಣೆಯಿಂದ ಹೊರಬಿದ್ದ. ಒಳಹೋಗುತ್ತಿದ್ದಂತೆಯೇ ತಾನು ಮಾಡಿದ ಕೊಲೆಯ ನೆನಪಿನಿಂದ ಉಂಟಾದ ಭೀತಿ ಕಾಡತೊಡಗಿತು. ಲಾರ್ಡ್ ಹೆನ್ರಿ ಸಾಮಾನ್ಯವಾಗಿ ಕೇಳಿದ ಪ್ರಶ್ನೆ ಅವನ ಅಂತರಾಳವನ್ನು ಕೆಣಕಿದಂತೆನಿಸಿತ್ತು. ಅಪಾಯಕಾರಿ ವಸ್ತುಗಳೆಲ್ಲವನ್ನೂ ಕೂಡಲೇ ನಾಶ ಮಾಡಬೇಕು ಎಂದುಕೊಂಡ. ಆದರೆ ಅವುಗಳನ್ನು ಮುಟ್ಟುವುದಕ್ಕೂ ಹಿಂಜರಿಯುತ್ತಿದ್ದ.

ಆದರೂ ಮಾಡಬೇಕಾದ್ದನ್ನು ಮಾಡಲೇಬೇಕಾಯಿತು. ಅವನಿಗೆ ಗೊತ್ತಿತ್ತು. ಬೇಸಿಲ್ ಹಾಲ್ ವಾರ್ಡ್‌ನ ಕೋಟು ಮತ್ತು ಹ್ಯಾಟನನ್ನು ಅಡಗಿಸಿಟ್ಟಿದ್ದ. ಅವುಗಳನ್ನು ತೆಗೆದು ಬೆಂಕಿಗೆ ಹಾಕಿದ. ಸುಟ್ಟ ಬಟ್ಟೆ, ಚರ್ಮದ ವಾಸನೆ ಅಸಹನೀಯವಾಗಿತ್ತು ಅವೆಲ್ಲ ಸುಟ್ಟು ಬೂದಿಯಾಗೋಕೆ ಮುಕ್ಕಾಲು ಗಂಟೆ ಬೇಕಾಯಿತು. ಕೈಗಳನ್ನು ಸುವಾಸನಾಯುಕ್ತ ವಿನಿಗರ್‌ನಿಂದ ತೊಳೆದುಕೊಂಡ. ಧಿಗ್ಗನೆ ಬೆಚ್ಚಿದ. ಎರಡು ಕಿಟಕಿಗಳ ಮಧ್ಯೆ ಎಬೊನಿ ಮರದಿಂದ ಮಾಡಿದ ಬೀರುವಿತ್ತು. ಅದರ ಮೇಲೆಲ್ಲಾ ದಂತದ ಕೆತ್ತನೆ ಚಿತ್ರಗಳಿದ್ದವು. ತುಂಬಾ ಆಕರ್ಷಕವಾಗಿತ್ತು ಮತ್ತು ಅವನಿಗೆ ಪ್ರಿಯವಾದುದಾಗಿತ್ತು. ಆದರೆ ಜೊತೆ ಜೊತೆಗೆ ಹೆದರಿಕೆಯನ್ನೂ ಹುಟ್ಟಿಸುತ್ತಿತ್ತು. ಏಕಕಾಲದಲ್ಲಿ ಅದರ ಬಗ್ಗೆ ಮೋಹವೂ ಇತ್ತು. ಹೇಸಿಗೆಯೂ ಎನಿಸಿತ್ತು. ಸಿಗರೇಟು ಹಚ್ಚಿದ ಮತ್ತೆ ಅದನ್ನು ಬಿಸಾಡಿದ. ಅವನಲ್ಲಿ ಏನೋ ಒಂದು ಥರಾ ಅದಮ್ಯ ಬಯಕೆಯೊಂದು ಪುಟಿಯಿತು. ಕಣ್ಣು ಎಳೆಯುತ್ತಿತ್ತು. ಆದರೂ ಅದರ ಕಡೆ ನೋಡುತ್ತಲೇ ಇದ್ದ. ಕಡೆಗೆ ದಿಢೀರನೆ ಎದ್ದು ಬೀರುವಿನ ಬಳಿಗೆ ಹೋಗಿ, ಬಾಗಿಲು ತೆಗೆದು ಅದರೊಳಗಿನ ಡ್ರಾಯರನ್ನು ಎಳೆದ. ಯಾವುದೋ ವಸ್ತುವಿಗಾಗಿ ತಡಕಾಡಿದ ಕಡೆಗೆ ಮೇಣದ ರೀತಿಯ ವಸ್ತುವೊಂದನ್ನು ಕೈಗೆತ್ತಿಕೊಂಡ.

ಕೆಲ ಕ್ಷಣಗಳು ಹಿಂಜರಿದ. ಹೊರಗೆ ವಿಪರೀತ ಸೆಕೆಯಿದ್ದರೂ ನಡುಗುತ್ತಿದ್ದ. ಗಡಿಯಾರದತ್ತ ನೋಡಿದ. ಹನ್ನೆರಡು ಗಂಟೆಗೆ ಇನ್ನೂ ಇಪ್ಪತ್ತು ನಿಮಿಷವಿತ್ತು. ಕೈಲಿದ್ದ

ಆ ಮೇಣದ ವಸ್ತುವನ್ನು ಬಾಕ್ಸ್‌ನಲ್ಲಿ ಇರಿಸಿ, ಡ್ರಾಯರ್ ಮುಚ್ಚಿ ನಂತರ ಕಾಬಿನೆಟ್‌ನ ಬಾಗಿಲಿಗೆ ಬೀಗ ಹಾಕಿ, ತನ್ನ ಮಲಗುವ ಕೋಣೆಯತ್ತ ಹೊರಟ. ಡೋರಿಯನ್ ಮಾಮೂಲಿ ಡ್ರೆಸಿನಲ್ಲಿದ್ದು ಮಫ್ಲರ್ ಒಂದರಿಂದ ತಲೆ ಮತ್ತು ಕೊರಳನ್ನು ಸುತ್ತಿಕೊಂಡ. ಮೆಲ್ಲಗೆ ಸದ್ದಾಗದಂತೆ ಮನೆಯಿಂದ ಹೊರ ನಡೆದ. ಸ್ವಲ್ಪ ದೂರದಲ್ಲಿ ಗಾಡಿಯೊಂದು ಕಾಣಿಸಿತು. ಗಾಡಿಯವನನ್ನು ಕೂಗಿ ಕರೆದ ಮತ್ತು ಪಿಸುದನಿಯಲ್ಲಿ ಹೋಗ ಬೇಕಾಗಿದ್ದ ವಿಳಾಸವನ್ನು ಹೇಳಿದ.

"ಸಾರ್ ಬಹಳ ದೂರಾ ಆಗುತ್ತೆ. ಬರಲು ಸಾಧ್ಯವಿಲ್ಲ" ಎಂದು ಗಾಡಿಯವ ಹೇಳಿದ.

ಡೋರಿಯನ್ ನಾಣ್ಯವೊಂದನ್ನು ತೋರಿಸುತ್ತಾ "ಇದು ನಿನಗೆ, ನೀನು ಗಾಡಿ ವೇಗವಾಗಿ ಓಡಿಸಿದರೆ, ಇನ್ನೂ ಒಂದು ನಾಣ್ಯ ಕೊಡ್ತೀನಿ"

"ಆಯ್ತು ಸಾರ್.... ಇನ್ನೊಂದು ಗಂಟೆ ಒಳಗೆ ನಿಮ್ಮನ್ನು ಅಲ್ಲಿಗೆ ಸೇರಿಸುತ್ತೇನೆ" ಎಂದು ಹೇಳಿ ಕೈಗೆ ನಾಣ್ಯಗಳು ಬಿದ್ದದ್ದೆ, ಕುದುರೆಗೆ ಚಾಟಿ ಬೀಸಿ, ಓಡಿಸಿದ.

❖

## ಅಧ್ಯಾಯ - 16

ಮಳೆ ಹನಿಸತೊಡಗಿತು. ಬೀದಿ ದೀಪಗಳು ಮಂಕಾಗಿ ಉರಿಯುತ್ತಿದ್ದವು. ತಿಂಡಿ ತೀರ್ಥ ಮದ್ಯಗಳನ್ನು ಒದಗಿಸುತ್ತಿದ್ದ ಅಂಗಡಿಗಳು ಬಾಗಿಲು ಮುಚ್ಚಿಕೊಳ್ಳುತ್ತಿದ್ದವು. ಹೆಂಗಸರು, ಗಂಡಸರು ಅಲ್ಲಲ್ಲಿ ಗುಂಪುಗಳಾಗಿ ತಮ್ಮ ತಮ್ಮ ಬಾಗಿಲುಗಳ ಸುತ್ತ ನಿಂತಿದ್ದರು. ಮದ್ಯದಂಗಡಿಗಳ ಒಳಗಿನಿಂದ ವಿಕಟನಗೆಯ ಅಸಹ್ಯ ದನಿ ಹೊಮ್ಮುತ್ತಿದ್ದವು. ಮತ್ತೆ ಇನ್ನೊಂದು ಕಡೆ ಕುಡುಕರು ಬಾಯಿಗೆ ಬಂದಂತೆ ಮಾತಾಡುತ್ತಾ ತೂರಾಡುತ್ತಿದ್ದರು.

ಗಾಡಿಯಲ್ಲಿ ಕುಳಿತಿದ್ದ ಡೋರಿಯನ್ ಗ್ರೇ ಲಂಡನ್ ನಗರದ ವಿಕಾರಗಳನ್ನು ಅಸ್ವಸ್ಥ ಮನಃಸ್ಥಿತಿಯಲ್ಲಿ ನೋಡುತ್ತಿದ್ದ. ಹೆನ್ರಿ ಒಂದು ಸಂದರ್ಭದಲ್ಲಿ - "ಆತ್ಮದ ಸುಧಾರಣೆ ಇಂದ್ರಿಯಗಳಿಂದಾಗಬೇಕು; ಇಂದ್ರಿಯಗಳ ಸುಧಾರಣೆ ಆತ್ಮದಿಂದ ಆಗಬೇಕು" ಎಂದು ಹೇಳಿದ್ದ ಮಾತುಗಳು ನೆನಪಾದವು. ಹಿಂದೊಮ್ಮೆ ಈ ಸಿದ್ಧಾಂತವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದ್ದ. ಈಗ ಮತ್ತೊಮ್ಮೆ ಪ್ರಯತ್ನಿಸಬೇಕೆಂದುಕೊಂಡ. ಅಫೀಮಿನ ಅಂಗಡಿಗಳು ಅಲ್ಲಿ ಕಾಣಿಸಿದವು. ಯಾರೇ ಬೇಕಾದರೂ ಘೋರಾತಿ ಘೋರ ಪಾಪಗಳನ್ನು ಅಲ್ಲಿ ಮರೆಯಲೂ ಬಹುದು; ಹಾಗೆಯೇ ಹೊಸ ಪಾಪಗಳಿಂದ ಹಳೆಯದನ್ನು ತೊಳೆದುಕೊಳ್ಳಲೂಬಹುದು.

ಆತ್ಮ ಮತ್ತು ಇಂದ್ರಿಯಗಳ ಸಂಬಂಧದ ಬಗ್ಗೆ ಹೆನ್ರಿ ಹೇಳಿದ್ದ ಮಾತುಗಳು ಮತ್ತೆ ಮತ್ತೆ ಅವನ ಕಿವಿಗಳಲ್ಲಿ ಅನುರಣಿಸತೊಡಗಿದವು. ಸಾವಿನಿಂದಾಗಿ ಆತ್ಮ ಅಸ್ವಸ್ಥವಾಗಿತ್ತು. ಅದನ್ನು ಇಂದ್ರಿಯಗಳಿಂದ ಸ್ವಸ್ಥವಾಗಿಸಲು ನಿಜವಾಗಿಯೂ ಸಾಧ್ಯವೇ? ನಿಷ್ಪಾಪಿಯೊಬ್ಬನ ಕೊಲೆಗೆ ಪರಿಹಾರವಾದರೂ ಏನು? ಖಂಡಿತ ಅದಕ್ಕೆ ಪರಿಹಾರವೆಂಬುದು ಇರುವುದು ಸಾಧ್ಯವೇ ಇಲ್ಲ. ಕ್ಷಮೆ ಎನ್ನುವುದು ಅಸಾಧ್ಯ. ಆದರೆ ವಿಸ್ಮೃತಿಯಿಂದ ಸಾಧ್ಯವಾಗಿಸಿಕೊಳ್ಳಬಹುದು.

ಹಾಗಾದರೆ ತಾನು ವಿಸ್ಮೃತಿಯ ಹಾದಿ ಹಿಡಿಯಬೇಕು. ನಡೆದದ್ದು ಯಾವುದನ್ನೂ ಕುರಿತು ಯೋಚಿಸಬಾರದು. ಒಬ್ಬರ ವಿಚಾರದಲ್ಲಿ ಅವನು ಯಾಕೆ ಹಾಗೆ ಮಾತಾಡಬೇಕಿತ್ತು? ಒಬ್ಬರ ನಡತೆಯ ಬಗ್ಗೆ ತೀರ್ಮಾನಿಸಿ ಹೇಳಲು ಅವನಿಗೆ ಯಾವ ಅಧಿಕಾರ ತಾನೇ ಇತ್ತು? ಅಥವಾ ಅಧಿಕಾರ ಕೊಟ್ಟವರಾದರೂ ಯಾರು? ಅವನು ಎಂತೆಂಥ ಮಾತಾಡಿದ. ಕೇಳಿ ಸಹಿಸಿಕೊಳ್ಳೋದಕ್ಕೆ ಸಾಧ್ಯವೇ ಇರಲಿಲ್ಲ.

ಎಷ್ಟೇ ವೇಗವಾಗಿ ಗಾಡಿ ಸಾಗಿದ್ದರೂ ಅವನಿಗೆ ತೀರಾ ನಿಧಾನವೆನಿಸುತ್ತಿತ್ತು. ಗಾಡಿಯವನಿಗೆ ಬೇಗ ಓಡಿಸಲು ಹೇಳಿದ. ಅಫೀಮು ಸೇವನೆಗೆ ಅವನ ಮನಸ್ಸು ಚಡಪಡಿಸುತ್ತಿತ್ತು. ಗಂಟಲು ಉರಿಯುತ್ತಿತ್ತು. ಕೈ ಕೈ ಹಿಸುಕಿಕೊಳ್ಳುತ್ತಿದ್ದ. ಆವೇಶಕ್ಕೆ ಒಳಗಾಗಿ ಕುದುರೆ ಬೆನ್ನಿಗೆ ಬೆತ್ತದಿಂದ ಹೊಡೆದ. ಗಾಡಿ ಚಾಲಕನೂ ನಗು ನಗುತ್ತಲೇ ಕುದುರೆಗೆ ಚಾಟಿ ಬೀಸುತ್ತಿದ್ದ.

ಅವನಿಗೆ ಇನ್ನೂ ಸಹಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಮಂಜು ಬೇರೆ ದಟ್ಟವಾಗುತ್ತಿತ್ತು. ಏನೋ ಒಂದು ಬಗೆಯ ಭೀತಿ ಅವನನ್ನು ಆವರಿಸಿತು. ಮಂಜು, ಕತ್ತಲು ತುಂಬಿದ ರಸ್ತೆಗಳನ್ನು ಹಾದು ಗಾಡಿ ಸಾಗುತ್ತಿತ್ತು.

ಸ್ವಲ್ಪ ಹೊತ್ತಿನ ನಂತರ ಕ್ಲೇ ರಸ್ತೆ ದಾಟಿ ಒರಟಾದ ರಸ್ತೆಗಳ ಮೇಲೆ ಗಾಡಿ ಸಾಗುತ್ತಿತ್ತು. ಕಿಟಕಿಗಳಿಂದ ನೆರಳುಗಳು, ಮಂದ ಬೆಳಕಿನಲ್ಲಿ ಓಡಾಡುತ್ತಿದ್ದಂತೆ ಕಾಣಿಸಿದವು. ಕುತೂಹಲದಿಂದ ಗಮನಿಸಿದ. ಏನೇನೋ ಸನ್ನೆಗಳು ಮಾಡುತ್ತಿದ್ದಂತೆನಿಸಿತು. ಅಸಹ್ಯ ಪಟ್ಟುಕೊಂಡ, ಸ್ವಲ್ಪ ಮುಂದೆ ಸಾಗಿ ರಸ್ತೆಯಂಚಿನಲ್ಲಿ ಎಡಕ್ಕೆ ತಿರುಗಿದಾಗ ಹೆಂಗಸೊಬ್ಬಳು ತೆರೆದ ಬಾಗಿಲಿನ ಮುಂದೆ ನಿಂತು ಇವರತ್ತ ಕಿರುಚುತ್ತಿದ್ದಳು. ಒಂದಿಬ್ಬರು ಗಂಡಸರು ಗಾಡಿಯ ಹಿಂದೆ ಬಂದು ನೂರು ಗಜಗಳಷ್ಟು ದೂರ ಹಿಂಬಾಲಿಸಿ ಬಂದರು. ಗಾಡಿ ಚಾಲಕ ತನ್ನ ಚಾಟಿಯಿಂದ ಅವರನ್ನು ಬಾರಿಸಿದ.

ಡೋರಿಯನ್ ಗ್ರೇ ಆತ್ಮ ಮತ್ತು ಇಂದ್ರಿಯಗಳ ಬಗ್ಗೆ ವ್ಯಕ್ತವಾದ ಮಾತುಗಳನ್ನು ಮೆಲುಕು ಹಾಕುತ್ತಲೇ ಹೋದ. ತನ್ನ ಎಲ್ಲ ಭಾವ ಸ್ಥಿತಿಗಳು ಮರು ರೂಪ ಪಡೆಯುತ್ತಾ ಬಂದು ನಿರ್ದಿಷ್ಟ ಅಭಿವ್ಯಕ್ತಿ ಕಂಡುಕೊಳ್ಳುವವರೆಗೂ ಚಿಂತಿಸುತ್ತಲೇ ಇದ್ದ. ಯಾವುದೇ ಸಮರ್ಥನೆಗೆ ಸಿಗದೆಯೇ ತನ್ನ ಸ್ವಭಾವವನ್ನು ನಿಯಂತ್ರಿಸುತ್ತಿದೆ ಎನಿಸಿತು. ಆದರೆ ಅವನಲ್ಲಿ ಒಂದು ಪ್ರಬಲವಾದ ಆಲೋಚನೆ ಮೂಡಿತು. ಬದುಕಲೇಬೇಕೆಂಬ ಅದಮ್ಯ ಬಯಕೆ ಮರುಕಳಿಸಿತು. ತಾನು ಯಾವ ಯಾವುದರ ಬಗ್ಗೆ ಅಸಹ್ಯ ಪಡುತ್ತಿದ್ದ, ಅದೆಲ್ಲವನ್ನೂ ಈಗ ಪ್ರೀತಿಸತೊಡಗಿದ. ವಿಕೃತಿ ಎನ್ನುವುದು ವಾಸ್ತವವೆನ್ನುವ ಸತ್ಯವೆನ್ನುವುದನ್ನು ಮನಸ್ಸು ಒಪ್ಪಿಕೊಂಡಿತು. ಕರ್ಕಶತೆ, ಕೊಳೆತುನಾರುವ ಗೂಡುಗಳಂತಹ ಮನೆಗಳು, ಅರಾಜಕ ಪರಿಸರ, ಕಳ್ಳ ಕಾಕರ ಮೋಸ, ವಂಚನೆ, ಕ್ರೌರ್ಯ, ಕೇಡಿಗತನ ಇತ್ಯಾದಿಗಳೆಲ್ಲವೂ ಮೋಹಕ, ಚಿತ್ತಾಕರ್ಷಕ ಕಲಾರೂಪಗಳು ಇನಿದಾದ ಸಂಗೀತ ಸ್ವರಗಳು ಇತ್ಯಾದಿಗಳೆಲ್ಲಕ್ಕಿಂತ ಪ್ರಿಯವೆನಿಸತೊಡಗಿದವು. ಇವುಗಳಿಂದ ಮಾತ್ರವೇ ಮರೆವನ್ನು ಸಾಧಿಸಿಕೊಳ್ಳಲು ಸಾಧ್ಯವಾದೀತೆಂದು ನಂಬಿದ.

ಒಮ್ಮೆಲೇ ಗಾಡಿ ಮುಗ್ಗರಿಸಿದಂತಾಗಿ ನಿಂತಿತು. ಆ ಸ್ಥಳ ಅತ್ಯಂತ ಕಿರಿದಾಗಿ ಕಿಷ್ಕಿಂಧೆಯಂತೆ ಇತ್ತು. ತಗ್ಗಿನ ಮನೆಗಳು ಇಡಕಿರಿದು ತುಂಬಿದ್ದವು.

"ಸಾರ್, ಇದೇ ಜಾಗ ಅಲ್ಲವೇ?" ಚಾಲಕ ಕೇಳಿದ. ಡೋರಿಯನ್ ಇಣಕಿ ಸುತ್ತಲೂ ಕಣ್ಣಾಡಿಸಿ, "ಇರಲಿ ಇಲ್ಲಿಯೇ ನಿಲ್ಲಿಸು" ಎಂದು ಹೇಳಿ ಬೇಗ ಬೇಗ ಗಾಡಿಯಿಂದ ಇಳಿದು, ಅವನಿಗೆ ಕೊಡಬೇಕಿದ್ದ ಹಣವನ್ನು ಕೊಟ್ಟು ಕಳಿಸಿದ. ಅವನು ಆ ಕಡೆ ಹೋಗುತ್ತಿದ್ದಂತೆ ಹಡಗುಕಟ್ಟೆಯ ದಿಕ್ಕಿನಲ್ಲಿ ಹೆಜ್ಜೆ ಹಾಕಿದ. ಬಲಗಡೆ ತಿರುವಿನಿಂದ ಆತುರಾತುರವಾಗಿ ಹೆಜ್ಜೆ ಹಾಕುತ್ತಲೇ ತನ್ನನ್ನು ಯಾರಾದರೂ ಹಿಂಬಾಲಿಸುತ್ತಿರಬಹುದೇ ಎಂದು ಅನುಮಾನದಿಂದ ತಿರು ತಿರುಗಿ ನೋಡುತ್ತಿದ್ದ. ಏಳೆಂಟು ನಿಮಿಷಗಳು ನಡೆದ ಮೇಲೆ, ಎರಡು ಜೀರ್ಣ ಸ್ಥಿತಿಯಲ್ಲಿದ್ದ ಫ್ಯಾಕ್ಟರಿಗಳ ಮಧ್ಯೆ ಇದ್ದ ಹರಕು ಮುರುಕು ಗುಡಿಸಲಿನಂತಿದ್ದ ಮನೆಯನ್ನು ತಲುಪಿದ.

ಒಂದು ಕಡೆ ಎತ್ತರದ ಕಿಟಕಿಯ ಮೇಲೆ ದೀಪವೊಂದು ಉರಿಯುತ್ತಿತ್ತು. ಅವನು ಅಲ್ಲಿ ನಿಂತು. ಬಾಗಿಲು ತಟ್ಟಿದ.

ಸ್ವಲ್ಪ ಹೊತ್ತಿನಲ್ಲಿ, ಯಾರದೋ ಹೆಜ್ಜೆ ಸಪ್ಪಳ ಕೇಳಿಸಿತು. ನಂತರ ಬಾಗಿಲಿನ ಕೊಂಡಿ ಕಳಚಿತು. ಬಾಗಿಲು ತೆರೆಯಿತು. ಮೆಲ್ಲಗೆ ತನ್ನ ಮುಂದೆ ನಿಂತಿದ್ದ ಆಕಾರವನ್ನು ಹಿಂಬಾಲಿಸಿ ನಡೆದ. ಯಾರೊಬ್ಬರ ನಡುವೆಯೂ ಮಾತಿಲ್ಲ. ಕಡೆಗೆ ಒಂದು ಮನೆ ತಲುಪಿದ. ಹಜಾರದ ಒಂದು ಕಡೆ ಹರಕಲು ಪರದೆಯೊಂದು ಕಾಣಿಸಿತು. ತನ್ನ ಹಿಂದೆಯೇ ಒಳನುಗ್ಗಿದ ಗಾಳಿಯಿಂದ ಪರದೆ ಅತ್ತ ಇತ್ತ ಸರಿದಾಡುತ್ತಿತ್ತು. ನೋಡುತ್ತಿದ್ದಂತೆ ಹಿಂದೆಂದೊ ಅದೊಂದು ನರ್ತನ ಗೃಹವಾಗಿರ ಬೇಕು ಎಂದೆನಿಸಿತು. ಕುಡುಕರು ಕೆಟ್ಟ ಜನರು ಅಲ್ಲೊಬ್ಬರು ಇಲ್ಲೊಬ್ಬರು ಕುಳಿತಿದ್ದರು. ಒಂದು ಮೇಜಿನ ಬಳಿ ಒಬ್ಬ ಮುದಿ ನಾವಿಕ ಬಿದ್ದುಕೊಂಡಿದ್ದ. ಇಬ್ಬರು ಹೆಂಗಸರು ಅವನನ್ನು ತಮಾಶೆ ಮಾಡುತ್ತಿದ್ದರು. ಆ ಮುದುಕ ಅಸಹ್ಯದಿಂದ ತನ್ನ ಕೋಟಿನ ತೋಳನ್ನು ಒರೆಸುತ್ತಿದ್ದ. ಡೋರಿಯನ್ ಅಲ್ಲಿಂದ ಹಾದುಹೋದ.

ಕೋಣೆಯ ತುದಿಯಲ್ಲಿ ಮೇಲೆ ಹೋಗಲು ಮೆಟ್ಟಿಲುಗಳಿದ್ದವು. ಮೇಲಿನ ಕೋಣೆ ಕತ್ತಲಿನಿಂದ ಕೂಡಿತ್ತು. ಒಂದು ಮೂರು ನಾಲ್ಕು ಮೆಟ್ಟಿಲು ಹತ್ತುವಷ್ಟರಲ್ಲಿ ಅಫೀಮಿನ ವಾಸನೆ ಮೂಗಿಗೆ ಬಡಿಯುತ್ತಿತ್ತು. ಆ ವಾಸನೆಯನ್ನು ಡೋರಿಯನ್ ಖುಷಿಯಿಂದ ಹೀರಿಕೊಳ್ಳತಿತದ್ದ. ಅವನು ಒಳಗೆ ಹೆಜ್ಜೆ ಇಡುತ್ತಿದ್ದಂತೆಯೇ ರೇಶಿಮೆಯ ನುಣುಪಿನ ಹಳದಿ ಕೂದಲಿನ ಯುವಕನೊಬ್ಬ ಉರಿಯುತ್ತಿದ್ದ ದೀಪದ ಮೇಲೆ ಬಾಗಿ ಉದ್ದನೆಯ ತೆಳುವಾದ ಪೈಪನ್ನು ಹಚ್ಚಿ ಕೊಳ್ಳತ್ತಿದ್ದ. ಅವನತ್ತ ಸಂಕೋಚದಿಂದ ನೋಡಿ

"ಆ್ಯಡ್ರಿಯನ್ ನೀನು ಇಲ್ಲಿ? "ಎಂದು ತಗ್ಗಿದ ದನಿಯಲ್ಲಿ ಕೇಳಿದ.

"ಇನ್ನೆಲ್ಲಿರ ಬೇಕು? ಎಂದು ಬೇಸರ, ನಿರ್ಲಕ್ಷ್ಯದಿಂದ ಉತ್ತರಿಸಿದ. ಯೊವೊಬ್ಬನೂ ನನ್ನ ಜೊತೆ ಮಾತಾಡೊಲ್ಲ" ಎಂದು ಮುಂದುವರೆಸಿದ.

"ನೀನು ಇಂಗ್ಲೆಂಡಿಗೆ ಹೋಗಿದ್ದೀ ಎಂದುಕೊಂಡಿದ್ದೆ. "ಡಾರ್ಲಿಂಗ್‌ಟನ್ ಏನೂ ಮಾಡೋದಿಲ್ಲ. ನನ್ನಣ್ಣ ಕಡೆಗೆ ಬಿಲ್ ಪೇ ಮಾಡಿದ. ಜಾರ್ಜ್ ನನ್ನ ಜೊತೆ ಮಾತೂ ಕೂಡಾ

ಆಡೊಲ್ಲ... ಬಿಡು ನನಗೇನು ಪರವಾಗಿಲ್ಲ. ಅವರ್‍ಯಾರೂ ಇಲ್ಲದಿದ್ದರೂ ಇದು ಇದೆಯಲ್ಲ. ಇದು ಇದ್ದರೆ ಯಾವ ಸ್ನೇಹಿತನೂ ಬೇಕಾಗೊಲ್ಲ. ನನಗೆ ಬೇಕಾದ್ದಕ್ಕಿಂತ ಹೆಚ್ಚು ಫ್ರೆಂಡ್ಸ್ ಇದ್ದರು ಅನಿಸುತ್ತೆ."

ಡೋರಿಯನ್ ಬೆಚ್ಚಿದ. ಸುತ್ತಲೂ ನೋಡಿದ: ಕೆಳಗೆ ಹಾಸಿನ ಮೇಲೆ ಚಿತ್ರ ವಿಚಿತ್ರ ಭಂಗಿಗಳಲ್ಲಿ, ಬಡಕಲು ದೇಹಗಳೊಂದಿಗೆ, ಕಾಂತಿಹೀನ ಕಣ್ಣುಗಳೊಂದಿಗೆ, ಕೆದರು ಕೂದಲಿನೊಂದಿಗೆ ಮೈಮೇಲೆ ಪ್ರಜ್ಞೆ ಇಲ್ಲದೆ ಬಿದ್ದುಕೊಂಡಿರುವುದು ಅವನಿಗೆ ತಮಾಶೆ ಎನಿಸಿತು. ಅವರು ಭ್ರಮಾಲೋಕದಲ್ಲಿ ಅನುಭವಿಸುತ್ತಾ, ನರಕ ಕಲಿಸುತ್ತಿದ್ದ ಹೊಸ ಪಾಠಗಳಲ್ಲಿ ಹೊಸ ಸಂತೋಷವನ್ನು ಕಾಣುತ್ತಿದ್ದರು. ತನಗಿಂತ ಅವರೇ ಸಂತೋಷವಾಗಿದ್ದಾರೆ ಎನಿಸಿತು. ನೆನಪು ಭಯಂಕರ ರೋಗದಂತೆ ಮರುಕಳಿಸಿತು. ಆಗಾಗ ಬೇಸಿಲ್ ಹಾಲ್‌ವಾರ್ಡ್ ತನ್ನತ್ತ ನೋಡುತ್ತಿದ್ದಾನೆಂಬಂತೆ ಅವನಿಗೆ ಕಾಣಿಸಿತು. ಅಲ್ಲಿ ಇರುವುದು ಸಾಧ್ಯವಾಗದು. ಆ್ಯಡ್ರಿಯನ್‌ನನ್ನು ಅಲ್ಲಿ ಕಂಡು ಕಸಿವಿಸಿಯಾಯಿತು. ಅಲ್ಲಿಂದ ದೂರ ತಾನು ಯಾರೆಂಬುದನ್ನು ಗುರುತಿಸಲಾಗದ ಸ್ಥಳಕ್ಕೆ ಹೋಗಬೇಕೆಂದುಕೊಂಡ.

"ನಾನು ಇನ್ನೊಂದು ಕಡೆಗೆ ಹೋಗ್ತೀನಿ"

"ವಾರ್ಡ್ ಕಡೆಗೆ?"

"ಹೌದು"

" ಆ ಹುಚ್ಚು ಬೆಕ್ಕು ಅಲ್ಲಿರೋದಂತು ಗ್ಯಾರಂಟಿ. ಇಲ್ಲಿ ಅವಳು ಬರಲು ಬಿಡುವುದಿಲ್ಲ"

ಡೋರಿಯನ್ ಭುಜ ಕುಣಿಸಿ,

"ಪ್ರೀತಿಸುವ ಹೆಂಗಸರು ನನಗೆ ಸಾಕು ಸಾಕಾಗಿ ಹೋಗಿದ್ದಾರೆ. ದ್ವೇಷಿಸುವ ಹೆಂಗಸರೇ ನನಗೆ ಆಪ್ತರು ಎನಿಸುತ್ತೆ. ಅಲ್ಲದೆ ಅವರಲ್ಲಿ ಸತ್ವ ಕೂಡಾ ಇರುತ್ತೆ"

"ಎಲ್ಲಾ ಒಂದೆ"

"ಆದರೆ ಅದು ನನಗೆ ತುಂಬ ಹಿಡಿಸುತ್ತೆ"

"ಬಾ ಏನಾದರೂ ತಿಂದು ಕುಡಿಯೋಣ, ಏನಾದರೂ ತಿನ್ನಬೇಕೂಂತ ಅನಿಸುತ್ತಿದೆ." "ನನಗೆ ಮಾತ್ರ ಏನೂ ಬೇಡ" ಮೆಲ್ಲಗೆ ಹೇಳಿದ.

"ಪರವಾಗಿಲ್ಲ"

ಆ್ಯಡ್ರಿಯನ್ ಸಿಂಗಲ್ಟನ್ ಎದ್ದು ಡೋರಿಯನ್‌ನನ್ನು ಬಾರ್‌ಗೆ ಹಿಂಬಾಲಿಸಿದ. ಒಳ ಹೋಗುತ್ತಿದ್ದಂತೆಯೇ ಹೇಸಿಗೆಯೆನಿಸುವ ನಗೆಯೊಂದಿಗೆ ಸ್ವಾಗತಿಸಿ, ಒಂದು ಬಾಟಲಿ ಮತ್ತು ಎರಡು ಗ್ಲಾಸುಗಳನ್ನು ತಂದಿರಿಸಿದ. ಒಬ್ಬಳು ಹೆಂಗಸು ಪಕ್ಕಕ್ಕೆ ಸರಿದು ಹರಟೆ ಹೊಡೆಯಲು ಆರಂಭಿಸಿದಳು. ಡೋರಿಯನ್ ಅವರ ಕಡೆ ಬೆನ್ನು ಮಾಡಿ ಕುಳಿತು, ಏನೋ ರಹಸ್ಯವನ್ನು ಹೇಳುವಂತೆ, ಆ್ಯಡ್ರಿಯನ್‌ಗೆ ಪಿಸುಗುಟ್ಟಿದ.

ಒಂದು ವಕ್ರ ನಗೆಯೊಂದಿಗೆ, ಒಬ್ಬ ಹೆಂಗಸು "ಇವತ್ತು ರಾತ್ರಿ ನಮಗೆ ಹೆಮ್ಮೆ ಎನಿಸುತ್ತೆ" ಎಂದು ಮುಗುಳ್ನಕ್ಕಳು.

"ದಯವಿಟ್ಟು ನನ್ನ ಜೊತೆ ಮಾತಾಡಬೇಡಿ." ಎಂದು ನೆಲಕ್ಕೆ ಕಾಲನ್ನು ಝಾಡಿಸಿದ. ನಿಮಗೇನು ಬೇಕಾಗಿದೆ ದುಡ್ಡು ತಾನೇ? ತಗೊಳ್ಳಿ ಆದರೆ ಎಂದಿಗೂ ನನ್ನ ಹತ್ತಿರ ಮಾತಾಡುವ ಸಾಹಸ ಮಾಡ ಬೇಡಿ."

ಆ ಹೆಂಗಸಿನ ಕಣ್ಣುಗಳಲ್ಲಿ ಕೂಡಲೇ ಕೋಪದ ಕಿಡಿಗಳು ಉರಿದು ಮತ್ತೆ ತಣ್ಣಗಾದವು. ತಲೆ ಕೊಡವಿ ಕೌಂಟರ್ ಮೇಲಿದ್ದ ನಾಣ್ಯಗಳನ್ನು ಬಾಚಿಕೊಂಡಳು. ಮತ್ತೊಬ್ಬ ಹೆಂಗಸು [ಹೊಟ್ಟೆ ಕಿಚ್ಚಿನಿಂದ] ಅಸೂಯೆಯಿಂದ ನೋಡುತ್ತಿದ್ದಳು.

"ಏನೂ ಪ್ರಯೋಜನವಿಲ್ಲ" ಎಂದು ಆ್ಯಡ್ರಿಯನ್ ದೀರ್ಘವಾಗಿ ಉಸಿರು ಬಿಟ್ಟ. ನಾನಂತು ಹಿಂತಿರುಗಿ ಹೋಗುವುದಿಲ್ಲ. ಯಾಕೆ ತಾನೆ ಹೋಗಬೇಕು? ಇಲ್ಲಿ ಸಂತೋಷವಾಗಿದ್ದೀನಿ.

"ನಿನಗೇನಾದರೂ ಬೇಕಾದರೆ ನನಗೆ ಬರೆದು ತಿಳಿಸು" ಬರೀತೀಯಲ್ಲ? ಎಂದು ಒಂದು ಕ್ಷಣ ಬಿಟ್ಟು ಮತ್ತೆ ಹೇಳಿದ.

"ಆಗಬಹುದೆನಿಸುತ್ತೆ"

"ಹಾಗಾದರೆ ಗುಡ್ ನೈಟ್"

"ಗುಡ್ ನೈಟ್" ಆ್ಯಡ್ರಿಯನ್ ಪ್ರತಿ ಹೇಳಿದ. ಮತ್ತು ಕರ್ಚೀಫಿನಿಂದ ಬಾಯಿ ಒರೆಸಿಕೊಂಡ.

ಡೋರಿಯನ್ ದುಗುಡದ ಮುಖದೊಂದಿಗೆ ಬಾಗಿಲ ಬಳಿಗೆ ನಡೆದ. ಪರದೆಯನ್ನು ಸರಿಸುತ್ತಲೇ ಅಸಹ್ಯವೆನಿಸುವ ನಗೆಯೊಂದು ಹೊರಟಿತು. ಆ ನಗೆ ತಾನು ಹಣಕೊಟ್ಟ ಹೆಣ್ಣಿನದಾಗಿತ್ತು.

"ಬಂದ ನೋಡು ಇವನೊಬ್ಬ ಪಿಶಾಚಿ" ಎಂದು ಕರ್ಕಶದಿಂದ ಉಸಿರಿದಳು."

"ಹಾಗೆಲ್ಲ ಕರೀಬೇಡ ಸುಮ್ಮನೆ ಬಿಡೊಲ್ಲ"

"ಓಹ್! ಹಾಗಾದರೆ ನಿನ್ನನ್ನು ಪ್ರಿನ್ಸ್ ಚಾರ್ಮಿಂಗ್ ಅಂತ ಕರಿಬೇಕಲ್ವ" ಎಂದು ಸಿಟ್ಟಿಂದ ಹೇಳಿದಳು.

ನಿದ್ದೆಗಣ್ಣಿಂದ ತೂರಾಡುತ್ತಿದ್ದ ನಾವಿಕನೊಬ್ಬ ಬೆದರಿಕೆ ಹುಟ್ಟಿಸುವ ಕಣ್ಣುಗಳಿಂದ ಸುತ್ತಲೂ ನೋಡಿದ. ಹಜಾರದ ಬಾಗಿಲು ದಢಾರನೆ ಮುಚ್ಚಿದ ಸುದ್ದು ಕಿವಿಗೆ ಬಿತ್ತು. ಅವನು ಕೂಡಲೇ ಹೊರಬಿದ್ದ.

ಸಣ್ಣದಾಗಿ ಮಳೆ ಬರುತ್ತಿದ್ದುದರಿಂದ ಡೋರಿಯನ್ ವೇಗವಾಗಿ ಹಡಗುಕಟ್ಟೆಯನ್ನು ಹಾದು ಹೆಜ್ಜೆಹಾಕಿದ. ಆ್ಯಡ್ರಿಯನ್ ಸಿಂಗಲ್ಟನ್‌ನನ್ನು ನೋಡಿದ ಮೇಲೆ, ಅವನ ಸ್ಥಿತಿ ಕಂಡು ಬೆಚ್ಚಿಬಿದ್ದ. ಒಂದು ವೇಳೆ ಬೇಸಿಲ್ ಹಾಲ್‌ವಾರ್ಡ್ ಹೇಳಿದಂತೆ ತನ್ನ ಸ್ಥಿತಿಯೂ ಹಾಗೇ ಆದರೆ? ಎಂದು ಯೋಚಿಸುತ್ತಲೇ ಭಯದಿಂದ ತತ್ತರಿಸಿದ. ಭಯ, ಮರುಕಗಳು ಅವನ

ಕಣ್ಣಲ್ಲಿ ಗೂಡುಕಟ್ಟಿದವು. ಆದರೂ ಇದರಿಂದ ಅವನಿಗೇನಾಗಬೇಕು. ಯಾರೊಬ್ಬರ ಕಷ್ಟ ನಷ್ಟಗಳನ್ನು ಯಾರೂ ಹೊರೆ ಹೊತ್ತು ಕೊಳ್ಳಲು ಸಾಧ್ಯವಿಲ್ಲ. ಅವರವರ ಬದುಕು ಅವರವರಿಗೆ. ಅವರು ಮಾಡಿದ್ದನ್ನು ಅವರೇ ಅನುಭವಿಸಬೇಕು. ಎಷ್ಟೋ ಸಲ ಆಕಸ್ಮಿಕವಾಗಿ ಮಾಡಿದ ಒಂದು ಸಣ್ಣ ತಪ್ಪಿಗೂ ಪದೇ ಪದೇ ಅನುಭವಿಸಬೇಕಾಗುತ್ತದೆ. ಗಂಡಸರ ಜೊತೆಗಿನ ಅವಳ ವ್ಯವಹಾರ ವಿಧಿ ಇಷ್ಟರಲ್ಲೇ ಮುಗಿಸುವುದಿಲ್ಲ.

ಒಮ್ಮೆ ಮನಸ್ಸಿನಲ್ಲಿ ಸೇಡು, ಪಾಪಗಳ ಭಾವನೆ ಮೊಳೆತಲ್ಲಿ ದೇಹದ ನರನಾಡಿಗಳೆಲ್ಲವೂ ಅವುಗಳನ್ನು ಕಾರ್ಯಗತಗೊಳಿಸಲು ಮನುಷ್ಯನನ್ನು ಒತ್ತಾಯಿಸುತ್ತದೆ ಎಂಬುದನ್ನು ಮನೋವಿಜ್ಞಾನಿಗಳು ವಿವರಿಸಿದ್ದಾರೆ. ಆಗ ಆತ್ಮ ಪ್ರಜ್ಞೆಯೂ ಸಾಯುತ್ತದೆ. ಇಲ್ಲವೇ ಬಂಡೆದ್ದು ಪಾಪದ ನೆಲೆಗೆ ದೂಡುತ್ತದೆ.

ಡೋರಿಯನ್ ಈಗ ಪಾಪದೆಡೆಗೆ ವೇಗದ ಹೆಜ್ಜೆ ಹಾಕುತ್ತಿದ್ದ. ಯಾವಾಗಲೂ ಬರುತ್ತಿದ್ದ ಜಾಗದಲ್ಲಿ, ದುಷ್ಟರು, ಪುಂಡು ಪೋಕರಿಗಳು ಕುಡುಕರು ಮೊದಲಾದವರೇ ತುಂಬಿರುತ್ತಿದ್ದರೂ ಈ ಸಲವೂ ಅಲ್ಲಿಗೇ ಬಂದ. ಆದರೆ ಅಷ್ಟರಲ್ಲೇ ಯಾರೋ ಹಿಂದಿನಿಂದ ಹಿಡಿದು ನಿಲ್ಲಿಸಿದರು. ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿರುವಾಗಲೇ ಕತ್ತಿನ ಪಟ್ಟಿಯನ್ನು ಮತ್ತಷ್ಟು ಬಿಗಿಗೊಳಿಸಲಾಗಿತ್ತು. ಒಮ್ಮೆಲೇ ಕತ್ತಿನ ಪಟ್ಟಿ ಹಿಡಿದು ಗೋಡೆಗೆ ಅಪ್ಪಳಿಸಲಾಯಿತು. ಕತ್ತಿನ ಪಟ್ಟಿ ಹಿಡಿದುಕೊಂಡ ಎರಡು ನಿಮಿಷಗಳಲ್ಲಿ ರಿವಾಲ್ವರ್‌ನ ಸದ್ದಾಯಿತು. ಗಾಭರಿಗೊಂಡ ಡೋರಿಯನ್ ಪ್ರಯತ್ನದಿಂದ ತನ್ನನ್ನು ಹಿಡಿದು ಸಾಯಿಸಲು ಪ್ರಯತ್ನಿಸುತ್ತಿರುವ ವ್ಯಕ್ತಿ ಯಾರೆಂದು ನೋಡಿದ. ದೃಢಕಾಯನಾಗಿಯೂ ಕುಳ್ಳಾಗಿಯೂ ಇದ್ದ. ಅವನನ್ನೇ ನೋಡುತ್ತಾ, "ಯಾರು ನೀನು? ಯಾಕೆ ನನ್ನನ್ನು ಸಾಯಿಸ್ತಿದ್ದೀಯ? ಏನಾಗಬೇಕು ನಿನಗೆ?" ಎಂದು ಏದುಸಿರು ಬಿಡುತ್ತಾ ಕೇಳಿದ.

"ಬಾಯ್ಮುಚ್ಚು ಕದಲಿದರೆ ಸುಟ್ಟು ಬಿಡುತ್ತೇನೆ"

"ನೀನು ಹುಚ್ಚ! ಸಾಯಿಸುವಂಥ ಕೆಲಸ ನಾನೇನು ಮಾಡಿದ್ದೇನೆ?"

"ಸಿಬಿಲ್ ವೇನ್‌ಳ ಬದುಕನ್ನು ಹಾಳು ಮಾಡಿದ ಚಂಡಾಲ... ಅವಳು ನನ್ನಕ್ಕ ಅವಳು ಆತ್ಮಹತ್ಯೆ ಮಾಡಿಕೊಂಡಳೆಂಬುದು ನನಗೆ ಗೊತ್ತು. ಆದರೆ ಆ ಸಾವಿಗೆ ಕಾರಣ ನೀನೇ. ಆದ್ದರಿಂದ ನಿನ್ನನ್ನು ಸಾಯಿಸದೆ ಬಿಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದೆ. ಎಲ್ಲೆಲ್ಲೋ ಹುಡುಕಿದೆ. ಎಲ್ಲೂ ನಿನ್ನ ಸುಳಿವು ಸಿಗಲಿಲ್ಲ, ನಿನ್ನನ್ನು ಚೆನ್ನಾಗಿ ತಿಳಿದವರು ಇಬ್ಬರು ಇದ್ದರು. ಆದರೆ ಅವರು ಈಗ ಇಲ್ಲ. ಸತ್ತು ಹೋಗಿದ್ದಾರೆ. ನಿನ್ನ ಹೆಸರು ಗೊತ್ತಿಲ್ಲ. ಆದರೆ ನಿನ್ನ ಅಡ್ಡ ಹೆಸರು ಮಾತ್ರ ಗೊತ್ತಿತ್ತು. ಇವತ್ತು ರಾತ್ರಿ ಆಕಸ್ಮಿಕವಾಗಿ ಯಾರೋ ನಿನ್ನನ್ನು ಆ ಹೆಸರಿನಿಂದ ಕೂಗಿದ್ದು ಕೇಳಿಸಿತು. ದೇವರನ್ನು ಬೇಡಿಕೋ. ಇವತ್ತು ರಾತ್ರಿಯೇ ನಿನ್ನ ಜೀವನದ ಕೊನೇ ಗಳಿಗೆ"

ಡೋರಿಯನ್ ಬೆವೆತುಹೋದ.

"ನನಗೆ ಅವಳು ಯಾರೂಂತ ಗೊತ್ತಿಲ್ಲ ತಡವರಿಸಿದ." ಅವಳ ಬಗ್ಗೆ ಕೇಳಿಯೂ ಇಲ್ಲ. ನಿನಗೆಲ್ಲೋ ತಲೆ ಕೆಟ್ಟಿರಬೇಕು."

"ನೀನು ಮಾಡಿದ ಅಪರಾಧಾನ ಒಪ್ಪಿಕೋ. ನಾನು ಬೇರೆ ಯಾರೂ ಅಲ್ಲ. ಜೇಮ್ಸ್ ವೇನ್ ನೀನು ಸಾಯೋದಂತು ಗ್ಯಾರಂಟಿ"

ಡೋರಿಯನ್ ಭಯಭೀತ ಕ್ಷಣಗಳನ್ನು ಎಣಿಸುತ್ತಿದ್ದ. ಅವನಿಗೆ ಏನು ಸಮಾಧಾನ ಹೇಳಬೇಕೋ ತಿಳಿಯಲಿಲ್ಲ.

"ಮುಂಡಿಯೂರು! ಒಂದೆರಡು ನಿಮಿಷ ಟೈಂ ಕೊಡ್ತೀನಿ. ಇನ್ನೇನೂ ಹೇಳಬೇಡ. ಇವತ್ತು ರಾತ್ರಿ ಇಂಡಿಯಾಗೆ ಹೊರಟಿದ್ದೀನಿ. ಹೆಚ್ಚು ಸಮಯವಿಲ್ಲ. ಹೋಗುವ ಮೊದಲು ನನ್ನ ಈ ಕೆಲಸವನ್ನು ಮುಗಿಸಬೇಕು.

ಡೋರಿಯನ್ ಭೀತಿಯಿಂದ ನಿಷ್ಕ್ರಿಯನಾಗಿದ್ದ. ಒಂದು ಕ್ಷಣದ ನಂತರ ಒಮ್ಮೆಲೇ ಅವನ ತಲೆಯಲ್ಲಿ ಒಂದು ಆಸೆಯ ಹೊಳಹು ಮಿಂಚಿತು.'

"ನಿನ್ನಕ್ಕ ಸತ್ತು ಎಷ್ಟು ವರ್ಷ ಆಯಿತು?"

"ಹದಿನೆಂಟು ವರುಷ... ಯಾಕೆ ಈ ಪ್ರಶ್ನೆ ಕೇಳ್ತಿದ್ದೀಯ? ಎಷ್ಟು ವರ್ಷ ಆಗಿದ್ದರೇನು?"

"ಹದಿನೆಂಟು ವರುಷ!" ಡೋರಿಯನ್ ಜೋರಾಗಿ ಅಟ್ಟಹಾಸದ ನಗೆ ನಕ್ಕ. ಮತ್ತೊಮ್ಮೆ ಹದಿನೆಂಟು ವರುಷ! ಸ್ವಲ್ಪ ಆ ದೀಪಾನ ನನ್ನ ಮುಖಕ್ಕೆ ಹಿಡಿದು ನೋಡು."

ಜೇಮ್ಸ್ ವೇನ್ ಸ್ವಲ್ಪ ಹಿಂಜರಿದ. ಅವನು ಯಾಕೆ ಈ ಪ್ರಶ್ನೆ ಕೇಳುತ್ತಿದ್ದಾನೆ ಎಂದು ತಿಳಿಯದೆ ಬೆಪ್ಪನಂತಾದ. ನಂತರ ಡೋರಿಯನ್ ಗ್ರೇನನ್ನು ಆರ್ಚ್‌ನಿಂದ ಸ್ವಲ್ಪ ಮುಂದಕ್ಕೆ ಎಳೆದ.

ಡೋರಿಯನ್ ಹೇಳಿದಂತೆ ಗಾಳಿಗೆ ದೀಪದ ಜ್ವಾಲೆ ಅತ್ತಿತ್ತಾಗುತ್ತಿದ್ದರೂ ಅವನ ಮುಖದ ಮೇಲೆ ಸಾಕಷ್ಟು ಬೆಳಕು ಬೀಳುತ್ತಿತ್ತು. ಆ ಬೆಳಕಿನಲ್ಲಿ ಜೇಮ್ಸ್ ವೇನ್ ಅವನ ಮುಖವನ್ನು ಗಂಭೀರವಾಗಿ ಪರೀಕ್ಷಿಸಿದ. ಇವನು ಅವನಾಗಿರಲಾರನೇನೋ ಎನಿಸಿತು. ಹದಿನೆಂಟು ವರುಷಗಳ ಹಿಂದೆ ಅವನು ಕಂಡದ್ದು, ಆಗತಾನೇ ಚಿಗುರು ಮೀಸೆ ಒಡೆಯುತ್ತಿದ್ದ, ಮುಗ್ಧ ಹುಡುಗನಿಗಿಂತ ಸ್ವಲ್ಪ ಹೆಚ್ಚು ಪ್ರಾಯಕ್ಕೆ ಕಾಲಿಡುತ್ತಿದ್ದ ಸುಮಾರು ಇಪ್ಪತ್ತರ ಹರೆಯ, ಇಲ್ಲವಾದರೆ ತನ್ನಕ್ಕನಿಗಿಂತ ಒಂದೆರಡು ವರುಷ ಹಿರಿಯನಾಗಿದ್ದಿರಬಹುದೇನೋ! ಆದರೆ ಈಗ ಅವನು ನೋಡುತ್ತಿದ್ದವನು ಖಂಡಿತ ಅವನಿರಲಾರ ಎನಿಸಿತು. ತನ್ನ ಸೋದರಿಯ ಬದುಕನ್ನು ಹಾಳುಮಾಡಿದವನು ಇವನು ಹೇಗಾದಾನು? ಎಂದು ಭಾವಿಸಿದ. ಅವರಿಬ್ಬರೂ ಬಹಳ ವರುಷಗಳಿಂದ ದೂರವೇ ಇದ್ದರು.

ಜೇಮ್ಸ್ ಡೋರಿಯನ್ ಗ್ರೇನ ಮೇಲಿನ ಹಿಡಿತವನ್ನು ಸಡಿಲಿಸಿದ. "ದೇವರೇ ! ದೇವರೇ ! ವಿನಾಕಾರಣ ಒಂದು ಕೊಲೆ ಮಾಡಿಬಿಡುತ್ತಿದ್ದೆನಲ್ಲ" ಎಂದು ತನ್ನನ್ನು ಶಪಿಸಿಕೊಂಡ. ಡೋರಿಯನ್ ಗ್ರೇ ನಿರಾಳವಾಗಿ ಉಸಿರಾಡಿದ. "ಅಲ್ಲಯ್ಯ ಇನ್ನೊಂದೆರಡು ನಿಮಿಷ ತಡವಾಗಿದ್ದರೆ, ದೊಡ್ಡದೊಂದು ಕೊಲೆಯ ಪಾಪವನ್ನು ಮಾಡಿಬಿಡುತ್ತಿದ್ದೆಯಲ್ಲ! – ಎಂದು ಗಂಭೀರವಾಗಿ ಅವನ ಕಡೆ ನೋಡಿದ.

"ಇದು ನಿನಗೊಂದು ಪಾಠ ಅಂತ ತಿಳಿದುಕೊ. ನೀನಾಗಿ ಸೇಡಿನ ಪ್ರತೀಕಾರಕ್ಕೆ ಮುಂದಾಗಬೇಡ."

"ಕ್ಷಮಿಸಿ ಸರ್. ನಾನು ಮೋಸ ಹೋದೆ. ಆಕಸ್ಮಿಕವಾಗಿ ಕಿವಿಗೆ ಬಿದ್ದ ಆ ಹೆಸರು ಇಂಥ ಅನಾಹುತಕ್ಕೆ ಪ್ರಚೋದಿಸಿತು ಎಂದು ಪಶ್ಚಾತ್ತಾಪದ ದನಿಯಲ್ಲಿ ಜೇಮ್ಸ್ ವೇನ್ ಹೇಳಿದ

"ಸುಮ್ಮನೆ ಮನೆಗೆ ಹೋಗಿ ಆ ಪಿಸ್ತೂಲನ್ನು ಆಚೆಗೆ ಎಸೆ. ಇಲ್ಲವಾದಲ್ಲಿ ತೊಂದರೆಗೆ ಸಿಕ್ಕಿ ಹಾಕಿಕೊಳ್ಳುತ್ತೀ" ಎಂದು ಹೇಳುತ್ತಾ ಡೋರಿಯನ್ ಹೊರ ಬಂದು ರಸ್ತೆಯ ಕಡೆಗೆ ನಡೆದ.

ಜೇಮ್ಸ್ ವೇನ್ ರಸ್ತೆ ಬದಿಯಲ್ಲಿ ಭಯವಿಹ್ವಲನಾಗಿ, ಕಂಪಿಸುತ್ತಾ ನಿಂತಿದ್ದ. ಕೆಲ ಕ್ಷಣಗಳ ನಂತರ ಯಾರದೋ ನೆರಳು ತನ್ನ ಕಡೆ ಬರುತ್ತಿರುವಂತೆ ಕಾಣಿಸಿತು. ತೀರ ಹತ್ತಿರ ಬಂದು ಅವನ ಭುಜದ ಮೇಲೆ ಕೈಯಿರಿಸಿದಾಗ ಬೆಚ್ಚಿನೋಡಿದ ಬಾರ್‌ನಲ್ಲಿ ಕುಡಿಯುತ್ತಿದ್ದ ಹೆಂಗಸಾಗಿದ್ದಳು ಅವಳು. ಬುಸುಗುಡುವಂತೆ ಹೇಳಿದಳು "ಯಾಕೆ ಅವನನ್ನು ಸಾಯಿಸಲಿಲ್ಲ? ನೀನು ಅವನನ್ನು ಹಿಂಬಾಲಿಸುತ್ತಿದ್ದುದನ್ನು ಗಮನಿಸಿದೆ. ಅವನನ್ನು ಸಾಯಿಸಿಬಿಡಬೇಕಾಗಿತ್ತು. ಅವನ ಹತ್ತಿರ ಬೇಕಾದಷ್ಟು ದುಡ್ಡಿದೆ. ಅವನು ಬಹಳ ಕೆಟ್ಟವ. ಕೆಟ್ಟವರಲ್ಲೇ ಕೆಟ್ಟವ" ಎಂದು ಹೇಳಿದಳು.

"ನಾನು ಹುಡುಕುತ್ತಿರುವ ವ್ಯಕ್ತಿ ಇವನಲ್ಲ. ನನಗೆ ಯಾರ ದುಡ್ಡೂ ಬೇಡ. ಆದರೆ ಪ್ರಾಣ ಬೇಕು. ನನಗೆ ಬೇಕಾಗಿರುವ ವ್ಯಕ್ತಿಯ ವಯಸ್ಸು ನಲವತ್ತರ ಆಸುಪಾಸಿನಲ್ಲಿ ಇರಬೇಕು. ಆದರೆ ಇವನನ್ನು ನೋಡಿದರೆ ಹುಡುಗನಿಗಿಂತ ಸ್ವಲ್ಪ ವಯಸ್ಸಾಗಿರಬಹುದು. ಸದ್ಯ ಅವನ ಕೊಲೆಯ ಪಾಪ ನನ್ನ ತಲೆಮೇಲೆ ಇಲ್ಲವಾಯ್ತು!"

ಆ ಹೆಣ್ಣು ವಿಕಟವಾಗಿ ನಕ್ಕಳು "ಏನಂದೆ ಹುಡುಗನಿಗಿಂತ ಸ್ವಲ್ಪ ಹೆಚ್ಚು ವಯಸ್ಸು! ಎಂದೆಯಾ? ಎಂದು ವ್ಯಂಗ್ಯ ನಗೆ ನಕ್ಕಳು. ಹೆಚ್ಚು ಕಡಿಮೆ ಇದೇ ಹದಿನೆಂಟು ವರುಷಗಳ ಹಿಂದೆ, ಪ್ರಿನ್ಸ್ ಚಾರ್ಮಿಂಗ್, ಇವತ್ತು ನಾನು ಈ ಸ್ಥಿತಿಗೆ ಬರಲು ಕಾರಣನಾದ!"

"ಸುಳ್ಳು" ಜೇಮ್ಸ್ ಕಿರುಚಿದ. ಆ ಹೆಂಗಸು ಕೈಗಳನ್ನು ಮೇಲೆತ್ತಿ ದೇವರ ಮುಂದೆ ಪ್ರಮಾಣ ಮಾಡಿ ಹೇಳಬಲ್ಲೆ. ಇವನೇ ಆ ಪ್ರಿನ್ಸ್ ಚಾರ್ಮಿಂಗ್. "ದೇವರ ಮುಂದೆ"

"ನಾನು ಹೇಳುವುದು ಸುಳ್ಳಾದರೆ ನನ್ನ ಬಾಯಿ ಬಿದ್ದುಹೋಗಲಿ, ಇಲ್ಲಿ ಬರುವವರೆಲ್ಲರಿಗಿಂತ ಮಹಾಧೂರ್ತ ನೋಡೋಕೆ ಮುಗ್ಧನಾಗಿ, ಮೋಹಕನಾಗಿ ಕಾಣಿಸುತ್ತಾನೆ ಅಷ್ಟೆ! ಒಳಗಿನಿಂದ ಅವನು ಸೈತಾನನೇ ಸರಿ! ಹದಿನೆಂಟು ವರುಷಗಳ ಹಿಂದೆಯೇ ಅವನನ್ನು ಭೇಟಿಯಾಗಿದ್ದೆ. ಆ ದಿನದಿಂದ ಇವತ್ತಿನವರೆಗೂ ಅವನಲ್ಲಿ ಅಂತಹ ಹೆಚ್ಚಿನ ಯಾವುದೇ ಬದಲಾವಣೆ ಆಗಿಲ್ಲ.

"ಪ್ರಮಾಣ ಮಾಡಿ ಹೇಳಬಲ್ಲೆಯಾ?"

"ಪ್ರಮಾಣ ಮಾಡುತ್ತೇನೆ" ಆದರೆ ಮತ್ತೆ ಅವನ ಹತ್ತಿರಕ್ಕೆ ಮಾತ್ರ ಕಳಿಸಬೇಡ. ಎಂದು ಗೋಗರೆದಳು.

ಅವಳಿಂದ ಪ್ರಮಾಣ ಮಾಡಿಸಿಕೊಂಡ ಕೂಡಲೇ ರಸ್ತೆಗೆ ಬಂದು ಡೋರಿಯನ್‌ಗಾಗಿ ಹುಡುಕಾಡಿದ. ಆದರೆ ಅವನು ಆಗಲೇ ಅಲ್ಲಿಂದ ಮಾಯವಾಗಿದ್ದ.

❖

# ಅಧ್ಯಾಯ – 17

ಒಂದು ವಾರದ ನಂತರ ಡೋರಿಯನ್ ಗ್ರೇ ಸೆಲ್ಬಿರಾಯಲ್‌ನ ಕನ್ಸರ್‌ವೇಟರಿಯಲ್ಲಿ ಮನ್‌ಮೌತನ ಡಚೆಸ್ ಜೊತೆ ಕುಳಿತು ಮಾತನಾಡುತ್ತಿದ್ದ. ಇವಳ ಜೊತೆ ಕೃಶನಾಗಿದ್ದ ಅರವತ್ತು ವರ್ಷ ವಯಸ್ಸಿನ ಅವಳ ಗಂಡನೂ ಅವನ ಅತಿಥಿಯಾಗಿ ಬಂದಿದ್ದ. ಚಹದ ಸಮಯವಾಗಿತ್ತು/. ಮೇಜಿನ ಮೇಲೆ ದೊಡ್ಡದಾದ ಲೇಸಿನಿಂದ ಅಲಂಕೃತ ದೀಪ ಬಿದ್ದು ಅದರ ಬೆಳಕು ಎಲ್ಲೆಡೆ ಚೆಲ್ಲಿತ್ತು. ಮೇಜಿನ ತುಂಬ ತಿಂಡಿ ಪದಾರ್ಥಗಳು. ಚೈನಾ ಪಿಂಗಾಣಿ ಪ್ಲೇಟುಗಳು, ಕಪ್ಪುಗಳು ಹರಡಿಕೊಂಡು ಕುಳಿತಿದ್ದವು. ಡಚೆಸ್ ಅವನ ಮುಖ್ಯ ಅತಿಥಿಯಾಗಿದ್ದಳು. ಕೋಮಲವಾದ ಅವಳ ಕೈಗಳು ಮೇಜಿನ ಮೇಲೆ ಕುಳಿತಿದ್ದ ಕಪ್ಪುಗಳ ಜೊತೆ ಆಟವಾಡುತ್ತಿದ್ದವು. ಅವಳ ಕೆಂದುಟಿಗಳು, ಡೋರಿಯನ್ ಕಿವಿಯಲ್ಲಿ ಉಸುರಿದ ಮಾತುಗಳಿಗೆ ಮುಗುಳ್ನಗೆ ಸೂಸುತ್ತಿದ್ದವು. ಲಾರ್ಡ್ ಹೆನ್ರಿ ಒಂದು ಕುರ್ಚಿಗೆ ಬೆನ್ನು ಒರಗಿಸಿ ಕುಳಿತಿದ್ದ. ಅಲ್ಲಿನ ದಿವಾನ್ ಮೇಲೆ ಲೇಡಿ ನಾರ್ ಬರೊ ಕುಳಿತಿದ್ದಳು. ಡ್ಯೂಕ್ ತಾನೇನು ಹೊಸದಾಗಿ ಕೊಂಡ ವಸ್ತುಗಳ ಬಗ್ಗೆ ಅವಳಿಗೆ ವಿವರಿಸುತ್ತಿದ್ದ. ಆದರೆ ಅವಳು ಕೇಳಿಸಿಕೊಳ್ಳುತ್ತಿದ್ದಂತೆ ನಟಿಸುತ್ತಿದ್ದಳೇ ಹೊರತು ಕಿವಿ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಈಗಾಗಲೇ ಆ ಪಾರ್ಟಿಗೆ ಹನ್ನೆರಡು ಮಂದಿ ಬಂದಿದ್ದರು. ಇನ್ನೂ ಕೆಲವರು ಮರುದಿನ ಬರುವ ನಿರೀಕ್ಷೆಯಿತ್ತು. ಮೂರು ಮಂದಿ ಯುವಕರು ಕೆಲವರು ಹೆಂಗಸರಿಗೆ ಟೀ ಮತ್ತು ಕೇಕುಗಳನ್ನು ಕೊಡುತ್ತಿದ್ದರು. ಲಾರ್ಡ್ ಹೆನ್ರಿ ಮೇಜಿನ ಬಳಿ ಹೋಗಿ ಚಹದ ಕಪ್ಪನ್ನು ಅದರ ಮೇಲಿರಿಸುತ್ತಾ "ಅದೇನು ನೀವಿಬ್ಬರೂ ಅಷ್ಟೊಂದು ಮಾತಾಡುತ್ತಿದ್ದೀರಿ? ಬಹುಶಃ ಡೋರಿಯನ್ ನಾನು ಎಲ್ಲರಿಗೂ ಎಲ್ಲದಕ್ಕೂ ಹೊಸದಾಗಿ ನಾಮಕರಣ ಮಾಡುವ ಯೋಜನೆಯನ್ನು ಹಾಕಿಕೊಂಡಿದ್ದೀನಿ ಅನ್ನುವ ವಿಷಯ ನಿನಗೆ ಹೇಳಿರಬೇಕು ಅಲ್ಲವೇ?"

"ಹ್ಯಾರಿ, ನನಗೆ ಇರುವ ಹೆಸರೇ ಸಾಕಾಗಿದೆಯಾದ್ದರಿಂದ ಹೊಸ ಹೆಸರಿನ ಅಗತ್ಯ ಇಲ್ಲ ...ಹಾಗೆಯೇ ಡೋರಿಯನ್ ಕೂಡಾ ತನ್ನ ಹೆಸರಿನಿಂದ ತೃಪ್ತನಾಗಿದ್ದಾನೆ" ಎಂದು ಕಣ್ಣು ಅಗಲಿಸಿ ಹೇಳಿದಳು.

"ಅಯ್ಯಯ್ಯೋ ನಾನು ಅವರಿಬ್ಬರ ಹೆಸರು ಬದಲಿಸಬೇಕೆಂದೇನೂ ಇಲ್ಲ. ನಾನು ಹೇಳಿದ್ದು ಹೂಗಳನ್ನು ಕುರಿತು. ನೆನ್ನೆ ನಾನೊಂದು ಆರ್ಕಿಡ್ ನೋಡಿದೆ. ಅದರ ಜಾತಿ ಹೆಸರು ಏನೆಂದು ಕೇಳಿದೆ. ತೋಟಗಾರ ಅದೇನೋ ಹೇಳಿದ. ಜನಕ್ಕೆ ಸುಂದರವಾದ ಹೆಸರುಗಳನ್ನು ಕೊಡೋದಕ್ಕೂ ಬರುವುದಿಲ್ಲವೇ ಎಂದುಕೊಂಡೆ. ಹೆಸರುಗಳಲ್ಲೇ ಮಹತ್ವ ಇರೋದು. ಅದಕ್ಕೆ ನನಗೆ ವಾಸ್ತವವಾದಿ ಸಾಹಿತ್ಯವೆಂದರೆ ಅಸಹ್ಯವಾಗುತ್ತೆ. ಕಾರ್ಯಗಳ ಅಭ್ಯಂತರವಿಲ್ಲ ಆದರೆ ಶಬ್ದಗಳ ಜೊತೇನೇ ನನ್ನ ತಕರಾರು ಇರೋದು. ಅದೇ ಕಾರಣಕ್ಕೆ ನಾನು ಕೆಲಸಕ್ಕೆ ಬಾರದ ವಾಸ್ತವವಾದ ಉಳ್ಳ ಸಾಹಿತ್ಯವನ್ನು ದ್ವೇಷಿಸುತ್ತೇನೆ. ಯಾರು ಇರುವುದನ್ನು ಇರುವ ಹಾಗೆ ಹೇಳುತ್ತಾನೋ ಅವನು ಯಾವುದಾದರೂ ಒಂದನ್ನು ಬಳಸಲೇ ಬೇಕು" "ಹಾಗಾದರೆ ಹ್ಯಾರಿ ನಿನ್ನನ್ನು ಏನಂತ ಕರೀಬೇಕು" ಎಂದು ಕೇಳಿದಳು.

"ಅವನ ಹೆಸರು ಪ್ರಿನ್ಸ್ ಪ್ಯಾರಡಾಕ್ಸ್" ಎಂದ ಡೋರಿಯನ್.

"ಓ ಒಂದು ಕ್ಷಣಾರ್ಧದಲ್ಲಿ ನನಗೆ ಗೊತ್ತಾಗಿ ಬಿಡುತ್ತೆ" ಎಂದು ಡಚೆಸ್ ಉದ್ಗರಿಸಿದಳು.

"ಓ! ಒಂದು ಚಿಟಕೆ ಹೊಡೆಯುವಷ್ಟರಲ್ಲಿ ಅವನನ್ನು ಗುರುತಿಸಿ ಬಿಡುತ್ತೇನೆ" ಎಂದಳು ಡಚೆಸ್ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ ಹೆನ್ರಿ ನಕ್ಕು "ಅದರ ಬಗ್ಗೆ ಕೇಳಬೇಕಾದ್ದಿಲ್ಲ. ಹಣೆಪಟ್ಟಿಯಿಂದ ತಪ್ಪಿಸಿಕೊಳ್ಳೋಕೆ ದಾರೀನೇ ಇಲ್ಲ! ನನಗೆ ಯಾವುದೂ ಹಣೆಪಟ್ಟಿ ಬೇಕಾಗಿಲ್ಲ" ಅಧಿಕಾರ ಅಂತಸ್ತುಗಳಿದ್ದರೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ"

ಮುದ್ದಾದ ತುಟಿಗಳಿಂದ ಎಚ್ಚರದ ಮಾತುಗಳು ಹೊರಹೊಮ್ಮಿದವು.

"ಹಾಗಾದರೆ ನನ್ನ ಸಿಂಹಾಸನವನ್ನು ರಕ್ಷಿಸಿಕೊಳ್ಳಬೇಕೆಂದು ಇಷ್ಟಪಡುತ್ತೀಯೇನು?"

"ಹೌದು"

"ನಾಳಿನ ಸತ್ಯಗಳನ್ನು ಮುಂದಿಡುತ್ತಿದ್ದೇನೆ."

"ನಾನು ಇವತ್ತಿನ ತಪ್ಪುಗಳನ್ನು ಸರಿಪಡಿಸಿಕೊಳ್ಳುವುದನ್ನೇ ಮುಖ್ಯವೆಂದು ಭಾವಿಸುತ್ತೇನೆ" ಅವಳ ಮನಸ್ಸಿನ ಇಂಗಿತವನ್ನು ಅರ್ಥಮಾಡಿಕೊಳ್ಳುತ್ತಾ "ನಿಜವಾಗಿಯೂ ನನ್ನನ್ನು ಸೋಲಿಸಿಬಿಟ್ಟೆ ಗ್ಲಾಡಿಸ್" ಎಂದು ಎತ್ತರದ ದನಿಯಲ್ಲಿ ಕಿರುಚಿ ಹೇಳಿದ.

"ನಿನ್ನ ರಕ್ಷಣಾ ಕವಚವನ್ನು ಮಾತ್ರವೇ ಕಿತ್ತೆಸೆದೆ, ಆಯುಧವನ್ನಲ್ಲ."

"ನಾನು ಯಾವತ್ತೂ ಸೌಂದರ್ಯದ ಕಡೆ ವಾಲುವುದಿಲ್ಲ" ಎಂದು ಕೈ ಬೀಸುತ್ತಾ ಹೇಳಿದ.

"ಅದೇ ತಪ್ಪು ಹ್ಯಾರಿ, ನನಗೆ ಗೊತ್ತು. ನೀನು ಬೇಕಾದ್ದಕ್ಕಿಂತ ಹೆಚ್ಚಾಗಿಯೇ ಸೌಂದರ್ಯವನ್ನು ಆರಾಧಿಸುತ್ತೀಯ."

"ಅದು ಹೇಗೆ ಹೇಳ್ತಿ? ಒಂದನ್ನು ಮಾತ್ರ ಒಪ್ಪಿಕೊಳ್ತೇನೆ. ಒಳ್ಳೆತನಕ್ಕಿಂತ ಸುಂದರವಾಗಿರುವುದೇ ಒಳ್ಳೇದು. ಇನ್ನೊಂದು ರೀತೀಲಿ ಹೇಳುವುದಾದರೆ, ಯಾರಿಗೂ

ಒಪ್ಪಿಗೆಯಾಗದ ಒಂದು ಮಾತೆಂದರೆ ವಿಕಾರವಾಗಿ ಇರುವುದಕ್ಕಿಂತ ಒಳ್ಳೆಯವರಾಗಿರುವುದೇ ಸರಿ ಎನ್ನುವ ಮಾತನ್ನು ನಾನು ಮಾತ್ರ ಒಪ್ಪಿಕೊಳ್ಳುತ್ತೇನೆ.

"ಹಾಗಾದರೆ ಏಳು ಪಾಪಗಳಲ್ಲಿ ವಿಕಾರವೂ ಒಂದು ಪಾಪವೆಂದು ನೀನು ಹೇಳುತ್ತೀಯಾ? ಎಂದು ಡಚಸ್ ಕಿರುಚಿದಳು" ನೀನು ಆರ್ಕಿಡ್‌ನ ಉಪಮೆ ಬಗ್ಗೆ ಹೇಳಿದ್ದು ಏನಾಯಿತು.

"ನೀನು ಹೇಳಿದ ಹಾಗೆ ಏಳು ಪಾಪಗಳಲ್ಲಿ ವಿಕಾರವೂ ಪಾಪವೇ! ಅವುಗಳನ್ನು ಸಾಮಾನ್ಯವೆಂದು ಭಾವಿಸಬೇಡ. ಬೀರ್. ಬೈಬಲ್ ಜೊತೆಗೆ ಏಳು ಪಾಪಗಳೂ ಸೇರಿಕೊಂಡೇ ಇಂಗ್ಲೆಂಡನ್ನು ಇಂದಿನ ಈ ಸ್ಥಿತಿಗೆ ತಂದಿದೆ.

"ಹಾಗಾದರೆ ನಿನ್ನ ದೇಶದ ಬಗ್ಗೆ ನಿನಗೆ ಪ್ರೀತಿ ಇಲ್ಲವೇ?" ಅವಳು ಕೇಳಿದಳು.

"ನಾನು ಈ ದೇಶದಲ್ಲಿ ಬದುಕುತ್ತಿದ್ದೇನೆ."

"ಅಂದರೆ ಅದನ್ನು ಇನ್ನೂ ಚೆನ್ನಾಗಿ ದ್ವೇಷಿಸಬಹುದೆಂದೇ?"

"ಏನಾದರೂ ಹೇಳಿಕೋ. ತಾರ್ ತೂಫ್ ಯಾಕೆ ಯೂರೋಪಿನಿಂದ ದೂರ ಹೋಗಿ ಒಂದು ಅಂಗಡಿ ಇಟ್ಟುಕೊಂಡ?"

"ಅಲ್ಲ ಇಲ್ಲಿ ಈ ದೇಶದಲ್ಲಿ ಎಷ್ಟೆಲ್ಲ ಒಳ್ಳೆ ಕೆಲಸಗಳಾಗಿವೆ!"

"ಆ ಎಲ್ಲಾ ಒಳ್ಳೆ ಕೆಲಸಗಳನ್ನು ನಮ್ಮ ಮೇಲೆ ಹೊರಿಸಲಾಗಿದೆ ಗ್ಲಾಡಿಸ್"

"ಹಾಗಾಗಿ ನಾವು ಅವುಗಳನ್ನು ಹೊರುತ್ತಿದ್ದೇವೆ"

"ಸಾಕಷ್ಟು ಅಭಿವೃದ್ಧಿ ಹೊಂದಿದ್ದೇವೆ"

"ಅಭಿವೃದ್ಧಿಗಿಂತ ನನಗೆ ಅವನತೀನೇ ಇಷ್ಟ"

"ಕಲೆ ವಿಚಾರವಾಗಿ ನಿನ್ನ ಅಭಿಪ್ರಾಯವೇನು?"

"ಅದೊಂದು ರೋಗ"

"ಪ್ರೀತಿ?"

"ಅದೊಂದು ಭ್ರಮೆ"

"ಧರ್ಮ"

"ನಂಬಿಕೆಗೆ ಬದಲಾಗಿ ಬಳಕೆಯಾಗುವಂಥಾದ್ದು"

"ನೀನೊಬ್ಬ ಅನುಮಾನದ ಪಿಶಾಚಿ"

"ಖಂಡಿತ ಇಲ್ಲ. ಅನುಮಾನವೇ ನಂಬಿಕೆಗೆ ದಾರಿ"

"ನೀನು ಏನಾಗಿದ್ದೀಯ?"

"ವಿವರಿಸಿಕೊಳ್ಳುವುದೆಂದರೆ ನಮ್ಮನ್ನು ಮಿತಿಗೊಳಿಸಿಕೊಳ್ಳುವುದು"

"ಒಂದು ಉದಾಹರಣೆ ಕೊಡು"

"ಬೇಡ ! ದಿಕ್ಕು ತಪ್ಪಿಸುವ ಈ ವ್ಯವಸ್ಥೆಯಲ್ಲಿ ಕಳೆದು ಹೋಗುತ್ತೀ"

"ನೀನು ನನಗೆ ಸಿಟ್ಟು ಬರಿಸುತ್ತೀ ! ಬಿಡು ಬೇರೆ ಇನ್ನೇನಾದರೂ ಮಾತಾಡೋಣ"

"ನಮ್ಮ ಆತಿಥೇಯನೇ ಮಾತಿಗೆ ಒಳ್ಳೆ ವಿಷಯ. ಎಷ್ಟೋ ಹಿಂದೆ ಅವನು ಪ್ರಿನ್ಸ್ ಚಾರ್ಮಿಂಗ್ ಎಂದು ಗುರುತಿಸಿಕೊಂಡಿದ್ದ."

"ಓಹ್ ! ಆ ಹೆಸರನ್ನು ನೆನಪಿಸಬೇಡ"

ಡೋರಿಯನ್ ಗಟ್ಟಿಯಾಗಿ ಹೇಳಿದ. ಕೆನ್ನೆಗೆ ಕೆಂಪುತಂದುಕೊಂಡು ಡಚಸ್ "ನಮ್ಮ ಆತಿಥೇಯ ಯಾಕೋ ಬಹಳ ಗರಂ ಆಗಿದ್ದಾರೆ. ಅವರಿಗೆ ಅನಿಸಿರಬೇಕು, ನನ್ನಂಥ ಚಿಟ್ಟೆಯನ್ನು ಮಾನ್ ಮೌತ್ ಪೂರ್ತಿಯಾಗಿ ವೈಜ್ಞಾನಿಕ ಕಾರಣಗಳಿಗಾಗಿ, ಆಧುನಿಕ ಬದುಕಿಗೆ ಹೊಂದಿಕೊಳ್ಳಲು ಸಾಧ್ಯವಾಗಿರುವ ಜಾತಿಗೆ ಸೇರುತ್ತಾಳೆಂದು ಭಾವಿಸಿ ಮದುವೆಯಾಗಿರಬೇಕು. ಎಂದ "ಹಾಗಂತ ಅವನು ನಿಮ್ಮ ಮೈಗೆ ಪಿನ್ನುಗಳನ್ನು ಚುಚ್ಚುತ್ತಾನೆ ಎಂದು ಹೆದರಬೇಡ ಡಚಸ್" ಎಂದು ಡೋರಿಯನ್ ಗ್ರೇ ಹೇಳಿದ.

"ಅಯ್ಯೋ ಗೊತ್ತಿಲ್ಲ. ನನ್ನ ಸೇವಕಿಗೆ ಸಿಟ್ಟು ಬಂದಾಗ ಮೊದಲು ಮಾಡುವುದು ಇದನ್ನೇ."

"ನಿಮ್ಮ ಮೇಲೆ ಸಿಟ್ಟಾಗುವಂಥದ್ದನ್ನು ನೀವೇನು ಮಾಡ್ತೀರಿ?"

"ಏನೂ ಇಲ್ಲ. ಇರೋದೇ ಸಣ್ಣ ಪುಟ್ಟ ಜಗಳಗಳು ಮಿಸ್ಟರ್ ಗ್ರೇ. ಅದೇ ತಮಾಶೆ ! ಒಂಬತ್ತು ಗಂಟೆಗೆ ಹತ್ತು ನಿಮಿಷ ಇರುವಾಗ ಒಳಗೆ ಬಂದು, ನಾನು 8–30 ಕ್ಕೆ ಡ್ರೆಸ್ ಮಾಡಿಕೊಬೇಕೂಂತೀನಿ !"

"ಅವಳು ಮಾಡೋದು ಸರಿಯಲ್ಲ ! ಬುದ್ಧಿ ಹೇಳಿ ಅಷ್ಟೆ !"

"ಧೈರ್ಯ ಇಲ್ಲ ಮಿಸ್ಟರ್ ಗ್ರೇ. ಯಾಕೇಂದ್ರೆ ಹ್ಯಾಟ್‌ಗಳನ್ನು ನನಗಾಗಿ ಆಯ್ಕೆ ಮಾಡೋದು ಅವಳೇ. ತುಂಬ ಚೆನ್ನಾಗಿರೋದನ್ನು ಆರಿಸುತ್ತಾಳೆ. ನಿಮಗೆ ನೆನಪಿರಬಹುದು ನಾನೊಂದು ಪಾರ್ಟಿಗೆ ಅದೇ ಹಿಲ್‌ಸ್ಟನ್ ಗಾರ್ಡನ್ ಪಾರ್ಟಿಗೆ ಧರಿಸಿ ಬಂದಿದ್ದೆ. ನಿಮಗೆ ಗೊತ್ತಿರಲಾರದು. ಆದರೆ ಗೊತ್ತಿದೆ ಅನ್ನುವ ಹಾಗೆ ತೋರಿಸಿಕೊಳ್ಳುತ್ತಿದ್ದೀರಿ ! ಅದು ನನಗೆ ತುಂಬ ಇಷ್ಟವಾಯಿತು.

"ಹ್ಯಾಟ್ ವಿಚಾರ ಬಿಡಿ, ಯಾರೋ ಒಬ್ಬರು ಹೇಳಿದರಂತೆ "ಹೆಂಗಸರು ತಮ್ಮ ಕಿವಿಗಳ ಮೂಲಕ ಪ್ರೀತಿಸಿದರೆ, ಗಂಡಸರು ಕಣ್ಣುಗಳಿಂದ ಪ್ರೀತಿಸುತ್ತಾರೆ ಅಂತ. ನೀನು ಎಂದಾದರೂ ಪ್ರೀತಿಸುವ ಹಾಗಿದ್ದರೆ"

"ನಾವು ಅದೊಂದನ್ನು ಬಿಟ್ಟು ಬೇರೇನನ್ನೂ ಮಾಡುವುದಿಲ್ಲ" ಡೋರಿಯನ್ ಗೊಣಗಿ ನುಡಿದ.

"ಅಂದರೆ, ನೀವು ಎಂದೂ ನಿಜವಾಗಿ ಪ್ರೀತಿಸುವುದಿಲ್ಲ ಎಂದಾಯಿತು" ಎಂದು ಡಚಸ್ ಸ್ವಲ್ಪ ದುಃಖದಿಂದ ಹೇಳಿದಳು.

"ನನ್ನ ಪ್ರೀತಿಯ ಗ್ಲಾಡಿಸ್ ಅಂಥಾದ್ದನ್ನು ಹೇಗೆತಾನೇ ಹೇಳಬಲ್ಲೆ? ಪದೇ ಪದೇ ಪುನರಾವರ್ತನೆಯಿಂದ ರೋಮಾನ್ಸ್ ಜೀವಂತವಾಗಿರುತ್ತೆ. ಮತ್ತು ಪುನರಾವರ್ತನೆ ಕಲೆಯಾಗಿ ಪರಿವರ್ತಿತವಾಗುತ್ತದೆ. ಪ್ರತಿಸಲ ಪ್ರೀತಿಸಿದಾಗಲೂ ಪ್ರೀತಿ ಮೊದಲ ಅನುಭವದಂತೆಯೇ ಇರುತ್ತದೆ. ಏನಿದ್ದರೂ ಪ್ರೀತಿಯ ತೀವ್ರತೆಯನ್ನು ಹೆಚ್ಚಿಸುತ್ತದೆ. ಜೀವನದ ರಹಸ್ಯವೆಂದರೆ, ಆ ಅನುಭವಗಳನ್ನು ಮತ್ತೆ ಮತ್ತೆ ಸಾಧ್ಯವಾದಷ್ಟು ಪುನಃ ಸೃಷ್ಟಿಸುವುದಾಗಿರುತ್ತದೆ."

"ಯಾರಾದರೂ ಇಂಥ ಪ್ರೀತಿಯಿಂದ ಗಾಯಗೊಂಡಿದ್ದಾಗಲೂ?" ಎಂದು ಡಚಸ್ ಹ್ಯಾರಿಯನ್ನು ಕೇಳಿದಳು.

"ವಿಶೇಷವಾಗಿ ಯಾರಿಗಾದರೂ ಇಂಥ ಅನುಭವವಾಗಿದ್ದಲ್ಲಿ" ಎಂದ ಹೆನ್ರಿ. ಡಚಸ್ ತಿರುಗಿ ಡೋರಿಯನ್ ನತ್ತ ದೃಷ್ಟಿ ಹರಿಸಿ ಕುತೂಹಲ ತುಂಬಿಕೊಂಡ ಕಣ್ಣು ಗಳಿಂದ "ಈ ಮಾತಿಗೆ ಏನು ಹೇಳುತ್ತೀರಿ ಮಿ॥ ಗ್ರೇ" ಜಿಜ್ಞಾಸೆಯ ದನಿಯಲ್ಲಿ ಕೇಳಿದಳು. ಡೋರಿಯನ್ ಒಂದೆರಡು ಕ್ಷಣ ಹಿಂಜರಿದ. ನಂತರ ನಗುವನ್ನು ತಂದುಕೊಂಡು,

"ನಾನು ಯಾವಾಗಲೂ ಹ್ಯಾರಿ ಹೇಳಿದ್ದನ್ನು ಒಪ್ಪಿಕೊಳ್ಳುತ್ತೇನೆ"

"ಅವನು ಹೇಳೋದು ಸರಿಯಲ್ಲದಿದ್ದರೂ?"

"ಹ್ಯಾರಿ ಯಾವಾಗಲೂ ತಪ್ಪು ಹೇಳುವುದಿಲ್ಲ"

"ಅವನ ಫಿಲಾಸಫಿಯಿಂದ ನಿನಗೆ ಸಂತೋಷವಾಗುತ್ತೇನು?"

"ಸಂತೋಷಕ್ಕಾಗಿ ನಾನೆಂದೂ ಪ್ರಯತ್ನಿಸಲಿಲ್ಲ. ನನಗೆ ಬೇಕಾಗಿರೋದು ಸುಖಾನುಭವಗಳು"

"ಹಾಗಾದರೆ ಬಯಸಿದ್ದು ಸಿಕ್ಕಿತೇನು? ಮಿ॥ ಗ್ರೇ"

"ಬೇಕಾದಷ್ಟು ಸಲ, ಬೇಕು ಬೇಕಾದಷ್ಟು ಸಿಕ್ಕಿದೆ, ಡಚಸ್ ಒಂದು ದೀರ್ಘವಾದ ಉಸಿರೆಳೆದುಕೊಂಡು,

"ನಾನೆಂದೂ ಸಂತೋಷಕ್ಕಾಗಿ ಹುಡುಕಾಡಲಿಲ್ಲ. ನನಗೆ ಬೇಕಾಗಿರುವುದು ಮನಃಶಾಂತಿ. ಈಗ ನಾನು ಹೋಗಿ ಬಟ್ಟೆ ಬದಲಾಯಿಸದಿದ್ದರೆ ಇವತ್ತು ನನಗೆ ಶಾಂತಿಯೇ ಇಲ್ಲದಂತಾಗುತ್ತದೆ."

"ನಾನು ನಿಮಗೆ ಒಂದಷ್ಟು ಆರ್ಕಿಡ್‌ಗಳನ್ನು ತಂದುಕೊಡೋಣಾಂತ ಅನ್ನಿಸುತ್ತಿದೆ". ಎಂದು ಹೇಳಿ ಎದ್ದು ನಿಂತು ಹೊರಡಲು ಅನುವಾದ.

"ಅವನ ಜೊತೆ ನೀನು ಸರಿಯಾಗಿ ನಡೆದುಕೊಳ್ಳುತ್ತಿಲ್ಲ. ಸ್ವಲ್ಪ ಎಚ್ಚರಿಕೆಯಿಂದ ಇರು. ಯಾರನ್ನಾದರೂ ಮರುಳು ಮಾಡಿಬಿಡುತ್ತಾನೆ"

“ ಅವನೇ ಇಲ್ಲದಿದ್ದರೆ ಜಗಳಕ್ಕೆ ದಾರೀನೆ ಇರೋಲ್ಲ”

“ಗ್ರೀಕರು ಗ್ರೀಕರಿಗೆ ಎದುರಾದರೆ?”

“ನಾನು ಟ್ರೋಜನರ ಪರವಾಗಿರುತ್ತೇನೆ. ಅವರು ಯುದ್ಧ ಮಾಡಿದ್ದು ಹೆಣ್ಣಿಗಾಗಿ”

“ಅವರು ಸೋತರಲ್ಲ”

“ಸೆರೆಯಾಳಾಗುವುದಕ್ಕಿಂತ ಇನ್ನೂ ಎಷ್ಟೋ ಅನಿಷ್ಟಗಳಿವೆ”

“ಕಡಿವಾಣ ಸಡಿಲಾಗಿ ಹಿಡಿದು ಸವಾರಿ ಮಾಡುತ್ತಿರುವೆ”

“ನಮ್ಮ ಓಟದ ನಡೆಯೇ ಬದುಕು”

“ಹಾಗಾದರೆ ಈ ರಾತ್ರಿಯೇ ನನ್ನ ದಿನಚರಿಯಲ್ಲಿ ಇದನ್ನು ಬರೆದುಕೊಳ್ಳುತ್ತೇನೆ.”

“ಏನನ್ನು”

“ಅದೇ ಸುಟ್ಟುಕೊಂಡು ಮಗು ಬೆಂಕಿಯನ್ನು ಪ್ರೀತಿಸುತ್ತೆ ಅಂತ”

“ನಾನು ಇನ್ನೂ ಸುಟ್ಟುಹೋಗಿಲ್ಲ. ನನ್ನ ರೆಕ್ಕೆಗಳು ಇನ್ನೂ ಸುರಕ್ಷಿತವಾಗಿವೆ.”

“ಹೌದು ಆ ರೆಕ್ಕೆಗಳನ್ನು ಹಾರುವುದಕ್ಕೆ ಬಳಸದೆ, ಬೇರೆಲ್ಲಕ್ಕೂ ಬಳಸುತ್ತಿದ್ದೀಯ”

“ಧೈರ್ಯ ಈಗ ಗಂಡಸರಿಂದ ಹೆಂಗಸರಿಗೆ ರವಾನೆಯಾಗಿದೆ. ನಮಗೆ ಅದೆಲ್ಲ ಒಂದು ಹೊಸ ಅನುಭವ”

“ನಿನಗೊಬ್ಬರು ಶತ್ರುವಿದ್ದಾರೆ”

“ಯಾರು”

ನಗುತ್ತಾ ಹೇಳಿದ – “ಅದೇ ಲೇಡಿ ನಾರ್ ಬರೊ ಅವನೆಂದರೆ ಅವಳು ಬಿದ್ದು ಸಾಯ್ತಾಳೆ.

“ನೀನು ಏನೇನೋ ಅನುಮಾನಗಳನ್ನು ಹುಟ್ಟುಹಾಕುತ್ತಿದ್ದೀಯ”

“ಹಳೇ ಸಂಪ್ರದಾಯಗಳಿಗೆ ಮೊರೆ ಹೋಗುವುದು ನಮ್ಮಂಥ ರೋಮಾಂಟಿಸ್ಟರಿಗೆ ಹಾನಿಕಾರಕ”

“ರೋಮಾಂಟಿಸ್ಟರು ! ನಿಮಗೆ ಎಲ್ಲ ವೈಜ್ಞಾನಿಕ ವಿಧಾನಗಳು ಇದ್ದೇ ಇವೆ”

“ಗಂಡಸರು ನಮಗೆ ಪಾಠ ಕಲಿಸಿದ್ದಾರೆ”

“ಕಲಿಸಿದ್ದಾರೆ ಆದರೆ ವಿವರಿಸಿ ತಿಳಿಸಿಲ್ಲ.

“ಹಾಗಾದರೆ ಲಿಂಗಭೇದವನ್ನು ತಿಳಿಸಿಕೊಡು ನಮಗೆ”

“ರಹಸ್ಯಗಳಿಲ್ಲದ ಸ್ಫಿಂಕ್ಸರು”

ಅವನ ಕಡೆ ಮುಗುಳು ನಗುತ್ತಾ ನೋಡಿದಳು

"ಮಿಸ್ಟರ್ ಗ್ರೇ ಎಷ್ಟು ಹೊತ್ತು ಇರ್ತಾನೆ"

ನಾನು ನನ್ನ ಫ್ರಾಕಿನ ಬಣ್ಣ ಯಾವುದೆಂದು ಹೇಳಿಲ್ಲ. ಹೋಗಿ ಅವನಿಗೆ ಸಹಾಯ ಮಾಡೋಣ"

"ಹೌದೌದು, ಅವನು ತರುವ ಹೂಗಳಿಗೆ ಹೊಂದುವ ಹಾಗೆ ನಿನ್ನ ಫ್ರಾಕು ಇರಬೇಕಲ್ಲ ಗ್ಲಾಡಿಸ್"

"ಇಷ್ಟು ಬೇಗ ಅದೆಲ್ಲ ಇಲ್ಲ"

"ರೋಮಾಂಟಿಕ್ ಕಲೆ ಪ್ರಾರಂಭ ಆಗೋದೇ ಕ್ಲೈಮಾಕ್ಸ್‌ನಲ್ಲಿ"

"ಇನ್ನು ಹೊರಡಲು ಸಮಯ ಆಗ್ತಿದೆ"

ಎಂದು ಏಳುವಷ್ಟರಲ್ಲಿ ಏನೋ ದೊಡ್ಡದಾದ ಸದ್ದಾಯಿತು. ಹಿಂದಿನಿಂದ ಯಾರೋ ನರಳುತ್ತಿದ್ದಂತೆ ಕೇಳಿಸಿತು. ಎಲ್ಲರೂ ಗಾಭರಿಯಿಂದ ಒಬ್ಬರನ್ನೊಬ್ಬರು ನೋಡಿಕೊಳ್ಳ ತೊಡಗಿದರು. ಡಚಸ್‌ಳ ಕಣ್ಣಲ್ಲಿ ಭಯಂಕರ ದೃಶ್ಯವನ್ನು ನೋಡುತ್ತಿದ್ದ ನೋಟ ಕಾಣಿಸಿತು. ಲಾರ್ಡ್ ಹೆನ್ರಿಯೂ ಭಯಭೀತಿ ಸ್ಥಿತಿಯಲ್ಲಿಯೇ ಡೋರಿಯನ್ ಗ್ರೇ ಬೆನ್ನು ಮೇಲಾಗಿ ಬಿದ್ದಿದ್ದೆಡೆಗೆ ಓಡಿ ಬಂದ. ಸತ್ತ ಶವದಂತೆ ಕಾಣಿಸುತ್ತಿದ್ದ. ಕೂಡಲೇ ಎಲ್ಲರೂ ಸೇರಿ ಅವನನ್ನು ಎತ್ತಿಕೊಂಡು ಕೋಣೆಯೊಂದನ್ನು ಪ್ರವೇಶಿಸಿ ಸೋಫಾದ ಮೇಲೆ ಮಲಗಿಸಿದರು. ಸ್ವಲ್ಪ ಹೊತ್ತಿನ ನಂತರ ಅವನಿಗೆ ಪ್ರಜ್ಞೆ ಮರುಕಳಿಸಿ ತಾನಾಗಿಯೇ ಎದ್ದು ಕುಳಿತನಾದರೂ ಇನ್ನೂ ಯಾವುದೋ ಮತ್ತಿನಲ್ಲಿದ್ದ. ಆದರೂ ಬೆರಗು ಗಣ್ಣಿನಲ್ಲಿ "ಏನಾಯ್ತು ನನಗೆ?" ಎಂದು ಪ್ರಶ್ನಿಸಿದನಾದರೂ ಏನೋ ನೆನಪಿಸಿಕೊಂಡವನಂತೆ, "ಓಹ್ ! ನೆನಪಾಯಿತು ಎಂದು ಹೇಳಿಕೊಳ್ಳುತ್ತಾ "ಹ್ಯಾರಿ ನಾನಿಲ್ಲಿ ಸುರಕ್ಷಿತವಾಗಿ ಇರೋಕೆ ಸಾಧ್ಯವೇ" ಎಂದು ಹೇಳುತ್ತಾ ಭಯದಿಂದ ತತ್ತರಿಸುತ್ತಿದ್ದ.

"ಅಯ್ಯೋ ಗೆಳೆಯ ಏನೂ ಆಗಿಲ್ಲ. ಎಲ್ಲೊ ಸ್ವಲ್ಪ ತಲೆತಿರುಗಿ ಬಿದ್ದಿದ್ದೀಯ ಅಷ್ಟೆ! ತುಂಬ ಕೆಲಸ ಮಾಡಿ ದಣಿದಿರಬೇಕು. ನೀನೇನೂ ಊಟಕ್ಕೆ ಕೆಳಗೆ ಬರಬೇಕಿಲ್ಲ. ನಾನೇ ಎಲ್ಲಾ ನಿಭಾಯಿಸ್ತೇನೆ.

"ಇಲ್ಲ ನಾನೂ ಕೆಳಗೆ ಬರ್ತೇನೆ" ಎಂದು ಹೇಳಿ ತಡವರಿಸುತ್ತಾ ಎದ್ದ. ನಾನು ಒಂಟಿಯಾಗಿ ಇಲ್ಲಿ ಇರೋದಕ್ಕಿಂತ, ನಿಮ್ಮ ಜೊತೆ ಇರಲು ಬರ್ತೀನಿ."

ಕೋಣೆಯೊಳಗೆ ಹೋಗಿ ಬಟ್ಟೆ ಬದಲಾಯಿಸಿ ಬಂದನಾದರೂ ತೀರಾ ಹೆದರಿದವನಂತೆ ಕಾಣುತ್ತಿದ್ದ. ಜೇಮ್ಸ್ ವೇನ್ ತನ್ನನ್ನು ಗಮನಿಸುತ್ತಿದ್ದುದನ್ನು ನೋಡಿದ್ದ

❖

# ಅಧ್ಯಾಯ – 18

**ಮಾ**ರನೆಯ ದಿನ ಮನೆ ಬಿಟ್ಟು ಹೋಗಲೇ ಇಲ್ಲ. ಇಡೀ ದಿನ ತನ್ನ ಕೋಣೆಯಲ್ಲಿಯೇ, ಹೆದರಿ, ಹೆದರಿ ಮುದುಡಿಕೊಂಡು ಮಲಗಿದ್ದ. ಸ್ವಲ್ಪ ಸದ್ದಾದರೂ ಬೆಚ್ಚಿ ಬೀಳುತ್ತಿದ್ದ. ಪದೇ ಪದೇ ಹೊರಗಡೆ ನೋಡುತ್ತಿದ್ದ. ಮತ್ತೆ ಮತ್ತೆ ಜೇಮ್ಸ್ ವೇನನ ಮುಖವನ್ನೇ ನೆನಪಿಸಿಕೊಳ್ಳುತ್ತಿದ್ದ.

ಬಹುಶಃ ಇದೆಲ್ಲ ಅವನ ಕಲ್ಪನೆಯಾಗಿರಬಹುದು ಎನಿಸುತ್ತಿತ್ತು. ಇವನೊಬ್ಬನಿಗೆ ಹೊರತಾಗಿ ಬೇರೆಯಾರೂ ಯಾವ ಅಪರಿಚಿತನನ್ನೂ ಸುತ್ತ ಮುತ್ತ ಓಡಾಡಿದ್ದನ್ನು ಗಮನಿಸಿರಲಿಲ್ಲ. ಮನೆಯ ಸುತ್ತ ಬೇಕಾದಷ್ಟು ಮಂದಿ ಸೇವಕರು ಗಾರ್ಡುಗಳು ಓಡಾಡುತ್ತಲೇ ಇದ್ದರು. ಯಾರಾದರೂ ಬಂದಿರಬಹುದೆಂದರೆ, ಎಲ್ಲೂ ಹೆಜ್ಜೆ ಗುರುತುಗಳೂ ಕಾಣಿಸಲಿಲ್ಲ. ಅಲ್ಲದೆ ಜೇಮ್ಸ್ ವೇನ್ ಯಾವಾಗಲೋ ಇಂಗ್ಲೆಂಡಿನಿಂದ ಹೊರಟುಹೋಗಿದ್ದ. ಆದ್ದರಿಂದ ಅವನಿಂದ ಡೋರಿಯನ್‌ಗೆ ಯಾವುದೇ ಅಪಾಯ ಇರಲಿಲ್ಲ. ಆದರೂ ಅವನೇಕೆ ಹೆದರುತ್ತಿದ್ದಾನೆಂದು ಎಲ್ಲರೂ ಅಚ್ಚರಿಗೊಂಡಿದ್ದರು

ಇದೆಲ್ಲ ಅವನ ಕಲ್ಪನೆಯೇ ಎನ್ನುವುದಾದರೆ ಅಷ್ಟೊಂದು ಹೆದರಿಕೆಯಾದರೂ ಯಾಕಾಗಬೇಕು ಅವನ ಪಾಪ ಪ್ರಜ್ಞೆ ಅಥವಾ ಅಂತಃಪ್ರಜ್ಞೆಯೇ ಇಂಥ ಭಯಂಕರ ಭ್ರಮೆಗಳಿಗೆ ದಾರಿ ಮಾಡಿದ್ದಾದರೆ, ಅದನ್ನು ಸಹಿಸಿಕೊಳ್ಳುವುದೆಂಥ ಭಯಾನಕ ಅನುಭವವಾಗಬಹುದು. ಹಗಲು ರಾತ್ರಿ ಈ ರೀತಿಯ ಭಯಾನಕ ಅನುಭವಗಳಿಗೆ ಎದುರಾಗುತ್ತಿದ್ದರೆ ಅವನಿಗೇನಾಗಬೇಕು ಅವನೆಂಥ ಕೆಟ್ಟ ಗಳಿಗೆಗಳಲ್ಲಿ ಅವನ ಸ್ನೇಹಿತನನ್ನು ಕೊಂದಿರಬೇಕು.! ಆ ಬೀಭತ್ಸ ದೃಶ್ಯದ ನೆನಪಾಗುತ್ತಿದ್ದಂತೆ, ಇಡೀ ದೃಶ್ಯ ಅವನ ಕಣ್ಣ ಮುಂದೆ ಮರುಕಳಿಸುತ್ತಿತ್ತು. ಕ್ಷಣ ಕ್ಷಣವೂ ಅವನೆದೆಯಲ್ಲಿ ಭಯದ ಸ್ಫೋಟವನ್ನು ಸೃಷ್ಟಿಸುತ್ತಿತ್ತು. ಒಂದು ಗಳಿಗೆ, ನಿದ್ದೆಯೂ

ಅವನಿಗೆ ಸಾಧ್ಯವಾಗಲಿಲ್ಲ. ಕಾಲದ ಕಪ್ಪುಗವಿಯೊಳಗಿಂದ ಭಯಾನಕ ನೆನಪುಗಳು ಧುತ್ತು ಧುತ್ತೆಂದು ಹೊಮ್ಮಿ ಬರುತ್ತಿದ್ದವು.

ಬೆಳಿಗ್ಗೆ ಆರುಗಂಟೆಗೇ ಹೆನ್ರಿ ಡೋರಿಯನ್‌ನನ್ನು ಕಾಣಲು ಬಂದ. ಡೋರಿಯನ್ ಅಳುತ್ತಿದ್ದ. ಅವನೆದೆ ಒಡೆದುಹೋಗುವಂತಿತ್ತು. ಎರಡು ದಿನಗಳಿಂದಲೂ ಸೂರ್ಯನ ಮುಖವನ್ನೇ ಕಂಡಿರಲಿಲ್ಲ. ಮೂರನೇ ದಿನ ಹೊರಗೆ ಹೆಜ್ಜೆ ಹಾಕಿದ. ತಾಜಾ ಗಾಳಿಯನ್ನು ಹೀರಿಕೊಂಡು ಹೊರಗಿನ ಆ ವಾತಾವರಣದ ಜೊತೆಗೆ ತಾನೇ ಪ್ರಯತ್ನ ಪೂರ್ವಕವಾಗಿ, ತನ್ನ ಮನಸ್ಸನ್ನು ಹಿಡಿತಕ್ಕೆ ತಂದುಕೊಂಡಿದ್ದರ ಪರಿಣಾಮದಿಂದ ಸ್ವಲ್ಪ ಮಟ್ಟಿಗೆ ಗೆಲುವಾಗಿದ್ದ. ಇಂಥ ಸಂದರ್ಭಗಳಲ್ಲಿ ಮನುಷ್ಯ ತನ್ನನ್ನು ಕಾಡುತ್ತಿರುವ ಉದ್ರಿಕ್ತ, ವಿಕ್ಷುಬ್ಧ ನೆನಪುಗಳನ್ನು ಭಾವನೆಗಳನ್ನು ಸ್ವಪ್ರಯತ್ನ, ಸಂಘರ್ಷಗಳಿಂದ ಗೆಲ್ಲಬೇಕು. ಅರಿವು ಮೂಡುತ್ತಿದ್ದಂತೆ ಅವನಿಗೆ ಅವನ ಮೇಲೇ ಮರುಕವೆನಿಸಿತು.

ಬೆಳಗಿನ ಉಪಾಹಾರ ಮುಗಿಯುತ್ತಿದ್ದಂತೆ ಡಚಸ್ ಜೊತೆ ಒಂದಷ್ಟು ದೂರ ಉದ್ಯಾನದಲ್ಲಿ ಅಡ್ಡಾಡಿದ. ನಂತರ ಶೂಟಿಂಗ್ ಪಾರ್ಟಿ ಸೇರಿಕೊಂಡ. ಒಂದಷ್ಟು ಹೊತ್ತು ಬೇಟೆಯ ಸಂತೋಷ ಅನುಭವಿಸಿದ. ಆದರೆ ಮತ್ತೊಮ್ಮೆ ನೆನಪಿನ ನೋವು ಅವನಲ್ಲಿ ಮೂಡಿ ದಿಕ್ಕು ತೋಚದಂತಾಗಿದ್ದ ಸಮಯದಲ್ಲಿಯೇ ಯಾರೊ ಹಿಂದಿನಿಂದ ಬೆನ್ನ ಮೇಲೆ ಕೈಯಿರಿಸಿದ ಅನುಭವಾಗಿ ತಿರುಗಿ ನೋಡಿದ. ಲಾರ್ಡ್ ಹೆನ್ರಿ ಕಾಣಿಸಿದ.

ಡೋರಿಯನ್ ಅವರೆಲ್ಲರಿಗೂ ಈ ಬೇಟೆಯ ಆಟ ಸಾಕೆಂದು ಹೇಳುತ್ತೇನೆ. ನೀನು ಈ ಸ್ಥಿತಿಯಲ್ಲಿ ಇರುವಾಗ ಇದೆಲ್ಲ ಚೆನ್ನಾಗಿರೋದಿಲ್ಲ

"ಹ್ಯಾರಿ ಇವತ್ತು ಮಾತ್ರವೇ ಅಲ್ಲ ಈ ಬೇಟೆಯ ಆಟವನ್ನು ಎಂದೆಂದಿಗೂ ನಿಲ್ಲಿಸಿ ಬಿಡಬೇಕು. ಅತ್ಯಂತ ಕ್ರೂರವೂ ಅಸಹ್ಯಕರವೂ ಆದ ಚಟುವಟಿಕೆ"

"ಆ ಮನುಷ್ಯ....." ಎಂದು ಹೇಳುವ ಮೊದಲೇ ಮಾತು ನಿಂತಿತು.

ಪಾಪ...! ಅವನೆದೆಗೆ ಸರಿಯಾಗಿ ಗುಂಡು ತಗುಲಿತು. ಕೂಡಲೇ ಪ್ರಾಣ ಹೋಗಿರಬೇಕು. ನಡಿ ನಾವು ತಕ್ಷಣ ಇಲ್ಲಿಂದ ಹೊರಟುಬಿಡಬೇಕು."

ಇಬ್ಬರೂ ಜೊತೆ ಜೊತೆಯಾಗಿ ರಸ್ತೆಯಲ್ಲಿ ಹೆಜ್ಜೆ ಹಾಕಿದರು. ದಾರಿ ಮಧ್ಯದಲ್ಲಿ ಹೆನ್ರಿಯತ್ತ ನೋಡುತ್ತಾ "ಹ್ಯಾರಿ ಇದು ಅಪಶಕುನ ಬಹಳ ಕೆಟ್ಟ ಅಪಶಕುನ."

"ಯಾವುದು" ಓಹ್ ಅದಾ? ಆ್ಯಕ್ಸಿಡೆಂಟ್ ! ಗೆಳೆಯಾ ಅಂಥ ಆಕಸ್ಮಿಕ ಅಪಘಾತಗಳು ಸರ್ವೇಸಾಮಾನ್ಯ".

"ಹ್ಯಾರಿ ಇದು ಬಹಳ ಕೇಡಿನ ಅಪಶಕುನ. ನನಗನ್ನಿಸುತ್ತೆ, ಇವತ್ತು ನಮ್ಮಲ್ಲಿ ಯಾರೋ ಒಬ್ಬರಿಗೆ ಅಪಘಾತ ಅಥವಾ ಕೇಡು ಸಂಭವಿಸುತ್ತೆ. ನನಗಾದರೂ ಆಗಬಹುದು ಎಂದು ನೋವಿನಿಂದ ಕೈಗಳನ್ನು ಕಣ್ಣಿನ ಮೇಲೆ ಇರಿಸಿಕೊಂಡ.

"ಆ ಹಿರಿಯ ಮನುಷ್ಯ ನಕ್ಕ. ಪ್ರಪಂಚದಲ್ಲಿ ಒಂದೇ ಒಂದು ಕೆಟ್ಟದೊಂದಿದ್ದರೆ ಅದು ಶತ್ರುತ್ವ, ಡೋರಿಯನ್ ಇದೊಂದು ಪಾಪ? ಇಂಥ ಪಾಪಕ್ಕೆ ಪರಿಹಾರವೂ ಇಲ್ಲ. ಕ್ಷಮೆಯೂ ಇಲ್ಲ. ಇದರಿಂದ ನಾವು ತಪ್ಪಿಸಿಕೊಳ್ಳಲು ಸಾಧ್ಯವಿದೆ. ಆದರೆ ನಮ್ಮ ಸುತ್ತ ಮುತ್ತ ಇರುವವರು, ಅದೂ ಇದೂ ಮಾತಾಡುವುದನ್ನು ನಿಲ್ಲಿಸಬೇಕು. ನಮ್ಮೊಳಗನ್ನು ಕೆರಳಿಸುವ ಪ್ರಯತ್ನವನ್ನು ಮಾಡದಿರಬೇಕು. ಅವರಿಗೆ ನಾವೇ ಕೆಲಸಕ್ಕೆ ಬಾರದ್ದನ್ನು ಕುರಿತು ಹರಟೆ ಮಾಡುವುದನ್ನು ನಿಲ್ಲಿಸಲು ಹೇಳಬೇಕು. ಇನ್ನು ಶಕುನ, ಅದೆಲ್ಲಾ ಸುಳ್ಳು ಅಂಥಾದ್ದು ಯಾವುದೂ ಇಲ್ಲ. ವಿಧಿ, ಮೊದಲೇ ಏನನ್ನೂ ಹೇಳಿ ಕಳಿಸುವುದೂ ಇಲ್ಲ. ಅದೂ ಅಲ್ಲದೆ ನಿನಗೇನು ತಾನೇ ಆದೀತು? ಪ್ರಪಂಚದಲ್ಲಿ ಮನುಷ್ಯ ಏನೇನು ಇರಬೇಕೆಂದು ಬಯಸುತ್ತಾನೋ ಅದೆಲ್ಲವೂ ನಿನ್ನ ಬಳಿ ಹೇರಳವಾಗಿದೆ. ನಿನ್ನ ಪಕ್ಕದಲ್ಲಿ ಕುಳಿತುಕೊಳ್ಳುವ ಅದೃಷ್ಟವನ್ನು ಹಾರೈಸುವವರು ಎಷ್ಟು ಮಂದಿ ಇಲ್ಲ!"

"ಹ್ಯಾರಿ ನನ್ನಂತೆ ಜಾಗಗಳನ್ನು ಬದಲಾಯಿಸಿದೆ ಇರುವ ವ್ಯಕ್ತಿಯೊಬ್ಬರೂ ಇಲ್ಲ. ಹಾಗೆ ನಗಬೇಡ, ನಾನು ನಿಜ ಹೇಳುತ್ತಿದ್ದೇನೆ. ನಮ್ಮ ಕಣ್ಮುಂದೆ ಪ್ರಾಣ ಬಿಟ್ಟ ಆ ರೈತನೇ ನನಗಿಂತ ಎಷ್ಟೋವಾಸಿ. ನನಗೆ ಸಾವಿನ ಭಯವಿಲ್ಲ, ಆದರೆ ಸಾವು ಬರುವುದನ್ನು ನೋಡಿದರೆ ಭಯವಾಗುತ್ತೆ. ಓ ದೇವರೆ ! ನೋಡು ! ನೋಡು! ಆ ಮರಗಳ ಹಿಂದೆ ಯಾರೋ ಒಬ್ಬ ವ್ಯಕ್ತಿ ಓಡಾಡುತ್ತಿದ್ದಾನೆ. ನನ್ನನ್ನು ಗಮನಿಸುತ್ತಿದ್ದಾನೆ; ನನಗಾಗಿ ಕಾಯುತ್ತಿದ್ದಾನೆ."

ಹೆನ್ರಿ ಅವನು ಹೇಳಿದ ದಿಕ್ಕಿನತ್ತ ನೋಡಿದ. "ಹೌದು ವ್ಯಕ್ತಿ ಇದ್ದಾನೆ ! ನಿನ್ನ ತೋಟಗಾರ ನಿನಗಾಗಿ ಕಾಯುತ್ತಿದ್ದಾನೆ. ಬಹುಶಃ ಇವತ್ತು ಮೇಜನ್ನು ಅಲಂಕರಿಸಲು ಯಾವ ಹೂಗಳು ಬೇಕು ಎಂದು ಕೇಳುವುದಕ್ಕೆ ಪ್ರಯತ್ನಿಸುತ್ತಿರಬೇಕು. ಸುಮ್ಮನೆ ಕಾರಣ ಇಲ್ಲದೆಯೇ ಹೆದರುತ್ತಿದ್ದೀಯ. ಬಾ, ನನ್ನ ಡಾಕ್ಟರೊಬ್ಬರು ಇದ್ದಾರೆ. ಅವರನ್ನು ಕಂಡು ಮಾತಾಡು.

ತೋಟಗಾರ ಬಳಿಗೆ ಬರುತ್ತಿದ್ದಂತೆ, ಗ್ರೇ ನಿರಾಳವಾಗಿ ಉಸಿರಾಡಿದ. ತೋಟಗಾರ, ಹೆನ್ರಿಗೂ ಗೌರವ ಸಲ್ಲಿಸಿದನಾದರೂ ಯಾಕೋ ಹಿಂಜರಿಯುತ್ತಿದ್ದಂತೆ ಕಾಣಿಸಿದ. ನಂತರ ತನ್ನ ಕೈಲಿದ್ದ ಕಾಗದವನ್ನು ಯಜಮಾನನ ಕೈಲಿರಿಸಿದ. "ಇದಕ್ಕೆ ಉತ್ತರದ ನಿರೀಕ್ಷೆಯಲ್ಲಿರ ಬೇಕೆಂದು ಆದೇಶಿಸಿದ್ದಾರೆ, ಮೇಡಂ" ಎಂದ.

"ಸರಿ, ಹೋಗಿ ಅವರಿಗೆ ಹೇಳು. ನಾನೇ ಖುದ್ದಾಗಿ ಬರುತ್ತಿದ್ದೇನೆಂದು" ತಣ್ಣಗೆ, ನಿರ್ಭಾವುಕನಾಗಿ ಹೇಳಿದ. ಆ ಮನುಷ್ಯ ಮನೆಯತ್ತ ಹಿಂತಿರುಗಿ ಹೋದ.

"ಅಪಾಯಕಾರಿ ಕೆಲಸಗಳನ್ನು ಮಾಡುವುದು ಹೆಂಗಸರಿಗೆ ಬಹಳ ಇಷ್ಟ" ಎಂದು ಲಾರ್ಡ್ ಹೆನ್ರಿ ಹೇಳಿದ. ಅವರಲ್ಲಿರುವ ಅನೇಕ ಗುಣಗಳಲ್ಲಿ ಇದನ್ನು ನಾನು ಬಹಳವಾಗಿ ಇಷ್ಟಪಡುತ್ತೇನೆ. ಒಂದು ಹೆಣ್ಣು ಬೇರೆಯವರು ಎಲ್ಲಿಯವರೆಗೆ ನೋಡುತ್ತಿರುತ್ತಾರೋ ಅಲ್ಲಿವರೆಗೆ, ಯಾರ ಜೊತೆ ಬೇಕಾದರೂ ಅಡ್ಡಾಡ್ತಾರೆ."

"ನಿನಗೆ ಬೇರೆಯವರ ಬಗ್ಗೆ ಇಂಥ ಬೇಡದ ವಿಷಯಗಳನ್ನೆಲ್ಲ ಹೇಳೋಕೆ ಅದೆಷ್ಟು ಇಷ್ಟಾನೋ ಹ್ಯಾರಿ! ನನಗೆ ಡಚಸ್ ಬಹಳ ಇಷ್ಟವಾಗುತ್ತೆ ಆದರೆ ಪ್ರೀತಿಮಾಡೋದು ಮಾತ್ರ ಸಾಧ್ಯ ಇಲ್ಲ"

"ಡಚಸ್ ನಿನ್ನನ್ನು ಬಹಳವಾಗಿ ಪ್ರೀತಿಸ್ತಾಳೆ ಆದರೆ ಇಷ್ಟಪಡೋಲ್ಲ. ಆದ್ದರಿಂದ ನಿಮ್ಮಿಬ್ಬರಿಗೂ ಬಹಳ ಹೊಂದಾಣಿಕೆಯಾಗುತ್ತೆ."

"ನೀನು ಇಲ್ಲ ಸಲ್ಲದ ಗುಲ್ಲೆಬ್ಬಿಸುತ್ತಿದ್ದೀ ಹ್ಯಾರಿ, ನೀನು ಇಂಥಾದ್ದೆಲ್ಲ ಹೇಳೋಕೆ ನಿನ್ನ ಬಳಿ ಯಾವ ಆಧಾರವೂ ಇರೊಲ್ಲ"

"ಪ್ರತಿಯೊಂದು ಸ್ಕ್ಯಾಂಡಲ್‌ನ ಆಳದಲ್ಲಿ ಯಾವುದಾದರೂ ಅನೈತಿಕ ವಿಚಾರ ಇರುತ್ತೆ."

"ಯಾರನ್ನಾದರೂ ಬಲಿಪಶುಮಾಡಿ, ಖುಷಿಪಡ್ತೀಯ"

"ನಾನೇನು ಬಲಿಪಶು ಮಾಡೋದು. ಪ್ರಪಂಚಕ್ಕೆ ಖುದ್ದಾಗಿ ಬಲಿ ಪೀಠದ ಮೇಲೆ ತಾನೇ ಬರುತ್ತೆ"

"ನನಗೆ ಪ್ರೀತಿಸುವುದಕ್ಕೆ ಆದರೆ? !. ಗಟ್ಟಿಯಾಗಿ ಹೇಳಿದ ಡೋರಿಯನ್ ಗ್ರೇ. ಅವನ ಆ ಮಾತಿನಲ್ಲಿ ವಿಷಾದವಿತ್ತು." ಆದರೆ ನಾನು ಭಾವನೆಗಳನ್ನೇ ಕಳೆದುಕೊಂಡು ಬಿಟ್ಟಿದ್ದೇನೆ. ಬಯಕೆಗಳನ್ನೇ ಮರೆತುಬಿಟ್ಟಿದ್ದೇನೆ. ನಾನು ನನ್ನಲ್ಲೇ ಕೇಂದ್ರಿಕೃತನಾಗಿದ್ದೇನೆ. ಎಲ್ಲಿಗಾದರೂ ಓಡಿ ಹೋಗಬೇಕು, ಎಲ್ಲಾ ಮರೆತು ಬಿಡಬೇಕು ಎಂದುಕೊಳ್ಳುತ್ತೇನೆ. ಇಲ್ಲಿಗೆ ಬಂದದ್ದೇ ಹುಚ್ಚು ಕೆಲಸವಾಯ್ತು. ನಾನು ಕೂಡಲೇ ಹಾರ್ವೆಗೆ ಒಂದು ದೋಣಿ ಏರ್ಪಾಡು ಮಾಡಲು ಹೇಳಬೇಕು. ಅದೊಂದೇ ನನಗೆ ಸುರಕ್ಷಿತ ಸ್ಥಳ ಎನಿಸುತ್ತೆ. "ಯಾವುದರಿಂದ ಸುರಕ್ಷಿತ ಡೋರಿಯನ್ ! ಏನಾದರೂ ಅಪಾಯದಲ್ಲಿದ್ದೀಯ ಹೇಗೆ? ನನಗೆ ಹೇಳು ಡೋರಿಯನ್. ಸಾಧ್ಯವಾದಲ್ಲಿ ನಿನಗೆ ನಾನು ಸಹಾಯ ಮಾಡಬಲ್ಲೆ."

"ನಿನಗೆ ಹೇಳೋಕೆ ಸಾಧ್ಯವಿಲ್ಲ ಹ್ಯಾರಿ" ಎಂದು ದುಃಖದಿಂದ ಹೇಳಿದ. ಅಲ್ಲದೆ ನನ್ನ ಭ್ರಮೆಗಳೇ ಬಹುಶಃ ನನ್ನನ್ನು ಈ ಸ್ಥಿತಿಗೆ ತಂದಿದೆ ಅನಿಸುತ್ತೆ. ನನಗೇನೊ, ನನ್ನ ಮೇಲೆ ಭಯಂಕರ ಸಂಕಟ ಬಂದೊದಗಲಿದೆ ಎನಿಸುತ್ತೆ"

"ಬಿಡ್ತು ಅನ್ನು !

"ಇಲ್ಲಿ ನನಗೆ ಖಚಿತವಾಗಿ, ಸಂಕಟ ಎರಗುತ್ತೆ ಎನ್ನುವ ಭಾವನೆ ಇದೆ... ಆಹಾ ಡಚಸ್ ಬರುತ್ತಿರುವ ಹಾಗಿದೆ. ನೋಡಿ ಡಚಸ್, ನಾವು ಆಗಲೇ ಬಂದುಬಿಟ್ಟಿದ್ದೇವೆ."

"ಅದೆಲ್ಲದರ ಬಗ್ಗೆ ನನಗೆ ಗೊತ್ತಿದೆ ಮಿಸ್ಟರ್ ಗ್ರೇ. ಬಡಪಾಯಿ ಜಿಯೋಫ್ರಿ ಬಹಳ ಬೇಜಾರಾಗಿದ್ದಾನೆ. ನೀನು ಮೊಲವನ್ನು ಬೇಟೆಯಾಡಬೇಡ ಎಂದು ಹೇಳಿದೆಯಂತೆ. ತಮಾಶೆ ಎನಿಸುತ್ತೆ !"

"ಇರಬಹುದು ತಮಾಶೆಯಾಗಿ ! ಅದ್ಯಾಕೊ ಅದನ್ನು ಕೊಲ್ಲುವುದು ನನಗೆ ಸರಿ ಎನಿಸಲಿಲ್ಲ. ಎಲ್ಲ ಪುಟ್ಟ ಪ್ರಾಣಿಗಳಲ್ಲಿ ಅದು ನನಗೆ ಅತ್ಯಂತ ಸುಂದರ ಪ್ರಾಣಿ ಎನಿಸಿತು. ಆ ಮನುಷ್ಯನ ಬಗ್ಗೆಯೂ ಹೇಳಿರಬೇಕು. ಕ್ಷಮೆಯಿರಲಿ. ಅದರ ಬಗ್ಗೆ ಮಾತಾಡೋಕೇ ಒಂದು ಥರ ಎನಿಸುತ್ತೆ"

"ಸಿಟ್ಟು ಬರಿಸುವಂಥ ವಿಷಯ ಅದು" ಎಂದು ಲಾರ್ಡ್ ಹೆನ್ರಿ ಮಧ್ಯೆ ಪ್ರವೇಶಿಸಿದ ಅದಕ್ಕೆ ಯಾವುದೇ ಮನೋವೈಜ್ಞಾನಿಕ ಮೌಲ್ಯ ಇಲ್ಲ. ಜಿಯೋಫ್ರಿ ಯಾವುದೇ ವಿದೇಶದಿಂದ ಹಾಗೆ ಮಾಡಿದ್ದರೆ ನಿಜವಾಗಿ ಕುತೂಹಲದ್ದೇ ಇರುತ್ತೆ !

"ಹೆನ್ರಿ, ಮಿಸ್ಟರ್ ಗ್ರೇ ಮತ್ತೆ ಪ್ರಜ್ಞೆ ತಪ್ಪುವ ಹಾಗಿದೆ." "ಗ್ರೇ ಸಾವರಿಸಿಕೊಂಡ. ನನಗಂತೂ ನಿಜವಾದ ಕೊಲೆಗಾರ ಯಾರೂಂತ ತಿಳಿಯಬೇಕೆನಿಸುತ್ತೆ"

ಮತ್ತೆ ಮುಗುಳುನಗುತ್ತ "ಏನೂ ಆಗಿಲ್ಲ ಡಚಸ್. ಯಾಕೋ ಮೈ ಕೈಯೆಲ್ಲಾ ವಿಪರೀತ ಎಳೀತಿದೆ. ಎಲ್ಲೋ ತುಂಬ ನಡೆದು ಬಿಟ್ಟಿದ್ದೀನಿ ಎನಿಸುತ್ತೆ. ಹೆನ್ರಿ ಏನು ಹೇಳಿದ ಅನ್ನೋದು ಗೊತ್ತಾಗಲಿಲ್ಲ. ಏನಾದರೂ ಕೆಟ್ಟದ್ದನ್ನು ಹೇಳಿದನಾ ಹೇಗೆ? ಇನ್ನೊಮ್ಮೆ ಸಿಕ್ಕಾಗ ಅದನ್ನು ನನಗೆ ಹೇಳಿ. ತಿಳಿಬೇಕೂಂತಿದ್ದೀನಿ, ಈಗ ಸದ್ಯಕ್ಕೆ ಮನೆಗೆ ಹೋಗಿ ಮಲಗಿಕೊಳ್ಳಬೇಕಿದೆ. ದಯಬಿಟ್ಟು ಕ್ಷಮಿಸುತ್ತೀರಿ ಅಲ್ಲ."

ಡೋರಿಯನ್ ಬೀಳ್ಕೊಂಡು ಅಲ್ಲಿಂದ ಹೊರಟನಂತರ ಹೆನ್ರಿ ಡಚಸ್ ಕಡೆ ನಿದ್ದೆಗಣ್ಣಿಂದ ನೋಡಿದ. "ನಿನಗೆ ಅವನ ಮೇಲೆ ತುಂಬ ಪ್ರೀತಿಯಿದೆಯೇನು? ಕೇಳಿದ. ಅವಳು ಕೂಡಲೆ ಉತ್ತರ ಕೊಡಲಿಲ್ಲ. ಸುಮ್ಮನೆ ಹೊರಗಿನ ನಿಸರ್ಗ ಸೌಂದರ್ಯವನ್ನು ನೋಡುತ್ತಾ ನಿಂತಳು. ನಂತರ "ನನಗೆ ಗೊತ್ತಾಗಿದ್ದರೆ ಚೆನ್ನಾಗಿರುತ್ತಿತ್ತು ಅಂತ ಅಂದುಕೊಳ್ತೇನೆ"

"ತಿಳಿದುಕೊಂಡಷ್ಟೂ ಅಪಾಯ. ತಿಳೀದೇ ಇರೋದರಲ್ಲೇ ಮಜಾ ಇರುತ್ತೆ. ಮಂಜು ಕವಿದಿದ್ದಾಗ ವಸ್ತುಗಳು ಮೋಹಕವಾಗಿರುತ್ತವೆ.

"ಯಾರಿಗಾದರೂ ದಾರಿ ತಪ್ಪಬಹುದು"

"ಪ್ರೀತಿಯ ಗ್ಲಾಡಿಸ್ ಎಲ್ಲಾ ದಾರಿಗಳೂ ಒಂದೇ ಗುರಿಯಲ್ಲಿ ಕೊನೆಯಾಗುತ್ತೆ."

"ಏನದು"

"ಭ್ರಮನಿರಸನ"

"ಇದು ನನ್ನ ಪ್ರಥಮ ಪ್ರವೇಶ"

"ನಿನಗೆ ಅದು ಅದೃಷ್ಟವಾಗಿ ಬಂದಿದೆ ಕೈ ಬಿಟ್ಟರೆ ಹೋಯ್ತು" ಹೆನ್ರಿ ಹೇಳಿದ.

"ಮಾನ್ ಮೌತ್‌ಗೆ ಕೇಳಿಸಿದರೆ?"

"ಮುಪ್ಪು ಕೇಳುವ ಸಾಮರ್ಥ್ಯವನ್ನು ಕಡಿಮೆ ಮಾಡಿದೆ"

"ಅವನು ಎಂದಾದರೂ ಅಸೂಯೆಪಟ್ಟಿದ್ದಾನೆಯೇ"

"ಪಟ್ಟಿದ್ದರೆ ಚೆನ್ನಾಗಿತ್ತೇನೋ"

"ಅವನು ಏನನ್ನೋ ಹುಡುಕಾಡುತ್ತಿರುವಂತೆ ನೋಡಿದ."

"ಏನನ್ನು ಹುಡುಕುತ್ತಿದ್ದೀಯಾ"

ಡಚಸ್ ಹೆನ್ರಿಯನ್ನು ಕೇಳಿದಳು.

"ಏನೋ ಕೆಳಗೆ ಬಿತ್ತು ನೋಡು"

ಅವಳು ನಕ್ಕು "ಆದರೂ ಮಾಸ್ಕ್ ಇನ್ನೂ ಕಳಚಿ ಬಿದ್ದಿಲ್ಲ"

"ಅದು ನಿನ್ನ ಕಣ್ಣುಗಳಿಗೆ ಮತ್ತಷ್ಟು ಆಕರ್ಷಣೆಯನ್ನು ನೀಡುತ್ತದೆ."

ಮತ್ತೆ ಅವಳು ನಕ್ಕಳು. ಮಹಡಿಯಲ್ಲಿ ಡೋರಿಯನ್ ಗ್ರೇ ತನ್ನ ಕೋಣೆಯಲ್ಲಿನ ಸೋಫಾದ ಮೇಲೆ ಮೈಚಾಚಿ ಮಲಗಿದ್ದ. ಅವನ ನರನಾಡಿಗಳಲ್ಲಿ ಇನ್ನೂ ಭೀತಿಯ ಕಚಗುಳಿಯಾಟ ನಡೆದಿತ್ತು. ಬದುಕು ಅವನಿಗೆ ಭಯಂಕರ ಹೊರೆಯಾಗಿತ್ತು. ಐದುಗಂಟೆಗೆ ಕರೆಗಂಟೆ ಬಾರಿಸಿದ. ಸೇವಕ ಒಳಗೆ ಬರುತ್ತಿದ್ದಂತೆ, ತನ್ನ ಬಟ್ಟೆ ಬರೆ ಎಲ್ಲವನ್ನೂ ರೆಡಿ ಮಾಡಿ ರಾತ್ರಿ 8–30ಕ್ಕೆ ಗಾಡಿಗೆ ಬರಹೇಳೆಂದು ಆದೇಶಿಸಿದ. ಸೆಲ್ಬಿ ರಾಯಲ್‌ನಲ್ಲಿ ಇನ್ನೊಂದು ರಾತ್ರಿಯನ್ನೂ ಕಳೆಯಲು ಸಾಧ್ಯವಿಲ್ಲವೆಂದುಕೊಂಡ. ಅದು ಅವನಿಗೆ ಅಪಶಕುನದ ಮನೆಯಾಗಿ ಭಾಸವಾಯಿತು. ಬೆಳಗಿನ ಹೊತ್ತಿನಲ್ಲಿಯೇ ಸಾವು ಹರಿದಾಡಿತ್ತು. ಹಸಿರು ಹುಲ್ಲಿನ ಮೇಲೆಲ್ಲ ರಕ್ತದ ಕಲೆಗಳು? ನಂತರ ಹೆನ್ರಿಗೆ, ತಾನು ವೈದ್ಯರನ್ನು ನೋಡಲು ಊರು ಬಿಟ್ಟು ಹೋಗುತ್ತಿರುವುದಾಗಿಯೂ ಮತ್ತು ಅತಿಥಿಗಳನ್ನು ತನ್ನ ಪರವಾಗಿ ನೋಡಿಕೊಳ್ಳಬೇಕೆಂದೂ ತಿಳಿಸಿ ಪತ್ರ ಬರೆದು ಕವರಿನಲ್ಲಿ ಇರಿಸಬೇಕೆಂದು ಪ್ರಯತ್ನಿಸುತ್ತಿರುವಾಗಲೇ, ಬಾಗಿಲ ಮೇಲೆ ಸದ್ದಾಯಿತು. ಸೇವಕ ಹೆಡ್ ಕೀಪರ್ ಡೋರಿಯನ್‌ನನ್ನು ಕಾಣಲು ಬಯಸುತ್ತಿರುವುದಾಗಿ ತಿಳಿಸಿ ಒಂದೆರಡು ನಿಮಿಷ ಅನುಮಾನಿಸುತ್ತ ನಿಂತಿದ್ದು, ನಂತರ ಒಳಗೆ ಕಳಿಸಲು ಹೇಳಿದ.

ಆತ ಒಳಗೆ ಬರುತ್ತಿದ್ದಂತೆ, ಡೋರಿಯನ್ ಗ್ರೇ ಚೆಕ್ ಬುಕ್ಕನ್ನು ಡ್ರಾಯರಿಂದ ಹೊರತೆಗೆದು ಅವನ ಮುಂದೆ ಇರಿಸಿದ.

"ಇವತ್ತು ಬೆಳಿಗ್ಗೆ ಸಂಭವಿಸಿದ ದುರದೃಷ್ಟಕರ ಘಟನೆಗೆ ಸಂಬಂಧಿಸಿದಂತೆ" ಬಂದಿರುವೆ ಎನಿಸುತ್ತೆ, ಥಾರ್ನ್‌ಟನ್"

"ಹೌದು ಸಾರ್" ಎಂದು ಬೇಟೆಯ ಕಾವಲುಗಾರ ಹೇಳಿದ"

"ಆ ಬಡಪಾಯಿಗೆ ಮದುವೆ ಗಿದುವೆ ಆಗಿತ್ತೇನು, ಅವನ ಮನೆ ಸದಸ್ಯರೆಲ್ಲ ಇದ್ದಾರೇನು? ಅವರೆಲ್ಲ ಅವನ ಮೇಲೇ ಆಧರಿಸಿದ್ದರೆ, ಅವರಿಗೆ ಜೀವನೋಪಾಯಕ್ಕೆ ತೊಂದರೆಯಾಗದಂತೆ ಎಷ್ಟು ಹಣ ಬೇಕಾದರೂ ಕಳಿಸಿಕೊಡುತ್ತೇನೆ." ಎಂದ ಡೋರಿಯನ್.

"ಆತ ಯಾರೂಂತಲೂ ಗೊತ್ತಾಗಲಿಲ್ಲ ಸಾರ್. ಅದಕ್ಕಾಗಿಯೇ ನಿಮ್ಮ ಬಳಿಗೆ ಬರುವ ಸಾಹಸ ಮಾಡಿದೆ."

"ಯಾರೂಂತ ಗೊತ್ತಿಲ್ಲವೇ" ಬೇಸರದಿಂದ ಪ್ರಶ್ನಿಸಿದ ಡೋರಿಯನ್. ಗೊತ್ತಿಲ್ಲವೆಂದರೇನು? ನಿನಗೆ ತಿಳಿದವರಲ್ಲಿ ಒಬ್ಬನಿರಬೇಕೆಂದುಕೊಂಡೆ"

"ಇಲ್ಲ ಸಾರ್. ಆದರೆ ನೋಡಿದಾಗ ಅವನು ನಾವಿಕನಂತೆ ಕಾಣುತ್ತಾನೆ"

ಅವನ ಮಾತು ಕೇಳಿದ್ದೇ ಕೈಲಿಹಿಡಿದಿದ್ದ ಪೆನ್ನು ಕೆಳಗೆ ಬಿತ್ತು. ಇದ್ದಕ್ಕಿದ್ದಂತೆ ಎದೆಬಡಿತ ನಿಂತ ಹಾಗಾಯಿತು.

"ನಾವಿಕ... ನಾವಿಕನೆಂದೇ ಅಲ್ಲವೇ ನೀನು ಹೇಳಿದ್ದು?"

"ಹೌದು ಸಾರ್. ಅವನು ನಾವಿಕನೇ ಅಂತ ಖಾತ್ರಿಯಾಗಿ ಹೇಳಬಲ್ಲೆ. ಅಲ್ಲದೆ ಅವನ ಕೈಗಳ ಮೇಲೆಲ್ಲಾ ಹಚ್ಚೆಯಿತ್ತು."

" ಆ ಹಚ್ಚೆ ಯಾವ ಥರ ಇತ್ತು. ಹೆಸರು ಗಿಸರು ಏನಾದರೂ ಕಾಣಿಸಿತಾ?"

ಡೋರಿಯನ್ ಇನ್ನೂ ಹತ್ತಿರಕ್ಕೆ ಬಂದು ಅವನ ಮುಖದಲ್ಲಿ ಕಣ್ಣು ನೆಟ್ಟು "ಮತ್ತೇನೂ ಇರಲಿಲ್ಲ"?

"ಸ್ವಲ್ಪ ಹಣವಿತ್ತು. ಆದರೆ ಜಾಸ್ತಿಯೇನೂ ಇರಲಿಲ್ಲ. ಯಾವುದೇ ಹೆಸರೂ ಇರಲಿಲ್ಲ. ನೋಡಲು ಒಳ್ಳೆಯವನಂತೆ ಕಾಣಿಸಿದ. ಆದರೆ ಸ್ವಲ್ಪ ಒರಟನಿರಬಹುದು ಎನಿಸಿತು. ಧಿಗ್ಗನೆ ಎದ್ದು ನಿಂತ ಡೋರಿಯನ್. ಭಯಂಕರವಾದ ಭರವಸೆಯ ಹೊಳಪು ಮಿಂಚಿತು. "ದೇಹ ಎಲ್ಲಿದೆ?" ಅದನ್ನು ನಾನು ನೋಡಲೇಬೇಕು, ಈ ಕೂಡಲೇ!"

"ಆ ದೇಹ ಬಿದ್ದಿದ್ದ ಜಾಗ ಈಗ ಖಾಲಿ. ಹೆಣ ಹೆಚ್ಚು ಹೊತ್ತು ಇದ್ದರೆ ಕೆಟ್ಟದ್ದಾಗುತ್ತೆ ಅಂತ, ಯಾರೂ ಅದನ್ನು ಮನೆಗಳಲ್ಲಿ ಇರಿಸಿಕೊಳ್ಳುವುದಿಲ್ಲ."

"ಎಲ್ಲೀಂತ ಹೇಳಿದೆ, ಹೆಣ?"

"ಹೊಲದ ಮನೆಯಲ್ಲಿದೆ."

"ಹೊಲ ಮನೆ !... ತಕ್ಷಣ ಅಲ್ಲಿಗೆ ಹೋಗಿ ನನಗಾಗಿ ಕಾಯ್ತಿರು. ಯಾರಿಗಾದರೂ ಹೇಳಿ ಕುದುರೇನ ಕಳಿಸಿಕೊಡು.. ಇರು ನೀನು ಹೋಗೋದು ಬೇಡ. ನಾನೇ ಹೋಗಿ ಲಾಯದಿಂದ ಕುದುರೆಯನ್ನು ಆರಿಸಿಕೊಳ್ತೀನಿ. ಸ್ವಲ್ಪ ಸಮಯಾನಾದರೂ ಉಳಿಯುತ್ತೆ"

ಹದಿನೈದು ನಿಮಿಷಗಳಲ್ಲಿ ಡೋರಿಯನ್ ಗ್ರೇ ಕುದುರೆಯೇರಿ ನಾಗಾಲೋಟದಿಂದ ಓಡಿಸಿದ. ಇನ್ನೂ ವೇಗ ಅವನಿಗೆ ಸಾಕೆನಿಸಲಿಲ್ಲವಾಗಿ, ಮತ್ತೊಮ್ಮೆ ಕುದುರೆಗೆ ಚಾಟಿ ಬೀಸಿದ.

ಕಡೆಗೆ ಹೊಲಮನೆ ತಲುಪಿದ. ಹೊರಗೆ ಅಂಗಳದಲ್ಲಿ ಒಂದಿಬ್ಬರು ಓಡಾಡುತ್ತಿದ್ದರು. ಕುದುರೆಯಿಂದ ಇಳಿದು ಜೀನು ಕಡಿವಾಣವನ್ನು ಅವರಲ್ಲಿ ಒಬ್ಬನ ಕೈಗೆ ಇರಿಸಿದ. ದೂರದಲ್ಲಿ ಕಾಣುತ್ತಿದ್ದ ಲಾಯದಲ್ಲಿ ಮಸುಕು ದೀಪವೊಂದು ಉರಿಯುತ್ತಿತ್ತು. ಅಲ್ಲಿಯೇ ಪಾರ್ಥಿವ ಶರೀರವಿರಬೇಕೆಂದು ಊಹಿಸಿದ. ಅದರ ಬಳಿಗೆ ವೇಗದ ಹೆಜ್ಜೆಯಿಟ್ಟು ನಡೆದ. ಬಾಗಿಲ ಬಳಿ ತಲುಪಿದ ನಂತರ, ಬಾಗಿಲ ಚಿಲಕದ ಮೇಲೆ ಕೈಯಿರಿಸಿದ.

ಒಂದೆರಡು ಕ್ಷಣ ಸ್ತಬ್ದನಾಗಿ ನಿಂತ. ಬಾಗಿಲು ತೆರೆದು ಒಳ ಹೋದರೆ, ಎಂಥದ್ದು ಕಣ್ಣಿಗೆ ಬೀಳಬಹುದೊ ಎಂದು ಹಿಂಜರಿದ. ಅಲ್ಲಿನ ದೃಶ್ಯ ತನ್ನ ಬದುಕನ್ನು ಅಳಿಸಿ ಬಿಡಬಹುದು, ಇಲ್ಲವೆ ನಿರಾಳವಾಗಿ ಬದುಕಲು ಅನುವು ಮಾಡಲೂ ಬಹುದು. ಅಂತೂ ಬಾಗಿಲನ್ನು

ತಳ್ಳಿಕೊಂಡು ಒಳ ನಡೆದ. ಮೂಲೆಯೊಂದರಲ್ಲಿ ಹುಲ್ಲಿನ ಬಣವೆಯ ಮೇಲೆ, ಒರಟಾದ ಷರ್ಟು ಮತ್ತು ನೀಲಿ ಪ್ಯಾಂಟು ಧರಿಸಿದ್ದ ವ್ಯಕ್ತಿಯ ಹೆಣ ಬಿದ್ದುಕೊಂಡಿತ್ತು. ಚುಕ್ಕೆ ಚುಕ್ಕೆ ಕರವಸ್ತ್ರವೊಂದು ಹೆಣದ ಮುಖವನ್ನು ಮರೆಮಾಡಿತ್ತು. ಬಾಟಲಿಯಲ್ಲಿ ಒಂದು ಉರಿಯುತ್ತಿದ್ದ ಮೇಣದ ಬತ್ತಿಯನ್ನು ಇರಿಸಲಾಗಿತ್ತು. ಅಲ್ಲಿನ ಕೆಲಸಗಾರರನ್ನು ಕೂಗಿ ಕರೆದ.

"ಮುಖದ ಮೇಲಿನ ಕರವಸ್ತ್ರವನ್ನು ತೆಗೆಯಿರಿ" ಎಂದು ಆದೇಶಿಸಿದ. ಮುಖ ಸ್ಪಷ್ಟವಾಗಿ ಕಾಣಿಸಿತು. ಅವನ ತುಟಿಗಳಿಂದ ಹರ್ಷೋದ್ಗಾರ ಹೊಮ್ಮಿತು. ಆ ಶವ ಜೇಮ್ಸ್ ವೇನ್‌ನದೇ ಆಗಿತ್ತು. ಕೆಲ ನಿಮಿಷಗಳು ಆ ದೇಹವನ್ನೇ ನೋಡುತ್ತಿದ್ದು, ನಂತರ ಮನೆಗೆ ಹಿಂತಿರುಗಿ ಬಂದ. ಆನಂದಭಾಷ್ಪದ ಸುರಿಮಳೆ ಮುಂದುವರೆಯಿತು. ಇನ್ನು ತಾನು ಸುರಕ್ಷಿತ ಎನಿಸಿ ನಿರಾಳವಾಗಿ ಉಸಿರಾಡಿದ.

❖

# ಅಧ್ಯಾಯ - 19

"ಡೋರಿಯನ್, ಇನ್ನು ಮುಂದೆ ಒಳ್ಳೆಯವನಾಗಿ ಇರ್ತೀನಿ ಅಂತ ಹೇಳುವುದರಲ್ಲಿ ಅರ್ಥವಿಲ್ಲ" ಎಂದು ಲಾರ್ಡ್ ಹೆನ್ರಿ ರೋಸ್ ವಾಟರ್‌ನಲ್ಲಿ ಬೆರಳುಗಳನ್ನು ಅದ್ದುತ್ತಾ ಹೇಳಿದ. "ನೀನು ಪರ್‌ಫೆಕ್ಟ್ ಹುಡುಗನೇ ಆಗಿದ್ದೀ. ನಾನು ಕೇಳೋದು ಇಷ್ಟೇ? ನೀನೆಂದೂ ಬದಲಾಗಬೇಡ"

ಡೋರಿಯನ್ ತಲೆಯಾಡಿಸುತ್ತಾ" ಹೆನ್ರಿ ಹೆನ್ರಿ, ನನ್ನ ಜೀವನದಲ್ಲಿ ನಾನೆಂದೂ ಒಳ್ಳೆಯವನಾಗಿರಲಿಲ್ಲ. ಎಷ್ಟೋ ಕೆಟ್ಟ ಕೆಲಸಗಳನ್ನು ಮಾಡಿದ್ದೀನಿ. ಆದರೆ ಇನ್ನು ಮುಂದೆ ಎಂದೆಂದಿಗೂ ಕೆಟ್ಟ ಕೆಲಸ ಮಾಡುವುದಿಲ್ಲ. ನಿಜವಾದ ಒಳ್ಳೆ ಕೆಲಸ ಮಾಡಿದ್ದೆಂದರೆ, ನೆನ್ನೆ ಮಾತ್ರ."

"ನೆನ್ನೆ ನೀನು ಎಲ್ಲಿದ್ದೆ?"

"ಯಾವುದೋ ಒಂದು ಹಳ್ಳಿಯಲ್ಲಿ ಒಂದು ಪುಟ್ಟ ಹೊಟೇಲಿನಲ್ಲಿ ನಾನೊಬ್ಬನೇ ಇದ್ದೆ.

"ಅಯ್ಯೋ ಹುಡುಗ ಯಾರು ಬೇಕಾದರೂ ಇಂಥ ಹಳ್ಳೀಲಿ ಒಳ್ಳೆಯವರಾಗಿಯೇ ಇರುತ್ತಾರೆ. ಯಾಕೆಂದರೆ ಅಲ್ಲಿ ಯಾವುದೇ ಬಗೆಯ ಸೆಳೆತಗಳು ಇರುವುದಿಲ್ಲ. ಅದೇ ಕಾರಣಕ್ಕೆ ಅಲ್ವೆ ಅಲ್ಲಿನ ಜನ ಬಹಳ ಹಿಂದುಳಿದವರಾಗಿ ಇರ್ತಾರೆ. ಪಟ್ಟಣದಿಂದ ದೂರವಿರುವುದರಿಂದಲೇ ಅವರಿಗೆ ನಗರ ನಾಗರೀಕ ನಡವಳಿಕೆಗಳು ತಿಳಿದಿರುವುದಿಲ್ಲ. ನಾಗರೀಕರಾಗುವುದಕ್ಕೆ ಎರಡೇ ಎರಡು ದಾರಿಗಳಿವೆ. ಒಂದು ಸುಸಂಕೃತರಾಗಿರೋದು ಇಲ್ಲವೆ ಭ್ರಷ್ಟರಾಗಿರೋದು. ಗ್ರಾಮೀಣ ಜನರಿಗೆ ಇಂಥ ಅವಕಾಶಗಳು ಇರುವುದಿಲ್ಲವಾಗಿ,

ಅವರು ಇದ್ದಂತೇ ಇದ್ದು ಬಿಡುತ್ತಾರೆ. ಬೆಳೆಯುವುದೇ ಇಲ್ಲ, ಸ್ಥಗಿತ ಸ್ಥಿತಿಯೇ ಅವರ ಬದುಕಿನ ರೀತಿಯಾಗಿರುತ್ತದೆ."

"ಸಂಸ್ಕೃತಿ ಮತ್ತು ಭ್ರಷ್ಟತೆ! ಇವೆರಡರ ವಿಚಾರದಲ್ಲಿ ಸ್ವಲ್ಪ ಸ್ವಲ್ಪವೇ ಗೊತ್ತಿದೆ. ಈಗ ನನಗೆ ಅನಿಸುತ್ತೆ, ಇವೆರಡೂ ಒಟ್ಟಿಗೆ ಇದ್ದರೆ! ಎಂಥ ಭಯಂಕರ ಪರಿಣಾಮವಾಗಬಹುದು!"

"ನನ್ನ ಮುಂದೆ ಒಂದು ಹೊಸ ಆದರ್ಶದ ಪರಿಕಲ್ಪನೆ ಇದೆ. ನಾನು ಬದಲಾಯಿಸುತ್ತೇನೆ. ಬದಲಾಯಿಸಿದ್ದೀನಿ ಅಂತ ಕೂಡಾ ಅನಿಸುತ್ತೆ"

"ನೀನು ಮಾಡಿದ ಒಳ್ಳೆ ಕೆಲಸಗಳೇನು ಅಂತ ಇನ್ನೂ ಹೇಳಿಲ್ಲ. ಒಂದಕ್ಕಿಂತ ಹೆಚ್ಚು ಮಾಡಿದ್ದೀನಿ ಅನ್ನುವುದನ್ನು ಹೇಳಬೇಕೆಂದಿದ್ದೀಯ?

"ಹೇಳ್ತೀನಿ. ನೀನಲ್ಲದೆ ಬೇರೆ ಯಾರಿಗೆ ತಾನೇ ಹೇಳೋಕೆ ಸಾಧ್ಯ. ನಾನು ಒಬ್ಬಳನ್ನು ಬದುಕಿಸಿದೆ. ಕೇಳೋಕೆ ವಿಚಿತ್ರ ಅನಿಸಬಹುದು. ನಾನು ಹೇಳೋದು ನಿನಗೆ ಅರ್ಥ ಆಯ್ತು ಅಂದ್ಕೊಳ್ತೇನೆ. ಆ ಹುಡುಗಿ ನೋಡೋಕೆ ತುಂಬಾ ಚೆನ್ನಾಗಿದ್ದಳು. ಸಿಬಿಲ್ ವೇನ್‌ಳಷ್ಟೇ ಸುಂದರಿ. ವಾಸ್ತವವಾಗಿ ಇದೇ ನನ್ನ ಆಕರ್ಷಣೆಗೆ ಕಾರಣವಾಯಿತು. ಮುಗ್ಧ ಗ್ರಾಮೀಣ ಹುಡುಗಿ. ಮೇ ತಿಂಗಳು ಪೂರ್ತಿ ಒಟ್ಟೊಟ್ಟಿಗೆ ಓಡಾಡಿದೆವು. ಖುಷಿಪಟ್ಟೆವು. ಈ ದಿನ ಬೆಳಿಗ್ಗೆ ನಾವಿಬ್ಬರೂ ಒಟ್ಟಿಗೆ ಓಡಿಹೋಗಬೇಕೆಂದಿದ್ದೆವು. ಆದರೆ ನಾನು ಅವಳನ್ನು ಮೂಸಿ ನೋಡದ ಹೂವಿನಂತೆ ಪವಿತ್ರ ಸ್ಥಿತಿಯಲ್ಲಿ ಬಿಟ್ಟು ಹೊರಟುಹೋದೆ. ನೋಡಿದ ಕ್ಷಣದಲ್ಲಿ ಹೇಗಿದ್ದಳೋ ಅದೇ ಸ್ಥಿತಿಯಲ್ಲಿ ಅವಳನ್ನು ಉಳಿಸಿಹೋದೆ."

"ನನಗೆ ಅನಿಸುತ್ತೆ, ನಿನ್ನ ಹೊಸ ಭಾವಾನುಭವ ನಿನಗೆ ಹೆಚ್ಚಿನ ಸಂತೋಷವನ್ನು ಕೊಟ್ಟಿರಬೇಕು – ಎಂದು ಲಾರ್ಡ್ ಹೆನ್ರಿ ಮಧ್ಯೆ ಪ್ರವೇಶಿಸಿ ಹೇಳಿದ. ಆದರೆ ನಿನ್ನ ಈ ಕೆಲಸದ ಇನ್ನೊಂದು ಮುಖ ಏನೆಂದು ಹೇಳಬಲ್ಲೆ. ಅವಳಿಗೆ ಉಪದೇಶ ಮಾಡಿ, ಅವಳನ್ನು ನಿರಾಶೆಗೊಳಿಸಿದೆ, ಅದೇ ನಿನ್ನ ಸುಧಾರಣೆಯ ಆರಂಭದ ಹೆಜ್ಜೆ."

"ಹ್ಯಾರಿ ನೀನೊಬ್ಬ ಧೂರ್ತನೆ ಸರಿ! ಭಯಾನಕ ವಿಷಯಗಳನ್ನೆಲ್ಲ ಹೇಳ್ತಿ. ಹೆಟ್ಟಿಯನ್ನು ನಿರಾಶೆಗೊಳಿಸಲಿಲ್ಲ. ಆದರೆ ಅವಳು ಅತ್ತದ್ದಂತೂ ಉಂಟು , ಇದರಿಂದ ಅವಳಿಗೇನೂ ಕೆಟ್ಟ ಹೆಸರು ಬರೋದಿಲ್ಲ. ಅವಳು ಸೂರ್ಯಕಾಂತಿ, ಚೆಂಡು ಮಲ್ಲಿಗೆ ಹೂಗಳ ಥರ ಬದುಕುತ್ತಾಳೆ."

"ನಿನಗನಿಸುತ್ತಾ, ಅವಳು ತನ್ನದೇ ಅಂತಸ್ತಿನ ಹುಡುಗನ ಜೊತೆ ಸುಖವಾಗಿ ಇರುತ್ತಾಳೆ ಅಂತ? ಎಂದೋ ಒಂದು ದಿನ ಯಾವನೋ ಒಬ್ಬ ಬಡರೈತನನ್ನೋ ಇಲ್ಲವೆ ಒರಟು ಗಾಡಿ ಹೊಡೆಯುವನನ್ನೋ ಮದುವೆಯಾಗಿ ಸಂತೃಪ್ತಿಯಿಂದ ಇರುತ್ತಾಳೆ ಅಂತ ನಿನಗನಿಸುತ್ತೆಯೇನು? ನಿನ್ನ ಪ್ರೀತಿಯ ಸವಿ ಕಂಡವಳು ಗಂಡನ ಜೊತೆ ಹೊಂದಿಕೊಂಡು ಬಾಳುವುದಿಲ್ಲ. ನಿನ್ನ ನೈತಿಕ ನಿಲುವಿನಿಂದ ನನಗೆ ನೀನು ಸಂಪೂರ್ಣವಾಗಿ ವಿರಕ್ತನಾಗಿದ್ದೀ ಅಂತ ತೋರುವುದಿಲ್ಲ. ನಿನಗೇನು ಗೊತ್ತು ಅವಳು ಇನ್ನೂ ಒಫೀಲಿಯಾ ಥರ ನಿರಾಶೆಯಿಂದ ಯಾವುದಾದರೂ ಕೊಳದಲ್ಲಿ ತೇಲಾಡುತ್ತಿರಬಹುದೆಂದು.

"ಹ್ಯಾರಿ ನಿನ್ನ ಮಾತುಗಳನ್ನು ಕೇಳೋಕೆ ಆಗೋಲ್ಲ. ಪ್ರತಿಯೊಂದಕ್ಕೂ ವ್ಯಂಗ್ಯದ ಮಾತಾಡುತ್ತೀ ! ಹೆದರಿಸುತ್ತೀ ! ನಾನು ನಿನಗೆ ನನ್ನ ಕತೆ ಹೇಳಲೇ ಬಾರದಿತ್ತು ಅನಿಸುತ್ತೆ, ನೀನು ಏನೇ ಹೇಳಿದರೂ ನಾನು ಕೇರ್ ಮಾಡೊಲ್ಲ. ನಾನು ಮಾಡಿದ್ದು ನನಗೆ ಸರಿ ಅಂತ ನನಗೆ ನಂಬಿಕೆ ಇದೆ. ಬಡಪಾಯಿ ಹೆಟ್ಟಿ! ನಾನು ಕುದುರೆ ಸವಾರಿ ಮಾಡುತ್ತಿದ್ದಾಗ ಕಿಟಕಿಯಿಂದ ಅವಳ ಮುಖ ಕಾಣಿಸಿತು. ಮಲ್ಲಿಗೆಯ ಸಿಂಪಡಿಕೆಯಾದಂತೆನಿಸಿತು. ಇನ್ನು ಈ ವಿಷಯದ ಬಗ್ಗೆ ಮಾತಾಡೋದು ಬೇಡ. ನಾನು ಮಾಡಿದ ಒಳ್ಳೆತನದ ಪ್ರಥಮ ಪ್ರಯತ್ನವನ್ನು ಕೆಡಿಸಿ ಮತ್ತೆ ಪಾಪದ ಕಡೆ ವಾಲುವಂತೆ ಮಾಡಬೇಡ. ನಾನು ಸುಧಾರಿಸಬೇಕು; ನಿಜವಾಗಿ ಸುಧಾರಿಸ ಬೇಕೆನ್ನುವುದು ನನ್ನ ನಿರ್ಧಾರವಾಗಿದೆ. ಇರಲಿ, ಈಗ ನಿನ್ನ ವಿಷಯ ಹೇಳು: ಪಟ್ಟಣದಲ್ಲಿ ಏನೇನಾಗ್ತಿದೆ? ನಾನೆಷ್ಟೊ ದಿನಗಳಿಂದ ಕ್ಲಬ್ ಕಡೆ ಹೋಗಿಯೇ ಇಲ್ಲ"

"ಬಡಪಾಯಿ ಬೇಸಿಲ್ ಕಾಣದೆ ಹೋದುದರ ಬಗ್ಗೆ ಇನ್ನೂ ಚರ್ಚೆ, ವದಂತಿಗಳಂತು ಮುಂದುವರಿದಿದೆ!"

"ನಾನು ಇಷ್ಟು ಹೊತ್ತಿಗೆ, ಆ ಘಟನೆ ಬಗ್ಗೆ ಜನ ಮಾತಾಡೋದು ನಿಲ್ಲಿಸಿ, ಮರೆತೂ ಇರ್ತಾರೆ ಅಂತ ಅಂದುಕೊಂಡಿದ್ದೆ" ಎಂದು ಗ್ಲಾಸಿಗೆ ಒಂದಿಷ್ಟು ವೈನನ್ನು ಸುರಿದುಕೊಳ್ಳುತ್ತಾ ಹೇಳಿದ,

"ಗೆಳೆಯಾ ಜನ ಈ ವಿಷಯವನ್ನು ಈಗೊಂದು ಆರು ವಾರಗಳಿಂದ ಮಾತಾಡುತ್ತಿದ್ದಾರೆ. ಅದಕ್ಕೂ ಮುಂಚೆ, ನನ್ನ ಡೈವೋರ್ಸ್ ಮತ್ತು ಕ್ಯಾಂಪ್ ಬೆಲ್ ಆತ್ಮಹತ್ಯೆ ವಿಷಯಗಳು ಸಾಕಷ್ಟು ಚರ್ಚೆಯಾಗುತ್ತಿದ್ದವು. ಈಗ ನಿಗೂಢವಾಗಿ ಕಣ್ಮರೆಯಾದ ಚಿತ್ರಕಲಾವಿದನ ಬಗ್ಗೆ ಮಾತು ಹೊರಳಿದೆ. ಸ್ಕಾಟ್‌ಲ್ಯಾಂಡ್ ಯಾರ್ಡ್ ನವರು ಬೇಸಿಲ್‌ನನ್ನು ಮಧ್ಯರಾತ್ರಿಯ ಟ್ರೈನ್‌ನಲ್ಲಿ ನೋಡಿದ್ದಕ್ಕಾಗಿ ಹೇಳುತ್ತಿದ್ದರೆ ಪೊಲೀಸರು ಬೇಸಿಲ್ ಪ್ಯಾರಿಸ್ ತಲುಪಲೇ ಇಲ್ಲ ಎಂದು ಹೇಳುತ್ತಿದ್ದಾರೆ. ಸರಿ ಇನ್ಯಾರೋ ಅವನನ್ನು ಸ್ಯಾನ್ ಫ್ರಾನ್ಸಿಸ್ಕೋನಲ್ಲಿ ನೋಡಿದ್ದಾಗಿ ಹೇಳಬಹುದು. ತಮಾಶೆಯಾಗಿದೆಯಲ್ಲ !"

"ಸರಿ ನೀನು ಬೇಸಿಲ್‌ಗೆ ಏನಾಗಿರಬಹುದೆಂದು ಊಹಿಸುತ್ತೀ?" ಎಂದು ಡೋರಿಯನ್ ಮದ್ಯದ ಗ್ಲಾಸನ್ನು ಹಿಡಿದು ಹೇಳಿದ. ಅವನಿಗೆ ತಾನು ಇಂಥ ಭಯಂಕರ ವಿಷಯವನ್ನು ಇಷ್ಟೊಂದು ಸಮಾಧಾನವಾಗಿ ಯೋಚಿಸಲು ಸಾಧ್ಯವಾದದ್ದು ಹೇಗೆಂದು ಅಚ್ಚರಿಪಡುತ್ತಿದ್ದ.

"ನನಗೊಂದಿಷ್ಟೂ ಹೊಳೀತಿಲ್ಲ. ಬೇಸಿಲ್ ತಲೆಮರೆಸಿಕೊಂಡಿದ್ದರೆ, ಅದರ ಬಗ್ಗೆ ತಲೆ ಕೆಡಿಸಿಕೊಳ್ಳೋದಿಲ್ಲ. ಒಂದು ವೇಳೆ ಸತ್ತು ಹೋಗಿದ್ದರೆ, ನಾನು ಯೋಚನೆ ಮಾಡೋಕೆ ಹೋಗೋದೆ ಇಲ್ಲ. ಯಾಕೆಂದರೆ ಸಾವು ಎಂಬುದು ನನ್ನಲ್ಲಿ ಭಯ ಹುಟ್ಟಿಸುತ್ತೆ. ಅದರ ಹೆಸರು ಕೇಳೋಕೂ ಅಸಹ್ಯವಾಗುತ್ತೆ"

"ಯಾಕೆ?" ಡೋರಿಯನ್ ಕೇಳಿದ, "ಯಾಕೆಂದರೆ, ಯಾರು ಯಾವುದರಿಂದ ಬೇಕಾದರೂ ತಪ್ಪಿಸಿಕೊಳ್ಳಬಹುದು ಆದರೆ ಸಾವಿನಿಂದ ಸಾಧ್ಯವಿಲ್ಲ"

ಡೋರಿಯನ್ ಏನನ್ನೂ ಹೇಳಲಿಲ್ಲ. ಟೇಬಲ್ ಬಿಟ್ಟು ಎದ್ದು ಪಕ್ಕದ ಕೋಣೆಗೆ ಹೋದ. ಪಿಯಾನೋ ಮುಂದೆ ಕುಳಿತು ನುಡಿಸತೊಡಗಿದ. ಕಾಫಿ ಅಲ್ಲಿಗೇ ಬಂತು. ಲಾರ್ಡ್ ಹೆನ್ರಿ ಮತ್ತು ಡೋರಿಯನ್ ಇಬ್ಬರೂ ಕಾಫಿ ಹೀರತೊಡಗಿದರು. ಮುಗಿಸಿದ ನಂತರ ಲಾರ್ಡ್ ಹೆನ್ರಿಯ ಕಡೆ ಹೋಡುತ್ತಾ

"ಹ್ಯಾರಿ ನಿನಗೆಂದಾದರೂ ಬೇಸಿಲ್ ಕೊಲೆಯಾಗಿರಬಹುದೆಂದು ಎನಿಸಿದೆಯಾ?" ಹೆನ್ರಿ ಆಕಳಿಸುತ್ತಾ "ಬೇಸಿಲ್ ಬಹಳ ಪ್ರಸಿದ್ಧ ಚಿತ್ರ ಕಲಾವಿದನಾಗಿದ್ದ. ಸರಳ ವ್ಯಕ್ತಿ ಯಾಗಿದ್ದ. ಅಂಥವನನ್ನು ಕೊಲೆ ಮಾಡಬೇಕಾದ ಅಗತ್ಯವೇನಿತ್ತು. ಅವನಿಗೆ, ಎಣಿಕೆಗೂ ಸಾಧ್ಯವಿಲ್ಲದಂತೆ ಯಾವೊಬ್ಬ ಶತ್ರುವೂ ಇರಲಿಲ್ಲ. ಪೈಂಟಿಂಗ್ ವಿಚಾರದಲ್ಲಿ ಅವನದು ದೈತ್ಯ ಪ್ರತಿಭೆ. ಆದರೆ ಯಾರಿಗೂ ಅವನ ಬಗ್ಗೆ ಆಕರ್ಷಣೆ ಇರಲಿಲ್ಲ. ಅವನು ನನಗೆ ಹಿಡಿಸಿದ್ದು ಒಂದೇ ಒಂದು ಸಂದರ್ಭದಲ್ಲಿ. ಅದೂ ಎಷ್ಟೋ ವರ್ಷಗಳ ಹಿಂದೆ ! ನಿನ್ನನ್ನು ಕಂಡರೆ ಅತಿಯಾದ ಪ್ರೀತಿ ಎಂದು ಹೇಳಿದಾಗ ಮತ್ತು ತನ್ನ ಕಲೆಯ ಹಿಂದಿನ ಮಹತ್ವದ ಪ್ರೇರಣೆಯೆಂದರೆ ನೀನೇನೆಂದು ಹೇಳಿದಾಗ."

"ಬೇಸಿಲ್ ಎಂದರೆ ನನಗೂ ಪ್ರಾಣ" ಎಂದು ದುಃಖದ ದನಿಯಲ್ಲಿ ಡೋರಿಯನ್ ಹೇಳಿದ.

"ಜನ ಅವನು ಕೊಲೆಯಾಗಿದ್ದಾನೆ ಎಂದು ಹೇಳಿಕೊಳ್ಳಲಿಲ್ಲವೇ?"

"ಎಲ್ಲೋ ಕೆಲವು ಪತ್ರಿಕೆಗಳು ಹಾಗಂತ ವರದಿಮಾಡಿವೆ. ಪ್ಯಾರಿಸಿನಲ್ಲಿ ಬಹಳ ಭಯಂಕರ ಜನ ಇದ್ದಾರೆ. ಆದರೆ ಬೇಸಿಲ್ ಅಂಥವರ ಕಡೆ ಹೋಗುವಂತಹ ಮನುಷ್ಯನೇ ಅಲ್ಲ. ಅವನಿಗೆ ಯಾವುದೇ ಕುತೂಹಲಗಳೂ ಇರಲಿಲ್ಲ. ಇದೇ ಅವನಲ್ಲಿನ ದೊಡ್ಡ ದೌರ್ಬಲ್ಯ"

"ಹ್ಯಾರಿ ಒಂದು ವೇಳೆ ಬೇಸಿಲ್‌ನನ್ನು ನಾನೇ ಕೊಲೆ ಮಾಡಿರಬಹುದು ಎನಿಸುತ್ತಿಲ್ಲವೆ ಎಂದು ತಗ್ಗಿದ ದನಿಯಲ್ಲಿ ಹೇಳಿ ಅವನ ಕಡೆ ಒಂದೇ ಸಮನೆ ನೋಡುತ್ತಿದ್ದ"

"ಹಾಗೇನಾದರೂ ಅನಿಸಿದ್ದರೆ, ನಿನಗೊಪ್ಪದ ಒಂದು ಪಾತ್ರವನ್ನು ಅಭಿನಯಿಸುತ್ತಿದ್ದೀ ಎಂದುಕೊಳ್ಳುತ್ತಿದ್ದೆ. ಡೋರಿಯನ್ ಆ ಪ್ರವೃತ್ತಿ ನಿನ್ನಲ್ಲಿ ಇಲ್ಲ. ಎಂದಿಗೂ ನಿನ್ನಿಂದ ಅಂತಹ ಕೆಲಸ ಸಾಧ್ಯವಿಲ್ಲ. ಹೀಗೆ ಹೇಳಿ ನಿನ್ನ ಮನಸ್ಸಿಗೆ ಬೇಜಾರಾಗಿದ್ದರೆ ಕ್ಷಮೆಯಿರಲಿ. ಇಂಥ ಭೀಕರ ಅಪರಾಧಗಳು ತೀರಾ ಕೀಳುವರ್ಗದ ಜನರಿಗೆ ಮಾತ್ರವೇ ಸಾಧ್ಯ. ಅವರು ಹಾಗೆ ಮಾಡುವುದರಲ್ಲಿ ತಪ್ಪಿಲ್ಲ. ನಮಗೆ ಕಲೆ ಹೇಗೋ ಅವರಿಗೆ ಕೊಲೆ ಹಾಗೆ. ಇಂಥ ಕೃತ್ಯಗಳಿಂದ ಅವರಿಗೆ ಏನೋ ರೋಮಾಂಚನ."

"ರೋಮಾಂಚನದ ಅನುಭವಕ್ಕಾಗಿ ಇಂಥ ಹೇಯ ಕೃತ್ಯಗಳೇ!? ಇದರ ಅರ್ಥ ಒಂದು ಸಲ ಇಂಥಾದ್ದನ್ನು ಮಾಡಿದವನು ಮುಂದೆಯೂ ಮಾಡುತ್ತಾನೆ ಎಂಬರ್ಥವೇ? ನಿಜ ಹೇಳು."

"ಏನೇ ಆಗಲಿ ಒಂದು ಸಲ ಮಾಡಿದ್ದನ್ನು ಮತ್ತೆ ಮತ್ತೆ ಮಾಡುವುದರಲ್ಲಿ ಸಂತೋಷ ಅನುಭವಿಸುತ್ತಾನೆ" ಎಂದು ಹೇಳಿ ಹೆನ್ರಿ ನಕ್ಕ.

"ಬದುಕಿನ ಅನೇಕ ನಿಗೂಢಗಳಲ್ಲಿ ಇದು ಬಹಳ ಮಹತ್ವದ್ದು. ಆದರೆ ಒಂದಂತು ಸತ್ಯ. ಕೊಲೆ ಅನ್ನುವುದು ಎಂದೆಂದಿಗೂ ಒಂದು ಅಪರಾಧವೇ. ಬೇಸಿಲ್ ವಿಷಯ ಇನ್ನು ಸಾಕು ಮಾಡು. ಒಂದು ವೇಳೆ ನೀನು ಹೇಳುತ್ತಿರುವಂತೆ ಅವನು ಈ ಬಗೆಯ ಅಂತ್ಯವನ್ನು ಕಂಡಿದ್ದೇ ಆದರೆ?... ಇಲ್ಲ ಇಲ್ಲ ನನಗೆ ನಂಬಿಕೆಯಾಗುವುದಿಲ್ಲ. ಅವನು ಪ್ಯಾರಿಸಿನಲ್ಲಿ ಯಾವುದೋ ಬಸ್ಸಿಂದ ಬಿದ್ದು ಸತ್ತು ಹೋಗಿ ಸಿಯೆನ್ ನದಿಯ ನೀರಿನಲ್ಲಿ ಕೊಚ್ಚಿ ಹೋಗಿರಬಹುದು. ಬಸ್ ಡ್ರೈವರ್ ಅದನ್ನು ಗುಟ್ಟಾಗಿ ಮುಚ್ಚಿ ಹಾಕಿರಲೂ ಬಹುದು. ಈ ಒಂದು ಹತ್ತು ವರ್ಷಗಳಿಂದ ಯಾವುದೇ ಒಳ್ಳೆಯ ಕಲಾಕೃತಿ ಅವನಿಂದ ಸಾಧ್ಯವಾಗಿಲ್ಲ.

ಡೋರಿಯನ್ ನಿರಾಳವಾಗಿ ಉಸಿರಾಡಿದ. ಹೆನ್ರಿ ಕೋಣೆಯಲ್ಲಿ ಅಡ್ಡಾಡುತ್ತಾ ಮುದ್ದಾದ ಗಿಳಿಯೊಂದರ ಕತ್ತನ್ನು ನೇವರಿಸತೊಡಗಿದ.

"ಹೌದು ಅವನ ಪೈಂಟಿಂಗ್‌ನ ಸಾಮರ್ಥ್ಯವೇ ಕಳೆದುಹೋಗಿತ್ತು. ಅದರಲ್ಲಿ ಯಾವುದೇ ಜೀವಂತಿಕೆ ಇರಲಿಲ್ಲ. ಆದರ್ಶವೂ ಇರಲಿಲ್ಲ. ನಿಮ್ಮಿಬ್ಬರ ಸ್ನೇಹದಲ್ಲಿ ಬಿರುಕು ಬಂದ ಕ್ಷಣವೇ ಅವನು ಮಹಾನ್ ಕಲಾವಿದ ಎನ್ನುವುದು ಕಳೆದುಹೋಯಿತು. ಯಾಕೆ ನೀವಿಬ್ಬರೂ ದೂರವಾದಿರಿ ಅವನಿಂದ ನಿನಗೆ ಬೇಸರವಾಯಿತೇ? ಅಂದ ಹಾಗೆ ಅವನು ಮಾಡಿದ ನಿನ್ನ ಭಾವಚಿತ್ರ ಏನಾಯಿತು? ಅವನು ಅದನ್ನು ಮುಗಿಸಿದ ಮೇಲೆ ಮತ್ತೊಮ್ಮೆ ನೋಡೋಕೆ ಸಾಧ್ಯವೇ ಆಗಲಿಲ್ಲ. ಹಾಂ! ನೆನಪಾಯಿತು. ನೀನೇನೋ ಅದನ್ನು ಸೆಲ್ಬಿಗೆ ಕಳಿಸಿಬಿಟ್ಟೆ ಅಂತ ಹೇಳಿದ್ದೆ. ದಾರಿಯಲ್ಲಿ ಎಲ್ಲಿಯೋ ಕಳೆದುಹೋಯಿತೋ ಇಲ್ಲ ಎಲ್ಲಿಟ್ಟಿರೋದು ಮರೆತುಬಿಟ್ಟೆಯಾ? ಮತ್ತೆ ಅದು ಸಿಗಲೇ ಇಲ್ಲವೇನು? ಎಂಥಾ ದುರದೃಷ್ಟ! ಇದೊಂದು ಬೇಸಿಲ್‌ನ ಬದುಕಿನಲ್ಲಿ ಅತ್ಯಂತ ಮಹಾನ್ ಕಲಾಕೃತಿ ಎನಿಸಿಕೊಂಡಿತ್ತು ನಿಜವಾಗಲೂ ಅದನ್ನು ನಾನೇ ಕೊಂಡುಕೊಳ್ಳಬೇಕೆಂದಿದ್ದೆ. ಈಗ ನನಗೆ ಸಿಕ್ಕಿದರೆ! ಬೇಸಿಲ್‌ನ ಕಾಲದ ಪ್ರಾತಿನಿಧಿಕ ಕಲಾಕೃತಿಯಾಗಿತ್ತು. ನೀನು ಅದಕ್ಕಾಗಿ ಹುಡುಕಾಡಿದೆಯಾ? ನೀನು ಅದನ್ನು ಪತ್ತೆ ಮಾಡಿಸಬೇಕಿತ್ತು.

"ಮರೆತುಹೋಗಿದ್ದೀನಿ, ಪ್ರಯತ್ನ ಮಾಡಿದೆ ಅಂತ ಅನಿಸುತ್ತೆ. ಆದರೆ ಅದು ನನಗೆ ಮಾತ್ರ ಇಷ್ಟ ಆಗಿರಲಿಲ್ಲ. ಈಗ ನಾನು ಆ ಭಾವಚಿತ್ರಕ್ಕಾಗಿ ರೂಪದರ್ಶಿಯಾಗಿ ಯಾಕೆ ಹೋದೆ ಎನಿಸುತ್ತೆ. ಅದನ್ನು ನೆನಪಿಸಿಕೊಳ್ಳೋಕೂ ನನಗೆ ಇಷ್ಟವಿಲ್ಲ. ಅದನ್ನು ಕಂಡರೆ ಅಸಹ್ಯ. ನೀನ್ಯಾಕೆ ಆ ವಿಷಯಾನ ನೆನಪುಮಾಡಿದೆ.

"ಮನುಷ್ಯ ಒಂದು ವೇಳೆ ಬದುಕನ್ನು ಕಲಾತ್ಮಕ ದೃಷ್ಟಿಯಿಂದ ಭಾವಿಸಿದರೆ, ಅವನ ಮಿದುಳು ಹೃದಯವಾಗುತ್ತೆ."

ಡೋರಿಯನ್ ಗ್ರೇ ತಲೆಯಾಡಿಸುತ್ತಾ ಪಿಯಾನೋನಿಂದ ಮೃದು ಮಧುರ ಸ್ವರಗಳನ್ನು ಹೊಮ್ಮಿಸಿದ.

ಹೆನ್ರಿ ಬೆನ್ನಿಗೆ ಒರಗಿಕೊಂಡು, ಅರೆಮುಚ್ಚಿದ ಕಣ್ಣುಗಳಿಂದ ಅವನತ್ತ ನೋಡ ತೊಡಗಿದ. ಸಂಗೀತದಲ್ಲಿ ಅಪಸ್ವರಗಳು ಹೊಮ್ಮಿದವು.

"ಡೋರಿಯನ್ ನೆನ್ನೆ ನಾನು ಒಬ್ಬ ಪ್ರವಾದಿಯನ್ನು ನೋಡಿದೆ. ಅವನಿಗೆ ಕಲೆಯಲ್ಲಿ ಆತ್ಮವಿದೆ ಎಂದೂ ಅವನಲ್ಲಿ ಆತ್ಮವಿಲ್ಲವೆಂದೂ ಹೇಳಲು ಪ್ರಯತ್ನಿಸಿದೆ. ಆದರೆ ಅವನಿಗೆ ಏನೂ ಅರ್ಥವಾಗಲಿಲ್ಲ.

"ಬೇಡ ! ಬೇಡ ! ಹ್ಯಾರಿ. ಆತ್ಮವೊಂದು ಭಯಂಕರ ವಾಸ್ತವ. ಅದನ್ನು ಮಾರಲೂಬಹುದು ಕೊಳ್ಳಲೂಬಹುದು. ವಿನಿಮಯ ಮಾಡಿಕೊಳ್ಳಲೂಬಹುದು, ಅದನ್ನು ವಿಷವಾಗಿಸಬಹುದು ಇಲ್ಲವೆ ಪರಿಪೂರ್ಣಗೊಳಿಸಬಹುದು. ನಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಆತ್ಮವಿದೆ. ನನಗೆ ಗೊತ್ತು."

"ನಿನಗೆ ಅದು ನಿಜ ಅಂತ ಅನಿಸಿದೆಯೇ ಡೋರಿಯನ್?"

"ಖಂಡಿತ ನಿಜವೆಂದು ನಂಬುತ್ತೇನೆ."

"ಹಾಗಾದರೆ ಅದು ನಿನ್ನ ಭ್ರಮೆಯಿರಬಹುದು" ಯಾರು ಇಷ್ಟೊಂದು ಖಚಿತವಾಗಿ ನಂಬುತ್ತಾರೊ ಅದು ಎಂದಿಗೂ ನಿಜವಾಗಿರದು. ನಂಬಿಕೆಯ ದುರಂತವೇ ಅದು !

"ಇಷ್ಟೊಂದು ಗಂಭೀರವಾಗಬೇಡ. ನಮ್ಮ ಕಾಲದ ಮೂಢನಂಬಿಕೆಗಳ ಜೊತೆ ನಮಗೇನು ಸಂಬಂಧ? ನಾವಂತೂ ಆತ್ಮದ ಮೇಲಿನ ನಂಬಿಕೆಯನ್ನು ಬಿಟ್ಟು ಬಿಟ್ಟಿದ್ದೇವಲ್ಲ? ಏನಾದರೂ ಒಂದು ಒಳ್ಳೆ ಟ್ಯೂನ್ ನುಡಿಸು ಡೋರಿಯನ್... ಹಾಗೆಯೇ ನುಡಿಸುತ್ತಾ ನಿನ್ನ ಈ ಯೌವ್ವನವನ್ನು ಹೇಗೆ ಪಾಲಿಸಿಕೊಂಡು ಬಂದೆ? ಅದಕ್ಕೆ ಏನು ಕಾರಣ. ನಿನ್ನ ಯೌವ್ವನದ ರಸಹಸ್ಯವನ್ನು ತಿಳಿಸು. ನಿನಗಿಂತ ನಾನು ಒಂದು ಹತ್ತು ವರುಷ ದೊಡ್ಡವನಿರಬಹುದು. ಆಗಲೇ ಮುಖದಲ್ಲಿ ಸುಕ್ಕುಗಳು ಮೂಡಿವೆ. ದೇಹ ಜೀರ್ಣವಾಗಿದೆ. ನೀನು ಮಾತ್ರ ಎಂದಿನಂತೆ ತಾಜಾ ಪ್ರಾಯದವನಂತೆ ಉಳಿದಿದ್ದೀಯ. ಇವತ್ತು ರಾತ್ರಿಯಂತೂ ನೀನು ಎಂದಿಗಿಂತ ಮೋಹಕವಾಗಿ ಕಾಣುತ್ತಿದ್ದೀಯ. ಮೊದಲ ಸಲ ನೋಡಿದಾಗ ನೀನು ಬಹಳ ಸಂಕೋಚ, ನಾಚಿಕೆಯ ಮುದ್ದೆಯಾಗಿದ್ದೆ. ನೀನು ಬದಲಾಗಿದ್ದಿ. ಆದರೆ ನಿನ್ನ ರೂಪವಲ್ಲ. ನಿನ್ನ ಪ್ರಾಯದ ಈ ರಹಸ್ಯ ನನಗೆ ನೀನು ತಿಳಿಸಿದರೆ, ಅದಕ್ಕಾಗಿ ನಾನು ಏನು ಮಾಡಲೂ ಸಿದ್ಧ. ಯೌವ್ವನಕ್ಕಿಂತ ಅಮೂಲ್ಯವಾದದ್ದು ಮತ್ತೇನೂ ಇಲ್ಲ. ಅದೊಂದು ವರದಾನ! ಪಿಯಾನೋ ನುಡಿಸುವುದನ್ನು ನಿಲ್ಲಿಸಬೇಡ – ನನಗಂತೂ ನೀನು ಯುವ ಅಪೊಲೋನಂತೆ ಕಾಣಿಸುತ್ತಿದ್ದೀಯ. ಡೋರಿಯನ್, ನನಗೂ ನನ್ನದೇ ಆದ ಕಷ್ಟಗಳು, ದುಃಖಗಳು ಇವೆ. ಅವುಗಳ ಬಗ್ಗೆ ನಿನಗೇನೂ ಗೊತ್ತಿಲ್ಲ. ವೃದ್ಧಾಪ್ಯದ ದುರಂತ, ತಾನು ವೃದ್ಧನಾಗಿದ್ದಾನೆ ಅನ್ನೋದಲ್ಲ. ಇನ್ನೊಬ್ಬರು ಯುವಕರಾಗಿದ್ದಾರಲ್ಲ ಅನ್ನೋದಾಗಿದೆ. ಒಮ್ಮೊಮ್ಮೆ ನನ್ನ ಪ್ರಾಮಾಣಿಕತೆಗೆ ನಾನೇ ಅಚ್ಚರಿಪಟ್ಟಿದ್ದೇನೆ ಡೋರಿಯನ್! ಡೋರಿಯನ್! ನೀನೆಷ್ಟು ಸಂತೋಷವಾಗಿದ್ದೀಯ! ಎಂಥ ವೈಭವದ ಬದುಕು. ನೀನು ಬಯಸಿದ್ದನ್ನೆಲ್ಲ ಅನುಭವಿಸಿದ್ದೀಯ. ನಿನ್ನಿಂದ ಅನುಭವಿಸಲಾಗದ್ದು ಏನೂ ಉಳಿದಿಲ್ಲ. ನಿನ್ನಲ್ಲಿ ಒಂದಿಷ್ಟಾದರೂ ಕಳಂಕವಿಲ್ಲ; ದೋಷವಿಲ್ಲ. ನೀನು ಇನ್ನೂ ಎಂದಿನಂತೆಯೇ ಇದ್ದೀಯ."

"ಇಲ್ಲ ಹ್ಯಾರಿ ನಾನು ಮೊದಲಿನಂತೆ, ಎಂದಿನಂತೆ ಇಲ್ಲ.

"ನಾನೊಪ್ಪಲ್ಲ. ನೀನು ಇದ್ದ ಹಾಗೇ ಇದ್ದೀಯ. ಮುಂದೆ ನಿನ್ನ ಬದುಕು ಹೇಗಿರಬಹುದೆಂದು ಅಚ್ಚರಿಪಡುತ್ತೇನೆ. ತ್ಯಾಗ, ವಿರಕ್ತಿ ಮುಂತಾದ ಹುಚ್ಚು ಆಲೋಚನೆಗಳಿಂದ,

ಬದುಕನ್ನು ಹಾಳು ಮಾಡಿಕೊಳ್ಳಬೇಡ. ಈಗ ನೀನು ಪರಿಪೂರ್ಣನಾಗಿದ್ದೀಯ, ಅಪರಿಪೂರ್ಣನಾಗಲು ಯತ್ನಿಸಬೇಡ. ದೋಷಮುಕ್ತ ನೀನು ! ಇಲ್ಲವೆನ್ನಬೇಡ. ನಿನಗೇ ಗೊತ್ತು ಅದು. ನಿನಗೆ ನೀನೆ ಮೋಸ ಮಾಡಿ ಕೊಳ್ಳಬೇಡ. ನಿರ್ಧಾರ, ಉದ್ದೇಶಗಳಿಂದ ಬದುಕು ನಿಯಂತ್ರಿತವಾಗುವುದಿಲ್ಲ. ನೀನು ಸುರಕ್ಷಿತವಾಗಿದ್ದೀ ಎಂದೇ ತಿಳಿ. ಅಧೀರನಾಗಬೇಡ. ನಿನ್ನ ಜೊತೆ ನನಗೂ ಸ್ಥಳಗಳನ್ನು ಬದಲಾಯಿಸಬೇಕೆನಿಸುತ್ತದೆ. ಪ್ರಪಂಚ ನಮ್ಮಿಬ್ಬರ ವಿರುದ್ಧ ಕೂಗೆಬ್ಬಿಸಿದೆ. ಆದರೆ ಯಾವಾಗಲೂ ನಿನ್ನನ್ನು ಆರಾಧಿಸಿದೆ; ಆರಾಧಿಸುತ್ತಿದ್ದೆ. ನಿನ್ನಂಥವನನ್ನೇ ಜಗತ್ತು ಶೋಧಿಸಿದೆ. ನಿನ್ನಿಂದ ಯಾವುದೇ ರೀತಿಯಲ್ಲಿ ಕೇಡು ಸಂಭವಿಸಿಲ್ಲ. ನಿನ್ನಿಂದ ಹೊರಗಾದ್ದನ್ನು ಏನನ್ನೂ ನೀನು ಮಾಡಿಲ್ಲ – ನಿನ್ನ ಬದುಕಿನಲ್ಲಿ ವಸಂತದ ಹೊರತು ಬೇರೆ ಋತುಗಳಿಲ್ಲ. ಡೋರಿಯನ್ ಪಿಯಾನೋ ಬಳಿಯಿಂದ ಎದ್ದ. ಹೆನ್ರಿ ಬಳಿಗೆ ಬಂದು ಪ್ರೀತಿಯಿಂದ ಕೂದಲಲ್ಲಿ ಕೈಯಾಡಿಸಿದ. "ನಿನ್ನದು ಅತ್ಯಂತ ಸುಂದರವಾದ ಬದುಕು. ಆದರೆ ನನ್ನ ಬದುಕು ಹೀಗೇ ಮುಂದುವರೆಯಲಾರದು ಹ್ಯಾರಿ, ನೀನು ಇಂಥ ಅಸಂಬದ್ಧವಾದ ಮಾತುಗಳನ್ನು ನನಗೆ ಹೇಳಬೇಡ. ನನ್ನ ಬಗ್ಗೆ ನಿನಗೆ ಗೊತ್ತಿಲ್ಲದ ಬೇಕಾದಷ್ಟು ವಿಷಯಗಳಿವೆ. ಒಂದು ವೇಳೆ ಅದೆಲ್ಲ ನಿನಗೆ ತಿಳಿದರೆ ನೀನೂ ಕೂಡಾ ನನ್ನಿಂದ ದೂರವಾಗುತ್ತೀಯ. ನೀನೇನೊ ನಗುತ್ತೀ ! ಬೇಡ. ನಗಬೇಡ ಹ್ಯಾರಿ" ಎಂದು ಮಣ ಮಣಿಸುತ್ತಾ ಹೇಳಿದ.

"ಯಾಕೆ ಪಿಯಾನೋ ನುಡಿಸುವುದನ್ನು ನಿಲ್ಲಿಸಿಬಿಟ್ಟೆ ಡೋರಿಯನ್. ಹೋಗು ರಾತ್ರಿ ರಾಗದ ಯಾವುದಾದರೂ ಒಂದು ತುಣುಕನ್ನು ನುಡಿಸು. ನೋಡು ಜೇನು ಬಣ್ಣದ ಆ ಚಂದ್ರಿಕೆ ಹೇಗೆ ಆಕಾಶದಲ್ಲಿ ತೇಲುತ್ತಾ ನಿನಗಾಗಿ ಕಾಯುತ್ತಿದ್ದಾಳೆ. ಅವಳನ್ನು ತೃಪ್ತಿಪಡಿಸಲು ನುಡಿಸು. ಅದನ್ನು ಕೇಳಿ ಅವಳು ಭೂಮಿಗೆ ಹತ್ತಿರವಾಗಿ ಬರುತ್ತಾಳೆ. ನುಡಿಸುತ್ತೀತಾನೆ? ಆಮೇಲೆ ಬೇಕಾದರೆ ಕ್ಲಬ್ಬಿಗೆ ಹೋಗೋಣ. ಈ ದಿನದ ಸಂಜೆ ತುಂಬಾ ಮನೋಹರವಾಗಿದೆ. ಅದು ಹಾಗೇ ಮುಗಿಯಬೇಕು ಕೂಡಾ. ಒಬ್ಬ ಹುಡುಗ ಇದ್ದಾನೆ. ನಿನ್ನನ್ನು ನೋಡಲು ಹಾತೊರೆಯುತ್ತಿದ್ದಾನೆ. ನಿನ್ನ ಪರಿಚಯ ಮಾಡಿಸಬೇಕೆಂದು ಒಂದೇ ಸಮನೆ ಒತ್ತಾಯಿಸುತ್ತಿದ್ದಾನೆ. ಈಗಾಗಲೇ ನಿನ್ನೆಲ್ಲ ಸ್ಟೈಲುಗಳನ್ನು ಅನುಕರಿಸುತ್ತಿದ್ದಾನೆ. ತುಂಬಾ ಹುಕಿಯಿಂದ ಇರುತ್ತಾನೆ. ಹೆಚ್ಚು ಕಡಿಮೆ ನಿನ್ನನ್ನು ಹೋಲುತ್ತಾನೆ.

"ಅವನು ನನ್ನನ್ನು ಅನುಕರಿಸದಿದ್ದರೆ ಒಳ್ಳೇದು ಎಂದು ವಿಷಾದ ಭಾವದಿಂದ ಹೇಳಿದ ಡೋರಿಯನ್. "ಹ್ಯಾರಿ ಯಾಕೋ ನನಗೆ ಕ್ಲಬ್ಬಿಗೆ ಬರಲು ಮನಸ್ಸಿಲ್ಲ. ಈಗಾಗಲೇ ಹನ್ನೊಂದು ಗಂಟೆ ನನಗೆ ನಿದ್ದೆ ಬರುತ್ತಿದೆ."

"ದಯವಿಟ್ಟು ಬೇಡ. ಇರು. ಇವತ್ತು ನೀನು ನುಡಿಸಿದ ಸ್ವರಗಳಲ್ಲಿ ಏನೋ ವಿಶೇಷವಿದೆ. ಎಂದೂ ಇಲ್ಲದ ಮಾಧುರ್ಯವಿದೆ. ನಿನ್ನ ಸ್ಪರ್ಶಮಾತ್ರದಿಂದಲೇ ಪಿಯಾನೋ ಅಲೌಕಿಕವಾದ ತರಂಗಗಳನ್ನು ಹೊಮ್ಮಿಸುತ್ತದೆ. ಎಂದೂ ಕೇಳದ ಸ್ವರಗಳನ್ನು ಇಂದು ಕೇಳುತ್ತಿದ್ದೇನೆ.

"ಯಾಕೇಂದ್ರೆ ನಾನು ಒಳ್ಳೆಯವನಾಗಲು ಹೊರಟಿದ್ದೇನೆ."

ನಗುತ್ತಾ ಉತ್ತರಿಸಿದ. "ಈಗಾಗಲೇ ನಾನು ಸ್ವಲ್ಪ ಬದಲಾಗಿಯೂ ಇದ್ದೇನೆ."

"ನನಗೆ ನೀನು ಬದಲಾಗುವುದಿಲ್ಲ ಡೋರಿಯನ್" ನೀನು ನಾನು ಎಂದೆಂದಿಗೂ ಸ್ನೇಹಿತರಾಗಿಯೇ ಇರುತ್ತೇವೆ."

"ಆದರೂ ನೀನು ನನಗೊಂದು ಪುಸ್ತಕ ಕೊಟ್ಟು ಹಾಳು ದಾರಿ ಹಿಡಿಸಿದೆ. ಅದನ್ನು ನಾನು ಕ್ಷಮಿಸುವುದಿಲ್ಲ. ಹ್ಯಾರಿ, ಮಾತು ಕೊಡು ಅಂಥ ಪುಸ್ತಕವನ್ನು ಎಂದಿಗೂ ಯಾರೊಬ್ಬರಿಗೂ ಕೊಡುವುದಿಲ್ಲ ಅಂತ ಹೇಳು.

"ಅಯ್ಯೋ ಹುಡುಗ ನಿಜವಾಗಿಯೂ ನೀನು ನೀತಿವಂತನಾಗಲು ಹೊರಟು ಬಿಟ್ಟಿದ್ದೀಯ. ಈಗಾಗಲೇ ನೀನು ಮಾಡಿದ ಪಾಪಗಳ ಅಪರಾಧಗಳ ಅನುಭವದಿಂದ ಪ್ರಪಂಚದಲ್ಲಿ ಎಲ್ಲರನ್ನೂ ಸುಧಾರಿಸಲು, ಉಪದೇಶ ಮಾಡಲು ಪ್ರಾರಂಭಿಸಿದ್ದೀಯ. ಅದರಿಂದ ನಿನಗೇನೋ ಬಹಳ ಸಂತೋಷ ಆದ ಹಾಗೆ ಅನಿಸಿರಬಹುದು. ಆದರೆ ಅದರಿಂದ ಯಾವ ಪ್ರಯೋಜನವೂ ಇಲ್ಲ. ನೀನು ಮತ್ತು ನಾನು ನಾವಿಬ್ಬರೂ ಇದ್ದ ಹಾಗೇ ಇದ್ದೀವಿ. ಮತ್ತು ಇರುತ್ತೇವೆ ಕೂಡ. ಪುಸ್ತಕ ಪ್ರಭಾವ ಬೀರಿತು ಅನ್ನೋದು ಸುಳ್ಳು. ಕಲೆಗೆ ಕ್ರಿಯೆಗಳ ಮೇಲೆ ಪ್ರಭಾವ ಬೀರುವುದಕ್ಕೆ ಸಾಧ್ಯವಿಲ್ಲ. ಕ್ರಿಯೆಯೂ ಬಯಕೆಯನ್ನು ನಾಶ ಮಾಡುತ್ತೆ ಅಷ್ಟೆ. ಅದೊಂದು ರೀತಿಯಲ್ಲಿ ಬಂಜೆ; ನಿಷ್ಕ್ರಿಯವಾದದ್ದು. ಪ್ರಪಂಚ ಯಾವ ಕೃತಿಗಳನ್ನು ಅನೈತಿಕ ಅಶ್ಲೀಲ ಎಂದು ಕರೆಯುತ್ತದೆಯೋ ಅವೇ ಕನ್ನಡಿಯಾಗಿ ಪ್ರಪಂಚದ ಕೊಳಕನ್ನು ಎತ್ತಿ ತೋರಿಸುತ್ತದೆ ಅಷ್ಟೇ. ಇನ್ನು ಸಾಹಿತ್ಯದ ಚರ್ಚೆ ಬೇಡ. ನಾಳೆ ಒಂದು ಸಲ ಬಂದು ಹೋಗು. ಹನ್ನೊಂದು ಗಂಟೆಗೆ ಕುದುರೆ ಸವಾರಿಗೆ ಹೋಗುತ್ತೇನೆ. ನೀನೂ ಬಂದರೆ ಇಬ್ಬರೂ ಜೊತೆಯಾಗಿ ಹೋಗಬಹುದು. ಆಮೇಲೆ ನಿನ್ನನ್ನು ಊಟಕ್ಕೆ ಕರೆದುಕೊಂಡು ಹೋಗ್ತೀನಿ. ಲೇಡಿ ಬ್ರಾಂಕ್ ಸಮ್ ಕೂಡಾ ಬರುತ್ತಾಳೆ ತುಂಬಾ ಚೆಲುವೆ. ನಿನ್ನ ಜೊತೆ ಶಾಪಿಂಗ್ ಬಗ್ಗೆ ಏನೋ ಮಾತಾಡಬೇಕೂಂತ ಹೇಳಿದ್ದಳು. ಬರ್ತೀಯ ತಾನೇ? ಇಲ್ಲವಾದರೆ ಡಚಸ್ ಜೊತೆ ಊಟಕ್ಕೆ ಹೋಗೋಣವೇ? ಇತ್ತೀಚೆಗೆ ನೀನು ಕಾಣಿಸೋದೇ ಇಲ್ಲ ಅಂತ ದೂರುತ್ತಿದ್ದಳು. ಗ್ಲಾಡಿಸ್‌ಗೆ ಬೇಸರ ಆಗಿರಬೇಕಲ್ಲ. ನನಗೇನೋ ಹಾಗೇ ಅನಿಸುತ್ತೆ. ಅವಳ ಚುರುಕು ಮಾತುಗಳು ಒಮ್ಮೊಮ್ಮೆ ಸಾಕು ಸಾಕೆನಿಸುತ್ತದೆ. ಸರಿ ಬಿಡು. ಏನೇ ಆಗಲಿ ನಾಳೆ ಹನ್ನೊಂದು ಗಂಟೆಗೆ ನೀನಲ್ಲಿಗೆ ಬರಲೇ ಬೇಕು."

"ಬರಲೇ ಬೇಕೇನು ಹ್ಯಾರಿ"

"ಖಂಡಿತ. ಈಗ ಆ ಪಾರ್ಕು ಕೂಡಾ ತುಂಬಾ ಚೆನ್ನಾಗಿದೆ. ಈ ವರ್ಷದಲ್ಲಿನ ಲೈಲಾಕ್‌ಗಳ ರಮ್ಯ ನೋಟ ಹಿಂದೆಂದೂ ಕಂಡ ಅನುಭವ ಇಲ್ಲ.

"ಆಯಿತು ಹ್ಯಾರಿ. ಹನ್ನೊಂದು ಗಂಟೆಗೆ ಇಲ್ಲಿರ್ತೀನಿ.... ಗುಡ್ ನೈಟ್ ಹ್ಯಾರಿ."

ಬಾಗಿಲ ಬಳಿ ಹೋದವನು ಸ್ವಲ್ಪ ನಿಂತ. ಅವನಿಗೆ ಏನೋ ಹೇಳಬೇಕಿತ್ತೆನಿಸಿತು. ಆದರೆ ಒಂದು ನಿಟ್ಟುಸಿರು ಬಿಟ್ಟು ಹೊರನಡೆದ.

❖

# ಅಧ್ಯಾಯ - 20

ಆ ರಾತ್ರಿ ಮನೋಹರವಾಗಿತ್ತು. ಸಾಕಷ್ಟು ಬೆಚ್ಚಗಿದೆ ಎನಿಸಿದ್ದರಿಂದ ಕೋಟನ್ನು ಹೆಗಲ ಮೇಲೆ ಎಸೆದುಕೊಂಡ. ತಲೆಗೆ ಸ್ಕಾರ್ಫನ್ನೂ ಸುತ್ತಿಕೊಂಡಿರಲಿಲ್ಲ. ಸಿಗರೇಟು ಸೇದುತ್ತಾ ದಾರಿ ಸವೆಸುತ್ತಿರುವಾಗ ಇಬ್ಬರು ಯುವಕರು ಅವನನ್ನು ಹಾದುಹೋದರು. ಅವರಲ್ಲಿ ಒಬ್ಬ ಡೋರಿಯನ್ ಕಡೆ ಬೆರಳು ತೋರಿಸಿ, ಇವನೇ ಡೋರಿಯನ್ ಗ್ರೇ ಎಂದು ಪಿಸು ಮಾತಿನಲ್ಲಿ ಹೇಳಿದ. ಯಾರಾದರೂ ಹೀಗೆ ಅವನ ಕಡೆ ಬೊಟ್ಟು ಮಾಡಿ ತೋರಿಸಿದರೆ, ಅವನ ಕಡೆ ನೋಟ ಬೀರಿದರೆ, ಅವನ ಕುರಿತು ಮಾತಾಡಿಕೊಂಡರೆ, ಅವನು ಎಷ್ಟೋ ಸಂತೋಷಪಡುತ್ತಿದ್ದ. ಆದರೆ ಈಗ ತಾನಿರುವ ಊರಿನಲ್ಲಿ ಎಷ್ಟೋ ದಿವಸದಿಂದ ಇದ್ದರೂ ಅವನು ಯಾರೆಂಬುದು ಯಾರಿಗೂ ಗೊತ್ತಿರಲಿಲ್ಲ. ಕಡೆಗೆ ಒಂದು ಹುಡುಗಿಗೆ ತಾನು ಅವಳನ್ನು ಪ್ರೀತಿಸುತ್ತಿರುವುದಾಗಿಯೂ, ತಾನು ಬಹಳ ಬಡವನೆಂದು ತಿಳಿಸಿದಾಗಲೂ ಒಂದಿಷ್ಟೂ ಅನುಮಾನ ಪಡದೆ ತನ್ನ ಮಾತುಗಳನ್ನು ನಂಬಿದಳು. ಮತ್ತೊಂದು ಸಲ ತಾನು ಬಹಳ ಕೆಟ್ಟವನೆಂದು ಹೇಳಿದಾಗ ಜೋರಾಗಿ ನಕ್ಕಿದಳು. ಅಲ್ಲದೆ ಕೆಟ್ಟವರು ಸಾಮಾನ್ಯವಾಗಿ ವಿಕಾರವಾಗಿಯೂ ವೃದ್ಧರಾಗಿಯೂ ಇರುತ್ತಾರೆಂದು ಹೇಳಿ ನಕ್ಕಿದ್ದಳು. ಆ ನಗು ಎಷ್ಟು ಚೆನ್ನಾಗಿತ್ತು. ಅವಳು ಸಾಧಾರಣ ಉಡುಪಿನಲ್ಲಿಯೂ ತುಂಬಾ ಆಕರ್ಷಕವಾಗಿ ಕಾಣಿಸುತ್ತಿದ್ದಳು. ಅವಳಿಗೆ ಏನೂ ಗೊತ್ತಿಲ್ಲ. ಆದರೆ ತಾನೇನನ್ನು ಕಳೆದುಕೊಂಡಿದ್ದನೋ ಅದೆಲ್ಲವೂ ಅವಳಲ್ಲಿತ್ತು.

ಮನೆ ತಲುಪಿದಾಗ ಅವನ ಸೇವಕ ಅವನಿಗಾಗಿ ಕಾಯುತ್ತಿದ್ದನು. ತಾನು ಕಳೆದುಕೊಂಡಿದ್ದ ಮುಗ್ಧ ಹುಡುಗುತನವನ್ನು ಮತ್ತೆ ಪಡೆಯಬೇಕೆಂದು ಹಪಹಪಿಸಿದ. ಆದರೆ ಅವನಿಗೆ ಗೊತ್ತು. ಅದೆಲ್ಲವನ್ನೂ ತಾನು ಕಳೆದುಕೊಂಡು ಅದರ ಜಾಗದಲ್ಲಿ ಕ್ರೌರ್ಯ, ಭ್ರಷ್ಟತೆ, ಅನೈತಿಕತೆ

ಇತ್ಯಾದಿ ಭಯಾನಕ ಪ್ರವೃತ್ತಿಗಳು ಮನೆ ಮಾಡಿಕೊಂಡಿವೆ. ಕೆಟ್ಟ, ದುಷ್ಟ ಪ್ರಭಾವಗಳ ಮುಷ್ಟಿಯಲ್ಲಿ ಸೆರೆಯಾಗಿದ್ದಾನೆ. ಅಲ್ಲದೆ ತನ್ನಿಂದಾಗಿ ಎಷ್ಟು ಜನರು ಹಾಳಾಗಿದ್ದಾರೆ. ಅವರು ಹಾಳಾದಷ್ಟೂ ತಾನು ಸಂತೋಷಪಟ್ಟಿದ್ದಾನೆ. ತಾನು ಕೆಡುವುದಲ್ಲದೆ ತನ್ನ ಸುತ್ತಲಿನವರನ್ನೆಲ್ಲ ಕೆಡಿಸಿ ದಿಕ್ಕು ತಪ್ಪಿಸಿದ್ದಾನೆ. ತಲೆ ತಗ್ಗಿಸುವಂತೆ ಮಾಡಿದ್ದಾನೆ. ಇದೆಲ್ಲವನ್ನೂ ದಾಟಿ ಮೊದಲಿನಂತಾಗಲು ಸಾಧ್ಯವಿಲ್ಲವೇ?

ಆಹಾ ! ಅಹಂಕಾರದ ಎಂಥ ಕ್ಷಣಗಳಲ್ಲಿ ತನ್ನ ಬದುಕಿಗೆ ಹೊರೆಯಾಗುವ ವೃದ್ಧಾಪ್ಯ ವಿಕಾರಗಳನ್ನು ತನ್ನ ಭಾವಚಿತ್ರ ಹೊತ್ತು ತಾನು ಮಾತ್ರ ಎಂದೂ ಬಾಡದ, ಯೌವ್ವನ, ರೂಪಗಳನ್ನು ಶಾಶ್ವತವಾಗಿ ಉಳಿಸಿಕೊಳ್ಳಬೇಕೆಂದು ಬಯಸಿದನೋ ಇಂಥ ಒಂದು ಅಸಂಭಾವ್ಯ ಆಲೋಚನೆಯೇ ಅವನ ಇಂದಿನ ಸೋಲಿಗೆ ಕಾರಣವಾಯಿತು. ಅವನು ಮಾಡಿದ ಒಂದೊಂದು ಪಾಪಕ್ಕೂ ದಂಡ ತೆರಬೇಕಾಗಿ ಬಂದದ್ದು ಒಳ್ಳೆಯದೇ ಆಯಿತು. ಇದರಿಂದಾಗಿಯಾದರೂ ಅವನು ಪರಿಶುದ್ಧನಾಗಲು ಸಾಧ್ಯವಾಗಬಹುದು.

ಹಲವು ವರ್ಷಗಳ ಹಿಂದೆ ಲಾರ್ಡ್ ಹೆನ್ರಿ ಕೊಟ್ಟಿದ್ದ ಕುಸುರಿ ಕೆಲಸದ ಕನ್ನಡಿಯೊಂದು ಮೇಜಿನ ಮೇಲೆ ನಿಂತಿತ್ತು. ಅದನ್ನು ಕೈಗೆತ್ತಿಕೊಂಡ. ಆ ಭಯಾನಕ ರಾತ್ರಿಯಲ್ಲಿ, ಅದೂ ತನ್ನ ಭಾವಚಿತ್ರದಲ್ಲಿ ಮೊಟ್ಟ ಮೊದಲ ಬಾರಿಗೆ ಏನೋ ಬದಲಾಗಿರುವುದನ್ನು ಗಮನಿಸಿದಂದು ಅದರಲ್ಲಿ ಮುಖವನ್ನು ನೋಡಿಕೊಂಡಂತೆ ಈಗಲೂ ಅದರಲ್ಲಿ ನೋಡಿಕೊಂಡ. ಕಣ್ಣು ಹನಿಗೂಡಿತ್ತು. ಒಮ್ಮೆ ಯಾರೋ ತನ್ನ ಅತ್ಯಂತ ದೊಡ್ಡ ಅಭಿಮಾನಿ ಒಂದು ಪತ್ರ ಬರೆದಿದ್ದ. ಅದರಲ್ಲಿ ಅವನು "ಪ್ರಪಂಚ ಬದಲಾಗಿದೆ. ಆದರೆ ನೀನು ಮಾತ್ರ ಚಿನ್ನ ಮತ್ತು ದಂತದಿಂದ ಮಾಡಿದ ಪ್ರತಿಮೆಯಾಗಿದ್ದೀಯ. ನಿನ್ನ ತುಟಿಗಳ ಮೇಲಿನ ಡೊಂಕು ರೇಖೆಗಳು ಚರಿತ್ರೆಯನ್ನು ಮರು ಸೃಷ್ಟಿಸುತ್ತವೆ." ಎಂಬಂಥ ಸಾಲುಗಳನ್ನು ಉದ್ಧರಿಸಿದ್ದ. ಆ ಸಾಲುಗಳು ನೆನಪಾದವು. ಮತ್ತೆ ಮತ್ತೆ ಅವುಗಳನ್ನು ಉಚ್ಚರಿಸಿದ. ಅವನಿಗೆ ತನ್ನ ಸೌಂದರ್ಯದ ಮೇಲೆ ಜಿಗುಪ್ಸೆ ಎನಿಸಿತು. ಆವೇಶದಿಂದ ಕನ್ನಡಿಯನ್ನೆತ್ತಿಕೊಂಡು ನೆಲಕ್ಕೆ ಒಗೆದ. ತಾನು ಬಯಸಿದ್ದ ಶಾಶ್ವತ ಯೌವ್ವನ ಮತ್ತು ಸೌಂದರ್ಯವೇ ತನ್ನ ವಿನಾಶಕ್ಕೆ ದಾರಿಯಾಯಿತು. ಈ ಎರಡು ದೌರ್ಬಲ್ಯಗಳು ಇಲ್ಲದಿದ್ದ ಪಕ್ಷದಲ್ಲಿ ಸ್ಫಟಿಕದಷ್ಟು ಶುದ್ಧವಾಗಿರುತ್ತಿದ್ದ. ಯೌವ್ವನವೆಂದರೇನು? ವಿವೇಕವಿಲ್ಲದ ಅಪ್ರಬುದ್ಧ, ದುಷ್ಟ ಆಲೋಚನೆಗಳ ಮನಃಸ್ಥಿತಿ.

ಈಗ ಆಲೋಚಿಸಿ ಪ್ರಯೋಜನವಿಲ್ಲ. ಆದದ್ದು ಆಗಿಹೋಯಿತು. ಬದಲಾಯಿಸಲು ಸಾಧ್ಯವಿಲ್ಲ. ಈಗೇನಿದ್ದರೂ ತಾನು ತನ್ನ ಭವಿಷ್ಯ ಮುಖ್ಯ. ಜೇಮ್ಸ್ ವೇನ್ ಯಾವುದೊ ಗೋರಿಯಲ್ಲಿ ಅನಾಥ ಶವವಾಗಿ ಬಿದ್ದುಕೊಂಡಿದ್ದಾನೆ. ಕ್ಯಾಂಪ್ ಬೆಲ್ ಯಾರ ಊಹೆಗೂ ದಕ್ಕದರೀತಿಯಲ್ಲಿ ಸಾವನ್ನಪ್ಪಿದ್ದಾನೆ. ತಾನು ಈಗ ಸುರಕ್ಷಿತ. ಪ್ರಾಣ ಭಯವಿಲ್ಲ. ಆದರೆ ಬೇಸಿಲ್? ಅವನ ಸಾವು ತನ್ನನ್ನು ಕಾಡುತ್ತಿದೆ. ಅವನ ಸಾವು ಅವನದಲ್ಲ, ತನ್ನ ಆತ್ಮದ ಸಾವು. ಇದೇ ಅವನನ್ನು ಕಾಡುತ್ತಿದ್ದುದು. ಬೇಸಿಲ್ ಸೃಷ್ಟಿಸಿದ ಭಾವಚಿತ್ರವೇ ತನ್ನ ಬದುಕನ್ನು ಹಾಳು ಮಾಡಿತು. ಅದಕ್ಕಾಗಿ ಅವನನ್ನು ತನಗೆ ಕ್ಷಮಿಸಲು ಸಾಧ್ಯವಾಗಲಿಲ್ಲ. ಭಾವಚಿತ್ರವೇ ಎಲ್ಲ ಪಾಪಗಳಿಗೆ ಕಾರಣ. ಬೇಸಿಲ್ ಏನೇನೋ ಹೇಳಿದ. ತನಗೆ ಅದನ್ನು ಕೇಳಿ ಸಹಿಸಿಕೊಳ್ಳಲು

ಆಗಲಿಲ್ಲ. ಆದರೂ ಸಹಿಸಿಕೊಂಡಿದ್ದ. ಯಾವುದೋ ಒಂದು ಹುಚ್ಚು ಆವೇಶದಲ್ಲಿ ಕೊಲೆಯಂತಹ ಭಯಂಕರ ಕೃತ್ಯವನ್ನು ಎಸಗಿದ. ಆದರೆ ಕ್ಯಾಂಪ್ ಬೆಲ್‌ನ ಸಾವಿಗೆ ಅವನೇ ಕಾರಣ. ಅವನೇ ಆತ್ಮಹತ್ಯೆಯನ್ನು ಆಯ್ಕೆ ಮಾಡಿಕೊಂಡ. ಆದ್ದರಿಂದ ತನಗೆ ಸಂಬಂಧವಿಲ್ಲ.

ಹೊಸ ಬದುಕು ! ಅದನ್ನೇ ಅವನು ಬಯಸಿದ್ದು, ಅದಕ್ಕಾಗಿಯೇ ಎದುರು ನೋಡುತ್ತಿದ್ದ. ಸ್ವಲ್ಪ ಮಟ್ಟಿಗೆ ಅದು ಆರಂಭವೂ ಆಗಿತ್ತು. ಇನ್ನು ಮುಂದೆ ಮುಗ್ಧತೆಯನ್ನೆಂದೂ ಪ್ರಚೋದಿಸುವುದಿಲ್ಲ. ಒಳ್ಳೆಯವನಾಗಿರುತ್ತಾನೆ.

ಅವನಿಗೆ ತನ್ನ ಚಿತ್ರದ ನೆನಪಾಯಿತು. ಖಂಡಿತ ಮೊದಲಿದ್ದ ಹಾಗೆ ಭಯಂಕರವಾಗಿ ವಿಕಾರವಾಗಿ ಇದ್ದಿರಲಾರದು. ತಾನೀಗ ಪರಿಶುದ್ಧ ಪವಿತ್ರ, ಆದ್ದರಿಂದ ಮೊಗದಲ್ಲಿ ಯಾವ ವಿಕಾರವೂ ಕಾಣಿಸಲಾರದು. ಆದ್ದರಿಂದ ಒಮ್ಮೆ ಅದನ್ನು ಹೋಗಿ ನೋಡಬೇಕು ಎಂದುಕೊಂಡ.

ಕೈಲಿ ದೀಪ ಹಿಡಿದು ಮೆಟ್ಟಲು ಹತ್ತಿ ಹೋದ. ಬಾಗಿಲು ತೆರೆಯುತ್ತಿದ್ದಂತೆ ಮೊಗದಲ್ಲಿ ಗೆಲುವಿನ ನಗೆ ಕಾಣಿಸಿತು. ತಾನಿನ್ನು ಒಳ್ಳೆಯವನಾದ್ದರಿಂದ ಆ ಭಯಂಕರ, ಅಸಹ್ಯ, ವಿಕೃತ ಭಾವಚಿತ್ರ ತನ್ನನ್ನು ಏನೂ ಮಾಡುವುದಿಲ್ಲ. ಆದ್ದರಿಂದ ಹೆದರಬೇಕಾದ್ದಿಲ್ಲ. ಅವನಿಗೆ ತನ್ನೆದೆ ಭಾರ ಇಳಿದಂತೆನಿಸಿತು.

ಸದ್ದಿಲ್ಲದೆ ಒಳ ನಡೆದ. ಭಾವಚಿತ್ರವನ್ನು ಮುಚ್ಚಿದ್ದ ನೇರಳೆ ಬಣ್ಣದ ಪರದೆಯನ್ನು ಎಳೆದ. ಭಯಭೀತನಾಗಿ ಚೀತ್ಕರಿಸಿದ. ಕಪಟದ ನಗೆ, ವೃದ್ಧಾಪ್ಯದ ಸುಕ್ಕುಗಳು ! ಹೇಸಿಗೆ ಎನಿಸಿತು. ಮೊದಲಿಗಿಂತಲೂ ಮತ್ತೂ ಹೇಸಿಗೆ ಎನಿಸಿತು. ಗಡ ಗಡ ನಡುಗಿದ. ಕೈಗಳ ಮೇಲೆ ಇನ್ನೂ ಹಸಿ ಎನಿಸಬಹುದಾದ ರಕ್ತದ ಕಲೆಗಳು ! ಆ ಕೆಂಪು ಕಲೆ ಮೊದಲಿಗಿಂತಲೂ ದೊಡ್ಡದಾಗಿದೆ ಏಕೆ? ಚಾಕುವೇ ಇಲ್ಲದ ಕೈಗಳಿಂದ ಭಾವಚಿತ್ರದಲ್ಲಿನ ಕಾಲುಗಳ ಮೇಲೆ ರಕ್ತಧಾರೆಗಳಿವೆ. ಸೋಲನ್ನು ಒಪ್ಪಿಕೊಂಡು ಸಾವಿಗೆ ಸಾವನ್ನು ಪ್ರಾಯಶ್ಚಿತ್ತವಾಗಿಸಿಕೊಳ್ಳಬೇಕೆ? ಅವನು ಜೋರಾಗಿ ನಕ್ಕ. ಇದೆಂಥ ಹುಚ್ಚು ವಿಚಾರ ಎಂದುಕೊಂಡ. ಒಂದು ವೇಳೆ ತಪ್ಪೊಪ್ಪಿಕೊಂಡರೆ ಯಾರು ತಾನೆ ಅದನ್ನು ನಂಬುತ್ತಾರೆ. ಕೊಲೆ ಮಾಡಿದ್ದಕ್ಕೆ ಯಾವ ಕುರುಹುಗಳೂ ಇರಲಿಲ್ಲ ಎಲ್ಲವನ್ನೂ ನಾಶಮಾಡಿದ್ದ. ಸ್ವತಃ ತಾನೇ ಎಲ್ಲವನ್ನೂ ಸುಟ್ಟು ಬಿಟ್ಟಿದ್ದ. ಇದೆಲ್ಲವನ್ನೂ ತಾನು ವಿವರಿಸಿ ಹೇಳಿದರೂ ಜನ ನಂಬುವುದಿಲ್ಲ. ಬದಲಾಗಿ ತಲೆ ಕೆಟ್ಟಿದೆ ಎಂದುಕೊಳ್ಳುತ್ತಾರೆ. ತಾನು ಹೇಳಿದ್ದೆಲ್ಲಾ ನಿಜ ಎಂದು ಹಠ ಹಿಡಿದರೆ ಯಾವುದೋ ಒಂದು ಕೋಣೆಯಲ್ಲಿರಿಸಿ ಬೀಗ ಹಾಕುತ್ತಾರೆ. ಆದರೂ ಸಾರ್ವಜನಿಕವಾಗಿ ತಾನು ಅಪರಾಧ ಸ್ವೀಕಾರ ಮಾಡಬೇಕು. ಆಗುವ ಅವಮಾನವನ್ನು ಅನುಭವಿಸಬೇಕು. ದೇವರೊಬ್ಬನಿದ್ದ, ಅವನು ಮನುಷ್ಯರಿಗೆ ತಪ್ಪು ಒಪ್ಪಿಕೊಳ್ಳುವಂತೆ ಉಪದೇಶಿಸಿದ. ತನ್ನ ಪಾಪಗಳನ್ನು ತಾನಾಗಿ ಹೇಳಿಕೊಳ್ಳದ ಹೊರತು ಪರಿಷ್ಕಾರವಿಲ್ಲ ಪರಿಶುದ್ಧನಾಗಲು ಸಾಧ್ಯವಿಲ್ಲ. ಬೇಸಿಲ್‌ನ ಸಾವು ಅಂಥ ದೊಡ್ಡದೆನಿಸಲಿಲ್ಲ. ಹೆಟ್ಟಿ ಮೆರ್‌ಟನ್ ನೆನಪಾದಳು. ಅದೊಂದು ಪಾಪದ ಕನ್ನಡಿ ! ಅವನು ನೋಡುತ್ತಿದ್ದುದು ತನ್ನ ಆತ್ಮದ ಕನ್ನಡಿಗಾಗಿ ! ಅವಳನ್ನು ಬಿಟ್ಟದ್ದೇಕೆ? ಸೌಜನ್ಯದಿಂದಲೇ ಆಷಾಢಭೂತಿ ತನವೇ? ಕುತೂಹಲವೇ? ಅವಳನ್ನು ತೊರೆದದ್ದರಲ್ಲಿ ಇದೆಲ್ಲಕ್ಕಿಂತ ಹೆಚ್ಚಿನದೇನಾದರೂ ಇತ್ತೇನು? ಹೆಚಿಂದೆಲ್ಲ ಪ್ರಶ್ನಿಸಿಕೊಂಡ. ಆದರೆ ಉತ್ತರ ಹೇಳುವವರಿಲ್ಲ. ಅವಳನ್ನು ಅಪವಿತ್ರಗೊಳಿಸದೆ

ಬಿಟ್ಟದರಲ್ಲಿ ಸೋಗಿನ ಮುಖವಾಡವಿತ್ತು. ತನ್ನನ್ನು ಪರೀಕ್ಷಿಸಿ ಕೊಳ್ಳುವುದಕ್ಕಾಗಿ ಅವಳನ್ನು ಬಿಟ್ಟುಕೊಟ್ಟ. ಈಗ ಅವನಿಗೆ ತನ್ನ ಅಂತರಾತ್ಮದ ಸತ್ಯ ಅರ್ಥವಾಗಿದೆ.

ಈ ಕೊಲೆ ಜೀವನ ಪರ್ಯಂತ ಬೆನ್ನಟ್ಟಿ ಬೇಟೆಯಾಡುತ್ತದೆಯೇ? ಭೂತದ ಭಾರದಿಂದ ಕುಸಿಯುತ್ತಲೇ ವರ್ತಮಾನದಲ್ಲಿ ಬದುಕಬೇಕೆ? ತಾನು ಎಲ್ಲರ ಮುಂದೆ ಅಪರಾಧ ಒಪ್ಪಿಕೊಳ್ಳಬೇಕೆ? ಇಲ್ಲ, ಇಲ್ಲ, ಎಂದೆಂದಿಗೂ ಸಾಧ್ಯವಿಲ್ಲ. ಅವನ ವಿರುದ್ಧವಾಗಿ ಉಳಿದಿದ್ದ ಒಂದೇ ಒಂದು ಸಾಕ್ಷಿಯೆಂದರೆ, ಆ ಭಾವಚಿತ್ರ. ಅದನ್ನು ನಾಶಪಡಿಸಬೇಕು. ಇಷ್ಟು ದಿನ ಇರಿಸಿಕೊಂಡದ್ದಾದರೂ ಯಾಕೆ? ಅದು ಮುದಿಯಾಗಿ, ವಿಕಾರವಾಗಿ ಕಾಣುತ್ತಿದ್ದುದನ್ನು ನೋಡಿ ಖುಷಿಪಡುತ್ತಿದ್ದ. ಆದರೆ ಇತ್ತೀಚೆಗೆ ಹಾಗಾಗುತ್ತಿಲ್ಲ. ರಾತ್ರಿಯಲ್ಲಿ ಎಚ್ಚರವಾಗಿರುವಂತೆ ಮಾಡಿತ್ತು. ಯಾರಾದರೂ ನೋಡಿಬಿಟ್ಟಾರೆಂಬ ಭಯದಿಂದ ರಾತ್ರಿಗಳಲ್ಲಿ ಎದ್ದು ಕುಳಿತಿರುತ್ತಿದ್ದ. ತನ್ನ ಬದುಕಿನಲ್ಲಿ ದುಃಖ, ದುಗುಡುಗಳನ್ನು ತಂದು ತುಂಬಿತ್ತು. ಅವನ ಅಸಂಖ್ಯ ಸುಖ ಸಂತೋಷದ ಕ್ಷಣಗಳನ್ನು ಹಾಳುಮಾಡಿತ್ತು. ಅದು ಅವನ ಅಂತಃ ಪ್ರಜ್ಞೆಯಂತಿತ್ತು. ಅದಕ್ಕಾಗಿಯೇ ಅದನ್ನು ಹಾಳು ಮಾಡಬೇಕು.

ಸುತ್ತಲೂ ಕಣ್ಣಾಡಿಸಿದ, ಬೇಸಿಲ್‌ನನ್ನು ಇರಿದ ಚಾಕುವಿಗಾಗಿ ಹುಡುಕಾಡಿದ. ಕಡೆಗೆ ಕಣ್ಣಿಗೆ ಬಿತ್ತು. ಅದರ ಮೇಲೆ ಯಾವುದೇ ಗುರುತುಗಳು ಇರಲಿಲ್ಲ. ಚೆನ್ನಾಗಿ ತೊಳೆದು ಶುಭ್ರವಾಗಿ ಒರೆಸಿ ಇಟ್ಟಿದ್ದ. ಫಳ ಫಳನೆ ಹೊಳೆಯುತ್ತಿತ್ತು. ಕಲಾವಿದನನ್ನು ಕೊಂದ ಈ ಚಾಕು ಕಲಾಕೃತಿಯನ್ನೂ ಮುಗಿಸಿಬಿಡುತ್ತದೆ. ಅದರೊಂದಿಗೆ ತನ್ನ ಭೂತವನ್ನೂ ಇಲ್ಲದಂತೆ ಮಾಡಲು ಮುಂದಾದ, ಕೈಲಿ ಚಾಕು ಹಿಡಿದು ಭಾವಚಿತ್ರವನ್ನು ಎಡ್ಡಾದಿಡ್ಡಿಯಾಗಿ ಸೀಳಿದ. ಭಯಂಕರ ಕೂಗು, ದಡ್ಡನೆ ಶಬ್ದ, ಅವುಗಳ ಸದ್ದಿಗೆ ಮನೆಯ ಸೇವಕರೆಲ್ಲರೂ ಬೆಚ್ಚಿಬಿದ್ದು ತಾವು ಮಲಗಿದ್ದ ಕೋಣೆಗಳಿಂದ ಹೊರಗೆ ಬಂದರು. ಒಂದಿಬ್ಬರು ವ್ಯಕ್ತಿಗಳು ಆ ದೊಡ್ಡ ಬಂಗಲೆಯನ್ನು ಹಾದು ಹೋಗುತ್ತಿದ್ದವರು ಈ ಸದ್ದಿಗೆ ಹೆದರಿ ನಿಂತರು. ಒಂದಷ್ಟು ದೂರ ನಡೆದು ಪೊಲೀಸಿನವನೊಬ್ಬ ಕಾಣಿಸಿದಾಗ ಅವನನ್ನು ಈ ಮನೆ ಬಳಿಗೆ ಕರೆತಂದರು. ಆ ಮನುಷ್ಯ ಹಲವು ಸಲ ಕರೆಗಂಟೆ ಬಾರಿಸಿದರೂ ಉತ್ತರವಿಲ್ಲ, ಮೇಲಿನ ಕೋಣೆಯ ಕಿಟಕಿಯಿಂದ ಸಣ್ಣ ದೀಪವೊಂದರ ಬೆಳಕು ಹೊರತು ಮತ್ತೆಲ್ಲೂ ದೀಪಗಳು ಇರಲಿಲ್ಲ. ಒಂದೆರಡು ನಿಮಿಷಗಳ ನಂತರ ಆತ ಪೋರ್ಟಿಕೊನಲ್ಲಿ ನಿಂತು.

"ಕಾನ್‌ಸ್ಟೇಬಲ್ ಇದು ಯಾರ ಮನೆ?" ಎಂದು ಇಬ್ಬರು ವ್ಯಕ್ತಿಗಳಲ್ಲಿ ಹಿರಿಯನಾಗಿದ್ದವನೊಬ್ಬ ಕೇಳಿದ.

"ಮಿಸ್ಟರ್ ಡೋರಿಯನ್ ಗ್ರೇನ ಮನೆ ಸಾರ್" ಪೊಲೀಸನು ಹೇಳಿದ. ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ವ್ಯಂಗ್ಯ ನಗೆ ನಕ್ಕರು. ಅವರಲ್ಲಿ ಒಬ್ಬ ಸರ್ ಹೆನ್ರಿ ಆ್ಯಷ್ಟನ್ನನ ಚಿಕ್ಕಪ್ಪನಾಗಿದ್ದ.

ಮನೆ ಒಳಗಡೆ ಸೇವಕರು ಗುಸು ಗುಸು ಮಾತಾಡಿಕೊಳ್ಳುತ್ತಿದ್ದರು. ವಯಸ್ಸಾದ ಶ್ರೀಮತಿ ಲೀಫ್ ಕೈ ಕೈ ಹಿಸುಕಿಕೊಂಡು ಅಳುತ್ತಿದ್ದಳು. ಫ್ರಾನ್ಸಿಸ್ ಮುಖ ಬಿಳುಚಿಕೊಂಡು ನಿಂತಿದ್ದ.

ಕಾಲು ಗಂಟೆಯಾದ ಮೇಲೆ ಗಾಡಿಯವನು, ಮತ್ತೊಬ್ಬ ವ್ಯಕ್ತಿ ಮಹಡಿ ಮೇಲೆ ಹೋದರು. ಅಲ್ಲಿನ ಕೋಣೆ ಬಾಗಿಲನ್ನು ಎಷ್ಟು ಬಡಿದರೂ ತೆರೆದುಕೊಳ್ಳಲಿಲ್ಲ. ಕಡೆಗೆ ಹೇಗೋ ಮಾಡಿ ಬಾಗಿಲು ಮುರಿದು ಒಳಗೆ ಪ್ರವೇಶಿಸಿದರು. ಅವರು ಒಳಗೆ ಪ್ರವೇಶಿಸಿದಾಗ, ಗೋಡೆ ಮೇಲೆ ನೇತಾಡುತ್ತಿದ್ದ ತಮ್ಮ ಯಜಮಾನನ ಅದ್ಭುತವಾದ ಭಾವಚಿತ್ರವನ್ನು, ಆತನ ಎಲ್ಲಾ ಸೌಂದರ್ಯ ಯೌವ್ವನಗಳ ಮೋಹಕತೆಯೊಂದಿಗೆ ನೋಡಿದರು. ಕೆಳಗೆ ನೆಲದ ಮೇಲೆ ಒಬ್ಬ ವ್ಯಕ್ತಿ ನಿರ್ಜೀವವಾಗಿ ಬಿದ್ದಿದ್ದ. ಸಂಜೆ ಉಡುಪನ್ನು ಧರಿಸಿದ್ದ. ಕೈಲಿದ್ದ ಚಾಕುವಿನಿಂದ ಹೃದಯವನ್ನು ಇರಿದುಕೊಂಡಿದ್ದ. ದೇಹ ಕಂಪಿಸಿತ್ತು. ಮುಖದ ತುಂಬ ಸುಕ್ಕುಗಳಿದ್ದವು. ನೋಡಲು ಅಸಹ್ಯವಾಗಿತ್ತು. ಯಾರದೆಂದು ತಿಳಿಯಲಾಗಲಿಲ್ಲ ಕಡೆಗೆ ಬೆರಳಿನಲ್ಲಿದ್ದ ಉಂಗುರಗಳು ಆ ದೇಹ ಯಾರದೆಂದು ಗುರುತು ಹೇಳಿದವು.

❖

# ನಮ್ಮ ಪ್ರಕಟಣೆಗಳು

| | | | | |
|---|---|---|---|---|
| 1. | ಕನಸುಗಳಿಗೆ ಕಿನಾರಗಳಿರುವುದಿಲ್ಲ* | ರವಿಕುಮಾರ್ | ರೂ. | 70.00 |
| 2. | ಕಿಲಾರಿ * | ಡಾ. ಎಸ್.ಎಮ್. ಮುತ್ತಯ್ಯ | ರೂ. | 50.00 |
| 3. | ಸಂವೇದನೆ (ಬರಗೂರು ರಾಮಚಂದ್ರಪ್ಪ ಜೀವನ ಮತ್ತು ಸಾಹಿತ್ಯ)* | ಡಾ. ಎಸ್. ಮಾರುತಿ | ರೂ. | 160.00 |
| 4. | ಬೆಳಕಿನ ಪಾದ * | ಬಾಲಕೃಷ್ಣ ನಾಯಕ್ ಡಿ. | ರೂ. | 40.00 |
| 5. | ಪಾತ್ರಗಳು ಇರಲಿ ಗೆಳೆಯ * | ಸತ್ಯನಾರಾಯಣರಾವ್ ಅಣತಿ | ರೂ. | 50.00 |
| 6. | ದೂಸ್ರಾ * | ರವಿಕುಮಾರ್ | ರೂ. | 60.00 |
| 7. | ನೆಲದ ಮರೆಯ ನಿಧಾನ * | ಸಿದ್ದು ಯಾಪಲಾಪರವಿ | ರೂ. | 40.00 |
| 8. | ಅಪರೂಪದ ಮನುಷ್ಯ * | ಆತ್ಮಕೂರ ವಾಮನಾಚಾರ್ಯ | ರೂ. | 80.00 |
| 9. | ವಸಂತಸ್ಮೃತಿ * | ಡಿ.ಅರ್. ನಾಗರಾಜ್ | ರೂ. | 70.00 |
| 10. | ಮಹಿಳೆ ಮತ್ತು ದುಡಿಮೆ * | ಡಾ. ಬಿ.ಹಚ್. ಅಂಜನಪ್ಪ | ರೂ. | 200.00 |
| 11. | ಸರ್ವಜ್ಞನ ವಚನಗಳು | ಡಾ. ಕೆ.ಅರ್. ಗಣೇಶ್ | ರೂ. | 200.00 |
| 12. | ಕೃತಿಪ್ರವೇಶ (ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರ ಕೃತಿಗಳ ಸಮಗ್ರ ಅವಲೋಕನ) | ಡಾ.ಎಸ್.ಎಸ್.ಅಂಗಡಿ. | ರೂ. | 100.00 |
| 13. | ಮಣ್ಣಿನ ಕವಿತೆ * | ಡಾ. ನಿಂಗಪ್ಪ ಮುದೇನೂರು | ರೂ. | 60.00 |
| 14. | ಸೊಂಡೂರು ಕುಮಾರಸ್ವಾಮಿ * | ಡಾ. ನಿಂಗಪ್ಪ ಮುದೇನೂರು | ರೂ. | 160.00 |
| 15. | ಲಿಖಿತ – ಅಲಿಖಿತ * | ಡಾ. ಎಸ್.ಎಮ್. ಮುತ್ತಯ್ಯ | ರೂ. | 160.00 |
| 16. | ವರ್ತಮಾನ * | ಬಿ.ಪಿ. ಶಿವಾನಂದ ರಾವ್ | ರೂ. | 85.00 |
| 17. | ಗಾದೇಯ ಮಾತು * | ಪ್ರೊ. ಮಲ್ಲೇಪುರಂ ಜಿ. ವೇಂಕಟೇಶ್ | ರೂ. | 25.00 |
| 18. | ಹಡೆ ಏರಿಸಿದ ಸೂರ್ಯನ ಕುದುರೆ * | ಸತ್ಯನಾರಾಯಣ ರಾವ್ ಅಣತಿ | ರೂ. | 25.00 |
| 19. | ನಿಜದ ಬೆಳಗು * | ಅಕ್ಕಿ ಬಸವೇಶ್ | ರೂ. | 30.00 |
| 20. | ವಚನ ಬೆಳಗು * | ಡಾ. ನಾಗರಾಜ ಎಂ. | ರೂ. | 70.00 |
| 21. | ವರದಿಗಾರರೇ ಈ ಕಡೆ ಸ್ವಲ್ಪ ನೋಡಿ* | ಪಿ. ರಾಜೇಂದ್ರ | ರೂ. | 60.00 |
| 22. | ನಮ್ಮ ಕರ್ನಾಟಕ | ಪಿ. ರಾಜೇಂದ್ರ | ರೂ. | 70.00 |
| 23. | ವೇದ–ತಂತ್ರ–ಸಂಸ್ಕೃತಿ * | ಡಾ. ಜಿ.ಬಿ. ಹರೀಶ್ | ರೂ. | 90.00 |
| 24. | ಸಖಿ–ಸಖಿ (ಗಜಲ್‌ಗಳು) * | ರವಿ ಹಂಪಿ | ರೂ. | 40.00 |
| 25. | ಆಕಾಶದ ಹಾಡು * | ಅನಸೂಯದೇವಿ | ರೂ. | 120.00 |
| 26. | ಬಿಂಬದೊಳಗಣ ಪ್ರಾಣ * | ಡಾ. ಹೆಬ್ಬಾಲೆ ನಾಗೇಶ್ | ರೂ. | 50.00 |
| 27. | ವಿಜಯನಗರ ಸಾಮ್ರಾಜ್ಯದ ಕನಸುಗಾರ ಕುಮಾರರಾಮ – ಓಂಕಾರಪ್ಪ | | ರೂ. | 250.00 |
| 28. | ಮಳೆಗಾಲದ ಕಾಡು * | ಸ್ವಾಮಿನಾಥ | ರೂ. | 30.00 |
| 29. | ವಾಲ್ಮೀಕಿ * | ಡಾ. ಸರಜೂ ಕಾಟ್ಕರ್ | ರೂ. | 100.00 |
| 30. | ಕರ್ನಾಟಕ ಬುಡಕಟ್ಟು ಭಾಷೆ * | ಡಾ. ಎಸ್.ಎಸ್. ಅಂಗಡಿ | ರೂ. | 225.00 |
| 31. | ಕತ್ತಲ ಬೆಳಗು * | ಜ.ನಾ. ತೇಜಶ್ರೀ | ರೂ. | 40.00 |
| 32. | ನವವಿಸರ್ಗ * | ಡಾ. ಕವಿತಾ ರೈ | ರೂ. | 130.00 |
| 33. | ಕಡಲ ತಡಿಯ ತಲ್ಲಣ | ಉಷಾ ಕಟ್ಟೆಮನೆ<br>ಡಾ. ಪುರುಷೋತ್ತಮ ಬಿಳಿಮಲೆ | ರೂ. | 150.00 |
| 34. | ಬಂಟರು ಬದುಕು ಮತ್ತು ಬದಲಾವಣೆ | ಡಾ. ಶೇಖರ | ರೂ. | 300.00 |
| 35. | ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ | ಕೆ. ನಾರಾಯಣಸ್ವಾಮಿ | ರೂ. | 150.00 |

| | | | |
|---|---|---|---|
| 36. | ಈ ಕ್ಷಣ * | ಜ್ಯೋತಿ ಗುರುಪ್ರಸಾದ್ | ರೂ. 65.00 |
| 37. | ಗಣೇಶನ ಬೆಂಗ್ಳೂರು ಯಾತ್ರೆ* | ಪ್ರಕಾಶ್ ಕೆ. ನಾಡಿಗ್ | ರೂ. 65.00 |
| 38. | ಕೃಷ್ಣ ಕಷಾಯ * | ಪಿ.ವಿ. ರಾಮಚಂದ್ರ | ರೂ. 100.00 |
| 39. | ರಾವಣನ ಡೈರಿ | ಹಾ.ಮ್ಯೆ. ಸೂರಿ | ರೂ. 150.00 |
| 40. | ಮೊಪಾಸಾನ ಕಥೆಗಳು | ಪಿ.ವಿ. ರಾಮಚಂದ್ರ | ರೂ. 350.00 |
| 41. | ತಂತಿ ಪಕ್ಷಿ * | ಜ್ಯೋತಿ ಗುರುಪ್ರಸಾದ್ | ರೂ. 60.00 |
| 42. | ವಕ್ರರೇಖೆ * | ಡಾ. ಜಿ.ಬಿ. ಹರೀಶ್ | ರೂ. 300.00 |
| 43. | ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ * ನಾಗರತ್ನಮ್ಮ | ರೂ. | ಡಾ. ಎಸ್. 125.00 |
| 44. | ಕರ್ನಾಟಕದಲ್ಲಿ ಅಸಹಕಾರ ಮತ್ತು ನಾಗರೀಕ – ಕಾನೂನು ಭಂಗ ಚಳುವಳಿ * | ಡಾ. ಎಸ್. ನಾಗರತ್ನಮ್ಮ | ರೂ. 175.00 |
| 45. | ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ | ಡಾ. ರವಿ ಛಲವಾದಿ | ರೂ. 225.00 |
| 46. | ಶಿವರಾಮ ಕಾರಂತರ ಕೃತಿಗಳಲ್ಲಿ ಸ್ತ್ರೀ ಸಂಕಥನದ ಸ್ವರೂಪ * | ಡಾ. ರಾಜೇಂದ್ರ ತಗಡ್ಲಿ | ರೂ. 175.00 |
| 47. | ಮಾಧ್ಯಮ ಮಾರ್ಗದರ್ಶಿ | ಪಿ. ರಾಜೇಂದ್ರ | ರೂ. 125.00 |
| 48. | ಊರು ಮನೆ (ಸಣ್ಣ ಕಥೆಗಳ ಸಂಕಲನ) | ಲಕ್ಷ್ಮಣ ಕೊಡಸೆ | ರೂ. 160.00 |
| 49. | ಮುಖಾ – ಮುಖಿ * | ಬಿ.ಪಿ. ಶಿವಾನಂದ ರಾವ್ | ರೂ. 85.00 |
| 50. | ಜೋಲಿ ಲಾಲಿ * | ಜ್ಯೋತಿ ಗುರುಪ್ರಸಾದ್ | ರೂ. 160.00 |
| 51. | ಅನಸೂಯ ಕಥೆಗಳು * | ಡಾ. ಅನಸೂಯಾ ದೇವಿ | ರೂ. 100.00 |
| 52. | ರಾಜಕೀಯ ಕಥೆಗಳು * | ಡಾ. ಜಿ. ವೀರಭದ್ರಗೌಡ | ರೂ. 100.00 |
| 53. | ಜನಪದ ಕತೆಗಳು:ಆಶಯಗಳು | ಡಾ. ವಾಮದೇವ | ರೂ. 160.00 |
| 54. | ಅಮೂರ್ತ ಕನ್ನಡಿ * | ಡಾ. ಟಿ.ಡಿ. ರಾಜಣ್ಣ ತಗ್ಗಿ | ರೂ. 100.00 |
| 55. | ವ್ಯಾಸಕೂಟ ಮತ್ತು ದಾಸಕೂಟ * | ಡಾ. ಅನಸೂಯಾ ದೇವಿ | ರೂ. 250.00 |
| 56. | ಹೃದಯವಂತ ವಿಷ್ಣು * | ವಿನೋದ್ ಕುಮಾರ್ ಬಿ. | ರೂ. 95.00 |
| 57. | ಮಿಣ ಮಿಣ ಚೇಣಾ * | ತ್ರಿವೇಣಿ ಶಿವಕುಮಾರ್ | ರೂ. 175.00 |
| 58. | ಸನೂತನ ದಾರ್ಶನಿಕರೂ * | ಸ್ವಾಮಿನಾಥ | ರೂ. 80.00 |
| 59. | ದಿಗ್ದರ್ಶಕರು | ಅರುಣ್ ಎಲ್. | ರೂ. 80.00 |
| 60. | ವಚನ ವ್ಯಕ್ತಿತ್ವ ವಿಕಾಸ | ಡಾ. ಹಾ.ಮ. ನಾಗಾರ್ಜುನ | ರೂ. 80.00 |
| 61. | ಸರಸ್ವತಿ | ಡಾ. ಬಿ.ಆರ್. ಸತ್ಯನಾರಾಯಣ | ರೂ. 300.00 |
| 62. | ನಿಡುಗಲ್ಲು ದುರ್ಗದ ಕಥನ * | ಡಾ. ಡಿ.ಕೆ.ಚಿತ್ತಯ್ಯ ಪೂಜಾರ್ | ರೂ. 250.00 |
| 63. | ಸೀವಾದಿ ಚಿಂತನೆಗಳು * | ಡಾ. ಹಾ.ಮ. ನಾಗಾರ್ಜುನ | ರೂ. 480.00 |
| 64. | ಕಮಲದೇಸಾಯಿ ಕಥೆಗಳು | ಅನು: ಚಂದ್ರಕಾಂತ ಪೋಕಳೆ | ರೂ. 120.00 |
| 65. | ಪ್ರೀತಿ ಏನೆನ್ನಲ್ಲಿ ನಿನ್ನ | ರೂಪಾ ಎಲ್. ರಾವ್ | ರೂ. 70.00 |
| 66. | ಹೆಜ್ಜೆ ಮೂಡದ ಹಾದಿಯಲಿ | ಸುಧೇಶ್ ಶೆಟ್ಟಿ | ರೂ. 160.00 |
| 67. | ಹಕ್ಕಿ ಹರಿವ ನೀರು | ಡಾ. ಕವಿತಾ ರೈ | ರೂ. 60.00 |
| 68. | ಸಾಹಿತ್ಯ ಸಂಸ್ಕೃತಿ * | ಡಾ. ತಳವಾರ ವಾಮದೇವ | ರೂ. 110.00 |
| 69. | ಸಾಧಕರ ಹಾದಿ | ಕೆ.ಎನ್. ಪರಾಂಜಪೆ | ರೂ. 100.00 |
| 70. | ಸಾಧನಶೀಲ (ಡಾ. ಎ.ವಿ. ಪ್ರಸನ್ನ ಅವರ ಅಭಿನಂಧನ ಗ್ರಂಥ) | | ರೂ. 225.00 |
| 71. | ಗಡಿಪಾರು | ಚಂದ್ರಕಾಂತ ಪೊಕಳೆ | ರೂ. 150.00 |
| 72. | ರಾಜ್ಯಾಯಣ | ಪಿ. ರಾಜೇಂದ್ರ | ರೂ. 150.00 |
| 73. | ಇಂಧನ * | ಚಂದ್ರಕಾಂತ ಪೊಕಳೆ | ರೂ. 100.00 |
| 74. | Cosmic Joke | Raghav Chinivar | Rs. 250.00 |
| 75. | Urbanization Industrialization In Karnataka | Dr. Chandrappa | Rs. 480.00 |
| 76. | ಅಪ್ಪನ ಪ್ರತಿರೂಪ ಮತ್ತಿತರ ಕತೆಗಳು | ಡಾ. ಟಿ.ಡಿ.ರಾಜಣ್ಣ ತಗ್ಗಿ | ರೂ. 100.00 |
| 77. | ನೀಲಕುರುಂಜಿ (ವಿಮರ್ಶಾ ಲೇಖನಗಳು) * | ಎಂ. ಶಿವರಾಮಯ್ಯ | ರೂ. 220.00 |

| | | | |
|---|---|---|---|
| 78. | ಬಳ್ಳಾರಿ ತಾಲ್ಲೂಕಿನ ಸ್ಥಳನಾಮಗಳು * | ಡಾ. ವೀರೇಶ್ ಬಳ್ಳಾರಿ | ರೂ. 200.00 |
| 79. | ಶಾಸ್ತ್ರೀಯ ಭಾಷೆ ಕನ್ನಡ & ಶಿಕ್ಷಣದ ಹಕ್ಕುಗಳು * | ಡಾ. ಹಾ.ಮಾ.ನಾಗಾರ್ಜುನ | ರೂ. 170.00 |
| 80. | ವೀರ ವನ್ತೆ ದುರ್ಗವ್ವ | ಡಾ. ಎಲ್ಲಪ್ಪ ಕೆ.ಕೆ.ಪುರ | ರೂ. 100.00 |
| 81. | ಮಂಡ್ಯ ಜಿಲ್ಲೆಯ ಹೊಯ್ಸಳ ದೇವಾಲಯಗಳು | | ಡಾ. ಶೋಭ |
| | ರೂ. | 250.00 | |
| 82. | ಕಾಗದದ ದೋಣಿ ಯಾನ-1 | ಎಸ್.ಎಂ. ಪೆಜತ್ತಾಯ | ರೂ. 180.00 |
| 83. | ಕಾಗದದ ದೋಣಿ ಯಾನ-2 | ಎಸ್.ಎಂ. ಪೆಜತ್ತಾಯ | ರೂ. 180.00 |
| 84. | ಶರ್ವಾಣಿ | ಸುನಿತಾರಾಜು | ರೂ. 70.00 |
| 85. | ಕನ್ನಡ ಸಾಹಿತ್ಯದಲ್ಲಿ ಬೆಡಗು | ಡಾ. ರಾಜು ಕೆ.ಎಸ್. | ರೂ. 80.00 |
| 86. | ನಮ್ಮ ರಕ್ಷಕ ರಕ್ಷಾ | ಎಸ್.ಎಂ. ಪೆಜತ್ತಾಯ | ರೂ. 40.00 |
| 87. | ಅಮ್ಮ ಹೇಳಿದ ಕತೆಗಳು * | ತ್ರಿವೇಣಿ ಶಿವಕುಮಾರ್ | ರೂ. 60.00 |
| 88. | ನಮ್ಮ ಕರ್ನಾಟಕ-2011 | ಸೃಷ್ಟಿನಾಗೇಶ್ | ರೂ. 130.00 |
| 89. | ಸುದ್ಧಿಯ ಹಿಂದೆ | ಡಿ.ವಿ. ರಾಜಶೇಖರ್ | ರೂ. 70.00 |
| 90. | ಮೈಲಾರ ಬಸವಲಿಂಗ ಶರಣರ ತ್ರಿವಿಧಿಕರಣ * | | ಡಾ. ಹಾ.ಮಾ. |
| | ನಾಗಾರ್ಜುನ | ರೂ. | 250.00 |
| 91. | ವೀರವನ್ತೆ ದುರ್ಗವ್ವ (ನಾಟಕ) | ಡಾ. ಯಲ್ಲಪ್ಪ ಕೆ.ಕೆ.ಪುರ | ರೂ. 70.00 |
| 92. | ಹಕ್ಕಿ ಹರಿವ ನೀರು | ಡಾ. ಕವಿತಾ ರೈ | ರೂ. 40.00 |
| 93. | ವೀರವನ್ತೆ ದುರ್ಗವ್ವ (ಕಾದಂಬರಿ) | ಡಾ. ಯಲ್ಲಪ್ಪ ಕೆ.ಕೆ.ಪುರ | ರೂ. 120.00 |
| 94. | ಲೋಕಾಮುದ್ರಾ | ಡಾ. ಕವಿತಾ ರೈ | ರೂ. 50.00 |
| 95. | ಸಾಹಿತ್ಯ ಸಂಸ್ಕೃತಿ | ಡಾ. ತಳವಾರ ವಾಮದೇವ | ರೂ. 110.00 |
| 96. | ಅಲ್ಲುಂಟು ನೆಂಟು | ಬಿ.ಎಸ್. ಲಕ್ಷ್ಮೀನಾರಾಯಣ | ರೂ. 70.00 |
| 97. | ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು | ಪ್ರೊ. ಶಿವರಾಮಯ್ಯ | ರೂ. 100.00 |
| 98. | ಪುಟಾಣಿಗಳಿಗಾಗಿ ಪುಟ್ಟ ಕಥೆಗಳು * | ಪ್ರಕಾಶ್ ಕೆ. ನಾಡಿಗ್ | ರೂ. 70.00 |
| 99. | ತುತ್ತಿಗೊಂದು ಕಥೆ (ಮಕ್ಕಳ ಕಥೆಗಳು) | ಸುನೀತಾ ರಾಜು | ರೂ. 80.00 |
| 100. | ಬ್ಲಾಗಿಸು ಕನ್ನಡ ಡಿಂಡಿಮವ | ಚೇತನ ತೀರ್ಥಹಳ್ಳಿ | ರೂ. 90.00 |
| 101. | ಭಾರತ ಮತ್ತು ಪಾಕಿಸ್ತಾನ ಕಾಶ್ಮೀರ * | ಡಾ. ಸಿ.ಚಂದ್ರಪ್ಪ | ರೂ. 225.00 |
| 102. | ತರಂಗಿಣಿ ತೀರದಲ್ಲಿ * | ಆತ್ಮಕೂರ ವಾಮನಾಚಾರ್ಯ | ರೂ. 225.00 |
| 103. | ಆಲೋಡನ * | ಆನಂದ ಝುಂಜರವಾಡ | ರೂ. 150.00 |
| 104. | ನಾದಲೋಕದ ರಸನಿಮಿಷಗಳು | ಶಿರೀಷ ಜೋಷಿ | ರೂ. 150.00 |
| 105. | ಕುವೆಂಪು ಕಾವ್ಯಯಾನ * | ಡಾ. ಬಿ.ಆರ್.ಸತ್ಯನಾರಾಯಣ | ರೂ. 200.00 |
| 106. | ಸಂಘರ್ಷ * | ಮಾಲತೇಶ ಸಿದ್ಧಮ್ಮನವರು | ರೂ. 50.00 |
| 107. | ಅಜ್ಜಿ ಹೇಳಿದ ಕಥೆಗಳು * | ಡಾ. ಅನಸೂಯದೇವಿ | ರೂ. 100.00 |
| 108. | ಭುವನದ ಬೆರಗು * | ತ್ರಿವೇಣಿ ಶಿವಕುಮಾರ್ | ರೂ. 150.00 |
| 109. | ಅಮ್ಮಿ * | ರಾಹು | ರೂ. 300.00 |
| 110. | ಪ್ರಕೃತಿ ಮತ್ತು ಪ್ರೀತಿ * | ಡಾ. ಅನಸೂಯದೇವಿ | ರೂ. 300.00 |
| 111. | ರಾಣಿ ಕಥೆಗಳು | ಡಾ. ವೀರಭದ್ರಗೌಡ | ರೂ. 150.00 |
| 112. | ಶತಪದಗಳ ಸುಳಿಯಲ್ಲಿ | ಮಹೇಶ ದೇಶಪಾಂಡೆ | ರೂ. 70.00 |
| 113. | ಪ್ರಾಚೀನ ಭಾರತದ ವೈದ್ಯ ವಿಜ್ಞಾನ * | ಡಾ. ಕವಿತಾ ಎಸ್.ಎಚ್. | ರೂ. 80.00 |
| 114. | ಜೋಲಿ ಲಾಲಿ (ಭಾಗ-2) * | ಜ್ಯೋತಿ ಗುರುಪ್ರಸಾದ್ | ರೂ. 250.00 |
| 115. | ನಮ್ಮ ಆರೋಗ್ಯ ನಮ್ಮ ಕೈಯಲ್ಲಿ | ಡಾ. ಲೀಲಾವತಿ ದೇವದಾಸ್ | ರೂ. 200.00 |
| 116. | ಬೇಂದ್ರೆ-ಶರೀಫರ ಕಾವ್ಯಾಯಾನ | ಸುನಾಥ ದೇಶಪಾಂಡೆ | ರೂ. 350.00 |
| 117. | ಪಡು-ಮೂಡು * | ಕೆ. ಕೇಶವಶರ್ಮ | ರೂ. 500.00 |
| 118. | ವಸಾಹತುಶಾಹಿ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 350.00 |
| 119. | ಸಾಂಸ್ಕೃತಿಕ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 350.00 |

120. ಸ್ತ್ರೀವಾದಿ ಪರಿಕಲ್ಪನೆಗಳು ಕೆ. ಕೇಶವಶರ್ಮ ರೂ. 350.00
121. ಸುಗಂಧ ಪುಷ್ಪ * ಹಾ.ಮ. ನಾಗಾರ್ಜುನ ರೂ. 175.00
122. ಸೆಕ್ಯೂಲರ್‌ವಾದ : ಬುಡ–ಬೇರು ರಾಹು ರೂ. 300.00
123. ಕವಿತೆಯ ಓದು ಪ್ರಭಾಕರ ಆಚಾರ್ಯ ರೂ. 150.00
124. ಆರನೆಯ ಹೆಂಡತಿಯ ಆತ್ಮಕಥೆ ರಾಹು ರೂ. 400.00
125. ಮೈ ಫಾದರ್ ಬಾಲಯ್ಯ ಡಾ. ರಾಜಣ್ಣ ತಗ್ಗಿ ರೂ. 180.00
126. ಪೀಠಾಧಿಯಪತಿಯ ಪತ್ನಿ ರಾಹು ರೂ. 350.00
127. ಹಾಡುವ ಹಕ್ಕಿಯ ಶೋಕಗೀತೆ ಡಾ. ಅಪ್ಪಗೆರೆ ಸೋಮಶೇಖರ್ ರೂ. 130.00
128. ವಿಮರ್ಶೆಯ ಪರಿಕಲ್ಪನೆಗಳು ಕೇಶವಶರ್ಮ ಕೆ. ರೂ. 500.00
129. ಯಾತ್ರಿಕನ ಕನಸು ರಾಜಣ್ಣ ತಗ್ಗಿ ರೂ. 125.00
130. ದಾಂಪತ್ಯ ನಿಷ್ಠೆ ಪರಿಕಲ್ಪನೆ ಬದಲಾಗುತ್ತಿದೆಯೇ? ಸುನಂದ
ಕಡಮೆ ರೂ. 160.00
131. ಕುಮಾರವ್ಯಾಸ ಭಾರತ ಓಂಕಾರಪ್ಪ ರೂ. 200.00
ಭಾಷಾ ವೈಜ್ಞಾನಿಕ ವಿಶ್ಲೇಷಣೆ
132. ನೋಯುವ ಹಲ್ಲಿಗೆ ಹೊರಳುವ ನಾಲಿಗೆ ಡಾ.ಹೆಚ್.ಎಸ್. ಅನುಪಮಾ ರೂ. 200.00
133. ತತ್ವಜ್ಞಾನದ ಪರಿಕಲ್ಪನೆಗಳು ಕೇಶವಶರ್ಮ ಕೆ. ರೂ. 500.00
134. ಬಹುರೂಪಿ ಭಾರತ ತ್ರಿವೇಣಿ ಶಿವಕುಮಾರ್ ರೂ. 250.00
135. ಮಾರ್ಕ್ಸ್‌ವಾದಿ ಪರಿಕಲ್ಪನೆಗಳು ಕೇಶವಶರ್ಮ ಕೆ. ರೂ. 400.00
133. ಹೊಸಪಕ್ಷಿ ರಾಗ ಜ್ಯೋತಿ ಗುರುಪ್ರಸಾದ್ ರೂ. 200.00
134. ತೇಲ್ನೋಟ ಕು.ಗೋ ರೂ. 150.00
135. ಆಟಗಳು ಪ್ರಕಾಶ್ ಕೆ. ನಾಡಿಗ್ ರೂ. 80.00
136. ಕನಸಿನೂರಿನ ಕಿಟ್ಟಣ್ಣ ಕೆ. ಪ್ರಭಾಕರನ್ ರೂ. 80.00
137. ನನ್ನ ದೃಷ್ಟಿಯಲ್ಲಿ ಉತ್ತಮ ಹಾಸ್ಯ ಕು.ಗೋ ರೂ. 80.00
138. ಒಂದು ನೂರು ವರ್ಷಗಳ ಏಕಾಂತ ಡಾ. ವಿಜಯಾ ಸುಬ್ಬರಾಜ್ ರೂ. 400.00
139. ಜೀವಸಿರಿ ವಸುಂಧರಾ ಭೂಪತಿ ರೂ. 150.00
140. ಅಲೆಮಾರಿ ಒಬ್ಬನ ಆತ್ಮಕತೆ..! ಡಾ॥ ಟಿ.ಡಿ.ರಾಜಣ್ಣ ತಗ್ಗಿ ರೂ. 200.00
141. ಶಾಲ್ಮಲಿ (ಹಿಂದಿ ಅನುವಾದ) ಡಾ॥ ವಿಜಯಾ ಸುಬ್ಬರಾಜ್ ರೂ. 160.00
142. ತೆರವು (ಮರಾಠಿ ಅನುವಾದ) ಚಂದ್ರಕಾಂತ ಪೋಕಳೆ ರೂ. 80.00
143. ಅನನ್ಯ (ಕನ್ನಡ ತಮಿಳು ಸಾಹಿತ್ಯ ಅವಲೋಕನ) ಡಾ॥ ತಮಿಳ್ ಸೆಲ್ವಿ ರೂ. 160.00
144. ಧರೆಹೊತ್ತಿ ಉರಿದಾಗ (ಸಂಪುಟ–1) ರಾಹು ರೂ. 400.00
(ಭಾರತ ವಿಭಜನೆಯ ದುರಂತ ಕಥೆಗಳು)
145. ಧರೆಹೊತ್ತಿ ಉರಿದಾಗ (ಸಂಪುಟ–2) ರಾಹು ರೂ. 400.00
(ಭಾರತ ವಿಭಜನೆಯ ದುರಂತ ಕಥೆಗಳು)
146. ಧರೆಹೊತ್ತಿ ಉರಿದಾಗ (ಸಂಪುಟ–3) ರಾಹು ರೂ. 400.00
(ಭಾರತ ವಿಭಜನೆಯ ದುರಂತ ಕಥೆಗಳು)
147 ದಯವಿಟ್ಟು ಮುಚ್ಚಬೇಡಿ ರಸ್ತೆಗುಂಡಿಗಳನ್ನು ಶಾಂತರಾಜ್ ಐತಾಳ್ ರೂ. 150.00
148 ಪಾತಾಳಕ್ಕೆ ಪಯಣ ಡಾ. ರಾಜಣ್ಣ ತಗ್ಗಿ ರೂ. 225.00
149 ಕೊಡಚಾದ್ರಿ (ಸಾಧಕರ ನುಡಿ ಚಿತ್ರಗಳು) ಲಕ್ಷ್ಮಣ ಕೊಡಸೆ ರೂ. 180.00
150 ಸುಡಗಾಡ ಕಾಯ ಡಾ. ಅನುಬೆಳ್ಳೆ ರೂ. 125.00
151. ಕರುಳ ತೆಪ್ಪದ ಮೇಲೆ ರಾಹು ರೂ. 400.00
(ಖುಷ್ವಂತ್‌ಸಿಂಗ್‌ರ ಟ್ರೈನ್ ಟೂ ಪಾಕಿಸ್ತಾನ ನಾಟಕ)ಚಿದಾನಂದ ಸಾಲಿ ರೂ. 60.00
152 ದೇವನೊಬ್ಬ ಬೇಕೆ ಡಾ. ಶೀಪರಮಟ್ಟಿ ರೂ. 150.00
153 ಮೊಪಾಸನ ಕಥೆಗಳು ಭಾಗ 1 ಡಾ. ಪಿ.ವಿ. ರಾಮಚಂದ್ರ ರೂ 450.00
154 ಮೊಪಾಸನ ಕಥೆಗಳು ಭಾಗ 2 ಡಾ. ಪಿ.ವಿ. ರಾಮಚಂದ್ರ ರೂ 450.00
155 ದಾಹ ಡಾ॥ ಟಿ.ಡಿ.ರಾಜಣ್ಣ ತಗ್ಗಿ ರೂ. 200.00
156 ಕತ್ತಲಲ್ಲಿ ಕೊಲೆ (MURDER IN THE DARK)ಡಾ. ನವೀನ್ ಹಳೇಮನೆ ರೂ. 80.00

| | | | |
|---|---|---|---|
| 157 | ಆಮೇನ್ – ದಮನಿತ ದೀದಿಯ ಆತ್ಮಕಥನ | ಸಿಸ್ಟರ್ ಜೆಸ್ಮಿ | ರೂ. 240.00 |
| 158 | ಬೆಸುಗೆಯ ಬಂಧನದಲ್ಲಿ | ಡಾ॥ ವಿಜಯಾ ಸುಬ್ಬರಾಜ್ | ರೂ. 350.00 |
| 159 | ಮಲೆಯಾಳದ ಪ್ರಸಿದ್ಧ ಪೆಣ್ ಕಥೆಗಳು | ಪಾರ್ವತಿ ಜಿ. ಐತಾಳ್ | ರೂ. 210.00 |
| 160 | ಭಯೋತ್ಪಾದಕ | ರಾಹು | ರೂ 225.00 |
| 161 | ಬೆಸುಗೆಯ ಬಂದನದಲ್ಲಿ | ಡಾ. ವಿಜಯಾ ಸುಬ್ಬರಾಜ್ | ರೂ. 350.00 |
| 162 | ಸಂಗೀತಲೋಕದ ಸವಿನೆನಪುಗಳು | ಶೀರೀಷ ಜೋಷಿ | ರೂ. 100.00 |
| 163 | ಜೀವನವೆನ್ನುವ ಅದ್ಭುತ! | ಕೆ. ಪ್ರಭಾಕರನ್ | ರೂ. 250.00 |
| 164. | ಮಾರ್ಕ್ಸ್‌ವಾದ ಮತ್ತು ಅನ್ಯವಾದಗಳು | ಕೇಶವಶರ್ಮ ಕೆ | ರೂ. 300.00 |
| 165 | ಕರುಣಾಳು, ಬಾ ಬೆಳಕೆ (FEVER) | ಅನಸೂಯದೇವಿ | ರೂ. 180.00 |
| 166. | ದಾಂಪತ್ಯ ಯೋಗ | ಡಾ. ನಾ ಮೊಗಸಾಲೆ | ರೂ. 180.00 |
| 167 | ಅಜೇಯ (ದ ಕೌಂಟ್ ಮಾಂಟೋ ಕ್ರಿಸ್ಟೊ) | ಡಾ. ರಾಜಣ್ಣ ತಗ್ಗಿ | ರೂ. 400.00 |
| 168 | ಸಂಗೀತಲೋಕದ ಸವಿನೆನಪುಗಳು | ಶಿರೀಷ ಜೋಶಿ | ರೂ. 100.00 |
| 169 | ಚಮತ್ಕಾರಿ ದೇಹ ವಿಸ್ಮಯಕಾರಿ ಮನಸು | ಡಾ. ಶೀಪರಮಟ್ಟಿ | ರೂ. 150.00 |
| 170 | ಕಸ್ತೂರಬಾ | ಡಾ. ಪ್ರಭಾಕರ್ ಎಂ ನಿಂಬರಗಿ | ರೂ 300.00 |
| 171 | ಇದು ವಿದಾಯವಲ್ಲ | ಪಾರ್ವತಿ ಜಿ. ಐತಾಳ್ | ರೂ. 160.00 |
| 172 | ಎಲ್ಲೇ ಮೀರಿ (N GUGI W THIONG 'O ) | ಡಾ. ಎಚ್.ಎಸ್. ನಾಗಭೂಷಣ್ | ರೂ. 200.00 |
| 173 | ಪ್ರಸಿದ್ಧ ಚೀನೀ ಕಥೆಗಳು | ಡಾ. ವಿಜಯಾ ಸುಬ್ಬರಾಜ್ | ರೂ. 230.00 |
| 174 | ಹಿಮ (ORAHAN PAMUK) | ಡಾ. ಕೆ.ಎಸ್. ವೈಶಾಲಿ | ರೂ. 550.00 |
| 175 | ಪ್ರೀತಿಯ ನಲವತ್ತು ನಿಯಮಗಳು (The Forty Rules Of Love) Elif Shafak | ಡಾ. ಮಮತಾ ಜಿ ಸಾಗರ | ರೂ. 450.00 |
| 176 | ಕುವೆಂಪು ಅವರ ಮಹಾಕಾವ್ಯ ಶ್ರೀ ರಾಮಾಯಣ ದರ್ಶನಂ – ಶ್ರೀದರ್ಶನ | ಶ್ರೀನಿವಾಸ ಕೃ. ದೇಸಾಯಿ | ರೂ. 150.00 |
| 177 | | | |

* ಪ್ರತಿಗಳು ಮುಗಿದಿವೆ

# ಡೋರಿಯನ್ ಗ್ರೇನ ಭಾವಚಿತ್ರ

THE PICTURE OF DORIAN GRAY

ಆಸ್ಕರ್ ವೈಲ್ಡ್‌ನ ಈ ಕಾದಂಬರಿಯ ಪ್ರಮುಖ ಪಾತ್ರಗಳ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಅನಾವರಣಗೊಳ್ಳುತ್ತವೆ. ಕಲೆ, ಸೌಂದರ್ಯ, ಕಲಾವಿದ, ಕಲೆಯ ವಸ್ತು ಮುಂತಾದವುಗಳ ಬಗ್ಗೆ ಸ್ವಚಿಂತನೆಯ ಪರಿಕಲ್ಪನೆಗಳು, ಈ ಕೃತಿಯ ಪ್ರಸ್ತಾವನೆಯ ಭಾಗದಲ್ಲಿ, ಹೇಳಿಕೆಗಳ ರೂಪದಲ್ಲಿ ದಾಖಲಾಗಿರುವುದರಿಂದ, ಕೃತಿಯ ಒಳಗಿನ ಹೂರಣದ ದೃಷ್ಟಿ, ಧೋರಣೆಗಳೂ ಓದುಗರಿಗೆ ಅನಾಯಾಸವಾಗಿ ಗ್ರಹಿಸಲು ಸಾಧ್ಯವಿದೆ. ಕೃತಿಯ ಕೇಂದ್ರ ಪಾತ್ರವಾದ ಡೋರಿಯನ್ ಮತ್ತು ಕಲಾವಿದ ಬೇಸಿಲ್ ಮತ್ತು ಈ ಎರಡೂ ಪಾತ್ರಗಳ ನಡುವಿನ ಸೇತುವೆಯಂತಿರುವ ಲಾರ್ಡ್ ಹೆನ್ರಿ ಈ ಮೂವರ ನಡುವಿನ ಸಂಭಾಷಣೆ ಚರ್ಚೆ, ತರ್ಕ ಇತ್ಯಾದಿಗಳಿಂದ ಕಲೆಯನ್ನು ಸ್ವೀಕರಿಸುವ, ನಿರಾಕರಿಸುವ, ಮತ್ತು ಅದಕ್ಕೆ ಅವರವರದೇ ಆಗ ಸಮರ್ಥನೆಯ ಭಿನ್ನ ನೆಲೆಗಳನ್ನು ಗುರುತಿಸುವುದಕ್ಕೆ ಸಹಕಾರಿಯಾಗಿವೆ.

ವೈಲ್ಡ್‌ನ ದೃಷ್ಟಿಯಲ್ಲಿ, ಕಲಾವಿದ ಸುಂದರ ವಸ್ತುಗಳ ಸೃಷ್ಟಿಕರ್ತ ಮತ್ತು ಕಲೆಯ ಉದ್ದೇಶ ಕಲೆಯ ಅನಾವರಣವೇ ಹೊರತು ಕಲಾವಿದನನ್ನಲ್ಲ. ಸುಂದರವಾದ ವಸ್ತುಗಳಲ್ಲಿ ಸುಂದರವಾದ ಅರ್ಥಗಳನ್ನು ಗ್ರಹಿಸಬಲ್ಲವನೇ ನಿಜವಾದ ಸಂಸ್ಕಾರಿ. ಯಾವ ಕಲಾವಿದನೂ ಅಸ್ವಸ್ಥ, ವಿಕೃತ ಮನಃಸ್ಥಿತಿಯವನಾಗಿರುವುದಿಲ್ಲ. ಕಡೆಯದಾಗಿ ಹೇಳುವುದಾದರೆ, ವ್ಯಕ್ತಿಯ ನೈತಿಕ ಬದುಕು ಅವನ ಕಲಾವಸ್ತು ಅಥವಾ ವಿಷಯದ ಭಾಗವಾಗಿರುತ್ತದೆಯೇ ಹೊರತು, ಕಲೆಯ ನೈತಿಕತೆ ಅಲ್ಲ. ಕಲೆಯ ನೈತಿಕತೆ ನಿಹಿತವಾಗಿರುವುದು ಅಪರಿಪೂರ್ಣ ಮಾಧ್ಯಮವನ್ನು ಸಮರ್ಪಕವಾಗಿ ಪರಿಪೂರ್ಣವಾಗಿ ಬಳಸಿಕೊಳ್ಳುವುದರಲ್ಲಿದೆ. ಎಂಬೆಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ಈ ಕಾದಂಬರಿ ಸೃಷ್ಟಿಯಾಗಿದೆ.

ಈ ಕಾದಂಬರಿಯಲ್ಲಿ ರೋಚಕತೆಯೂ ಇದೆ, ದುರಂತವೂ ಇದೆ. ಮುಗ್ಧತೆಯ ಮುಖವಾಡದ ಆಳದಲ್ಲಿ ಹುದುಗಿರಬಹುದಾದ ವಿಕೃತ ಆತ್ಮದ ದರ್ಶನವನ್ನು ಪಡೆದವನಿಗೆ, ತನ್ನ ಭಾವಚಿತ್ರವೇ ತನ್ನ ಆತ್ಮದ ಅಭಿವ್ಯಕ್ತ ರೂಪವೆಂದು ಭಾವಿಸಿದವನಿಗೆ ಅಂಥದ್ದನ್ನು ಸೃಷ್ಟಿಸಿದ ಕಲಾವಿದನನ್ನೇ ಕೊಲ್ಲುವ ಸಾಹಸಕ್ಕೆ ದೂಡುತ್ತದೆ. ಆದರೆ ಅವನಲ್ಲಿನ ಪಾಪಪ್ರಜ್ಞೆ ವಿವೇಕಗಳು ಕಡೆಕಡೆಗೆ ಜಾಗೃತವಾದಾಗ ತಾನು ಬದುಕಿರುವುದೇ ಸಾಧ್ಯವಿಲ್ಲವೆಂದು ಆತ್ಮಹತ್ಯೆಗೆ ಮುಂದಾಗುತ್ತಾನೆ.

ಇಡೀ ಕತೆ ಓದುಗರನ್ನು ಗಂಭೀರ ಚಿಂತನೆಗೆ ಒಳಗಾಗಿಸುತ್ತದೆ. ಕಾದಂಬರಿ ವಸ್ತುವಿನ ಸಂಕೀರ್ಣತೆ, ಅದರ ಹೊಸತನಗಳು ಜಗತ್ಪ್ರಸಿದ್ಧ ಕೃತಿಯಾಗಿಸಿದೆ ಎನ್ನುವುದರಲ್ಲಿ ಸಂಶಯವಿಲ್ಲ.

₹160

ಪುಸ್ತಕ

ISBN 938155775-6

9789381557754 92